# ದಕ್ಷಿಣ ಗದಗ ಜಿಲ್ಲೆಯ ಶಾಸನಗಳು: ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ)


ಸಂಶೋಧಕರು

ಕೆ.ಕೊಟ್ರೂರಯ್ಯ

ಮಾರ್ಗದರ್ಶಕರು

ಡಾ.ಡಿ.ವಿ.ಪರಮಶಿವಮೂರ್ತಿ

ಪ್ರಾಧ್ಯಾಪಕರು









ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೨

491

# ದಕ್ಷಿಣ ಗದಗ ಜಿಲ್ಲೆಯ ಶಾಸನಗಳು: ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ)

ಸಂಶೋಧಕರು

ಕೆ.ಕೊಟ್ರೂರಯ್ಯ

ಮಾರ್ಗದರ್ಶಕರು

ಡಾ.ಡಿ.ವಿ.ಪರಮಶಿವಮೂರ್ತಿ

ಪ್ರಾಧ್ಯಾಪಕರು




ಶಾಸನಶಾಸ್ತ್ರ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೨

# ಸಂಶೋಧಕರ ಪ್ರಮಾಣಪತ್ರ

**ದಕ್ಷಿಣ ಗದಗ ಜಿಲ್ಲೆಯ ಶಾಸನಗಳು : ಒಂದು ಅಧ್ಯಯನ** ಎಂಬ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಡಾ.ಡಿ.ವಿ.ಪರಮಶಿವಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಬಿಡಿಯಾಗಿ ಅಥವಾ ಇಡಿಯಾಗಿ ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಕೆ.ಕೊಟ್ರೂರಯ್ಯ
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: ೧೬/೦೫/೨೦೧೨
ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ಪ್ರಮಾಣಪತ್ರ

ಕೆ.ಕೊಟ್ರೂರಯ್ಯ ಅವರು **ದಕ್ಷಿಣ ಗದಗ ಜಿಲ್ಲೆಯ ಶಾಸನಗಳು : ಒಂದು ಅಧ್ಯಯನ** ಎಂಬ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ, ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಬಿಡಿಯಾಗಿ ಅಥವಾ ಇಡಿಯಾಗಿ ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಡಾ.ಡಿ.ವಿ.ಪರಮಶಿವಮೂರ್ತಿ
ಪ್ರಾಧ್ಯಾಪಕರು

ದಿನಾಂಕ: 19/5/12
ಸ್ಥಳ : ವಿದ್ಯಾರಣ್ಯ

# ಅರಿಕೆ

**ದಕ್ಷಿಣ ಗದಗ ಜಿಲ್ಲೆಯ ಶಾಸನಗಳು : ಒಂದು ಅಧ್ಯಯನ** ಎಂಬ ಈ ನನ್ನ ಮಹಾಪ್ರಬಂಧದ ಅಧ್ಯಯನಕ್ಕೆ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದಲ್ಲಿ ಅವಕಾಶ ಕಲ್ಪಿಸಿಕೊಟ್ಟ ಹಿಂದಿನ ಕುಲಪತಿಗಳಾದ ಡಾ॥ಬಿ.ಎ.ವಿವೇಕರೈ, ಡಾ॥ಕೆ.ವಿ.ನಾರಾಯಣ, ಡಾ॥ಎ.ಮುರಿಗೆಪ್ಪ ಅವರಿಗೂ ಈಗಿನ ಪ್ರಭಾರ ಕುಲಪತಿಗಳಾದ ಡಾ॥ಹಿ.ಚಿ.ಬೋರಲಿಂಗಯ್ಯ ಅವರಿಗೂ ಹಿಂದಿನ ಕುಲಸಚಿವರಾದ ಡಾ॥ಕರೀಗೌಡ ಬೀಚನಹಳ್ಳಿ ಅವರಿಗೂ, ಆತ್ಮೀಯವಾಗಿ ಪ್ರೋತ್ಸಾಹಿಸಿದ ಇಂದಿನ ಕುಲಸಚಿವರಾದ ಡಾ॥ಮಂಜುನಾಥ ಬೇವಿನಕಟ್ಟೆ ಅವರಿಗೂ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ॥ಎಫ್.ಟಿ.ಹಳ್ಳಿಕೇರಿ ಅವರಿಗೂ ಕೃತಜ್ಞತೆಗಳು.

ನನ್ನ ಪ್ರತಿಯೊಂದು ಶೈಕ್ಷಣಿಕ ಪ್ರಗತಿಗೆ ಸ್ಫೂರ್ತಿ ನೀಡಿ ನನ್ನ ಸಂಶೋಧನೆಗೆ ದಿವ್ಯಶಕ್ತಿ ನೀಡಿದ ನನ್ನ ಕುಟುಂಬದ ಸರ್ವ ಸದಸ್ಯರಿಗೂ, ಸ್ನೇಹಿತರಿಗೂ, ವೃತ್ತಿ ಬಾಂಧವರಿಗೂ ಕೃತಜ್ಞತೆಯಿಂದ ನಮನಗಳನ್ನು ಸಲ್ಲಿಸುತ್ತೇನೆ.

ನನ್ನ ಮಾರ್ಗದರ್ಶಕರಾದ ಡಾ॥ಡಿ.ವಿ.ಪರಮಶಿವಮೂರ್ತಿ ಅವರು ಶಾಸನಗಳ ಸಂಶೋಧನಾ ಕಾರ್ಯದಲ್ಲಿ ಸರ್ವವಿಧದಿಂದ ಮಾರ್ಗದರ್ಶನ ನೀಡಿದ್ದಾರೆ. ಶಾಸನಗಳ ಬಗ್ಗೆ ಆಳವಾದ ಜ್ಞಾನವನ್ನು ಹೊಂದಿರುವ ಅವರು, ಶಾಸನಗಳ ಕ್ಷೇತ್ರದಲ್ಲಿ ಸದಾ ಅಧ್ಯಯನ ಹಾಗೂ ಚಿಂತನೆಗೆ ನನ್ನನ್ನು ತೊಡಗಿಸಿದ್ದಾರೆ. ನನ್ನ ಈ ಪ್ರಬಂಧವನ್ನು ಅಡಿಯಿಂದ ಮುಡಿಯವರೆಗೂ ಆಮೂಲಾಗ್ರವಾಗಿ ಪರಿಶೀಲಿಸಿ ಸೂಕ್ತ ಸಲಹೆ ಸೂಚನೆ ನೀಡಿದ್ದಾರೆ. ಕ್ಷೇತ್ರಕಾರ್ಯದಲ್ಲಿ ಸದಾಕಾಲ ನನ್ನ ಜೊತೆಗೆ ಇದ್ದು ಮಾರ್ಗದರ್ಶನ ಮಾಡಿದ್ದಾರೆ. ನನ್ನ ಪ್ರತಿಯೊಂದು ಅಧ್ಯಯನವನ್ನು ಅಕ್ಷರಶಃ ತಿದ್ದುವಲ್ಲಿ, ತಪ್ಪಿದಲ್ಲಿ ಎಚ್ಚರಿಸಿ, ನನ್ನ ಸಂಶೋಧನೆಯನ್ನು ಪೂರ್ಣಗೊಳಿಸುವಲ್ಲಿ ಅವರ ಪಾತ್ರ ತುಂಬಾ ಹಿರಿದಾಗಿದೆ. ಅವರ ಮಾತೃವಾತ್ಸಲ್ಯದ, ವಿಶಾಲ ಹೃದಯದ ಮಾರ್ಗದರ್ಶನಕ್ಕೆ ನಾನು ಎಂದೆಂದಿಗೂ ಚಿರಋಣಿಯಾಗಿದ್ದೇನೆ.

ಶಾಸನಶಾಸ್ತ್ರ ವಿಭಾಗದ ನಿವೃತ್ತ ಪ್ರಾಧ್ಯಾಪಕರಾದ ಡಾ॥ದೇವರಕೊಂಡಾರೆಡ್ಡಿ ಅವರಿಗೂ ಮತ್ತು ಅನೇಕ ರೀತಿಯಲ್ಲಿ ಸಹಕರಿಸಿರುವ ಈಗಿನ ಮುಖ್ಯಸ್ಥರಾದ ಡಾ.ಕೆ.ಜಿ.ಭಟ್‌ಸೂರಿ ಅವರಿಗೂ, ಡಾ.ಕಲವೀರ ಮನ್ವಾಚಾರ್ ಹಾಗೂ ಡಾ.ಎಂ.ಕೊಟ್ರೇಶ್ ಅವರಿಗೂ ನನ್ನ ಸಂಶೋಧನೆಯಲ್ಲಿ ಸಹಕರಿಸಿದ ದಿ॥ಮಹಾಲಿಂಗ ಯಾಳಗಿ, ಮುಂಡರಗಿಯ ಕೆ.ಆರ್.ಬೆಲ್ಲದ ಮಹಾವಿದ್ಯಾಲಯದ ಪ್ರಾಂಶುಪಾಲರಾದ

ಶ್ರೀ.ಎಸ್.ಬಿ.ಕರಿಭರಮಗೌಡರ ಹಾಗೂ ನನ್ನ ಸಂಶೋಧನೆಗೆ ಒಪ್ಪಿಗೆ ನೀಡಿದ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೂ ನನ್ನ ಹೃತ್ಪೂರ್ವಕ ನಮನಗಳು.

ನನ್ನ ಸಂಶೋಧನೆಯಲ್ಲಿ ಅನೇಕ ವಿದ್ವಾಂಸರ ಕೃತಿಗಳ, ಲೇಖನಗಳ ಕೆಲವು ಆಯ್ದ ಭಾಗಗಳನ್ನು ಉದ್ಧರಿಸಿದ್ದೇನೆ. ಆ ಎಲ್ಲ ವಿದ್ವಾಂಸರಿಗೂ ನನ್ನ ನಮನಗಳು. ಎಲ್ಲಕ್ಕೂ ಹೆಚ್ಚಾಗಿ ನನ್ನ ಮಾರ್ಗದರ್ಶಕರ ಧರ್ಮಪತ್ನಿಯಾದ ಶ್ರೀಮತಿ ಶೋಭಾರವರು ನನ್ನ ಸಂಶೋಧನೆ ಸಮಯದಲ್ಲಿ ಮನೆಗೆ ಹೋದಾಗ ಮಾತೃಹೃದಯದಿಂದ ಸಹಾಯ-ಸಹಕಾರ ನೀಡಿದ್ದಾರೆ. ಆ ದಂಪತಿಗಳೀರ್ವರಿಗೂ ಹಾಗೂ ಅವರ ಮಕ್ಕಳಾದ ಗುಣನಿಧಿ, ಸಂಯಮಿ ಅವರಿಗೂ ನನ್ನ ನಮನಗಳು.

ನನ್ನ ಅಧ್ಯಯನದ ಕಾರ್ಯದಲ್ಲಿ ನಿರಂತರ ಜೊತೆಗಿದ್ದು, ಪದೇಪದೇ ಎಲ್ಲಿಗೆ ಬಂದಿದೆ ನಿಮ್ಮ ಸಂಶೋಧನೆ? ಎಂದು ಕೇಳುತ್ತಾ, ಸಹಾಯ-ಸಹಕಾರ ನೀಡಿದ ಹಾಗೂ ಸ್ಫೂರ್ತಿ ನೀಡಿದ ನನ್ನ ಸ್ನೇಹಿತರಾದ ಶ್ರೀ.ಪಿ.ಎಂ.ಲಾಂಡೆ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ರೂಪಾ, ಡಾ॥ನಿಂಗು.ಸೊಲಗಿ, ಶ್ರೀ.ರವಿ.ದೇವರಡ್ಡಿ ಸಹೋದ್ಯೋಗಿಗಳಾದ ಶ್ರೀ.ಕೆ.ಚಂದ್ರಶೇಖರ, ಶ್ರೀ.ಬಿ.ಗಣೇಶ, ಶ್ರೀ.ಎಚ್.ಕೆ.ಲೋಕೇಶ, ಶ್ರೀ.ಹೇಮಂತರಾಜು, ಶ್ರೀ.ಎಂ.ಬಿ..ಕೆಂಚನಗೌಡ್ರ, ಶ್ರೀ.ಬಿ.ಆಯ್.ಹಿರೇಹಾಳ, ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ಎಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

ಜೀವನದ ಅನೇಕ ಸಂಕಷ್ಟಗಳ ಮಧ್ಯ ತಮ್ಮ ಬದುಕನ್ನು ಶ್ರೀಗಂಧದಂತೆ ತೇಯ್ದು, ನನ್ನನ್ನು ವಿದ್ಯಾವಂತನನ್ನಾಗಿ ಮಾಡಿ, ಸಂಶೋಧನೆಯ ಕಾರ್ಯಕ್ಕೆ ನನ್ನನ್ನು ಹುರಿದುಂಬಿಸಿ, ಆಶೀರ್ವದಿಸಿದವರು ನನ್ನ ಪೂಜ್ಯ ತಂದೆ-ತಾಯಿಯವರಾದ ಶ್ರೀ.ಕಾಮಯ್ಯ ಹಾಗೂ ಶ್ರೀಮತಿ ರತ್ನಮ್ಮನವರಿಗೆ ನನ್ನ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ. ಅಜ್ಜ-ಅಜ್ಜಿಯರಾದ ಶ್ರೀ.ಚನ್ನಬಸಪ್ಪ ಮತ್ತು ಶ್ರೀಮತಿ ಚನ್ನಬಸಮ್ಮ, ಅಕ್ಕ-ಮಾವಂದಿರಾದ ಶ್ರೀಮತಿ ಗಿರಿಜಾ-ಮರುಳಸಿದ್ಧಪ್ಪ ಹಾಗೂ ಶ್ರೀಮತಿ.ಎಸ್.ಎಚ್.ಶೋಭಾ-ಕಾಂತರಾಜ, ಸಹೋದರನಾದ ಮೃತ್ಯುಂಜಯ, ಪೂಜ್ಯ ಮಾವನವರಾದ ಶ್ರೀಎಸ್.ಬಯಲಪ್ಪನವರು ಹಾಗೂ ಅತ್ತೆಯವರಾದ ಶ್ರೀಮತಿ ಗಂಗಮ್ಮನವರು ಹಾಗೂ ಅಳಿಯಂದಿರಾದ ಶ್ರೀ.ರವಿಶಂಕರ್, ರವಿ, ಕಿರಣ, ನನ್ನ ಚಿಕ್ಕಮ್ಮ-ಚಿಕ್ಕಪ್ಪಂದಿರು ಹಾಗೂ ಅವರ ಕುಟುಂಬ ವರ್ಗದವರೆಲ್ಲರಿಗೂ ನನ್ನ ನಮನಗಳನ್ನು ಸಲ್ಲಿಸುವೆ.

**ದಕ್ಷಿಣ ಗದಗ ಜಿಲ್ಲೆಯ ಶಾಸನಗಳು : ಒಂದು ಅಧ್ಯಯನ** ಎಂಬ ವಿಷಯದ ಮೇಲೆ ಸಂಶೋಧನೆ ಪ್ರಾರಂಭಿಸಿದಂದಿನಿಂದ ಇಲ್ಲಿಯವರೆಗೆ ನನ್ನ ಬರವಣಿಗೆಗೆ ಒತ್ತಾಸೆ ನೀಡಿ, ಪ್ರತಿ ಗಳಿಗೆಯಲ್ಲಿಯೂ ಬೆನ್ನೆಲುಬಾಗಿ ನಿಂತು, ಎಲ್ಲ ಕಾರ್ಯಗಳಲ್ಲಿಯೂ ಸಹಕಾರ ನೀಡಿದ್ದಲ್ಲದೇ, ಅಕ್ಷರಗಳನ್ನು ಸಂಯೋಜಿಸುವ ಕಾರ್ಯದಲ್ಲಿ ಸಂಪೂರ್ಣ ತಮ್ಮನ್ನು ತೊಡಗಿಸಿಕೊಂಡು ಸಹಕರಿಸಿದ ನನ್ನ ಧರ್ಮಪತ್ನಿಯಾದ

ಶ್ರೀಮತಿ.ಬಿ.ಗೀತಾ. ಮತ್ತು ಈ ಕಾರ್ಯದಲ್ಲಿ ತನ್ನ ತುಂಟುತನದಿಂದ ಉತ್ಸಾಹವನ್ನು ಹೆಚ್ಚಿಸುತ್ತಿದ್ದ ನಮ್ಮ ಮುದ್ದು ಮಗಳಾದ ಕುಮಾರಿ.ಚಿನ್ನಾಂಬಿಕಾಳಿಗೂ ನನ್ನ ಕೃತಜ್ಞತೆಗಳು.

**ಕೆ.ಕೊಟ್ಟೂರಯ್ಯ**

## ಪರಿವಿಡಿ

೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಆಕರಗಳು

## ಪ್ರವೇಶ

ಕರ್ನಾಟಕದಲ್ಲಿ ಕ್ರಿ.ಪೂ.೩೦೦ ರಿಂದಲೂ ಶಾಸನಗಳು ದೊರೆಯುತ್ತವೆ. ಈವರೆಗೆ ಅಶೋಕನ ಶಾಸನಗಳು ನಮಗೆ ದೊರೆತ ಅತ್ಯಂತ ಪ್ರಾಚೀನ ಶಾಸನಗಳಾಗಿವೆ. ನಂತರ ಆಳ್ವಿಕೆ ನಡೆಸಿದ ಅರಸರುಗಳೂ ಸಹ ಅಶೋಕನಂತೆಯೇ ತಮ್ಮ ವಿಚಾರಗಳನ್ನು ಶಾಸನಗಳಲ್ಲಿ ಬರೆಸುತ್ತಾ ಬಂದರು. ಮೊದಲಿಗೆ ಪ್ರಾಕೃತ ಮತ್ತು ಸಂಸ್ಕೃತ ಭಾಷೆಯಲ್ಲಿದ್ದ ಶಾಸನಗಳು ಕಾಲಕ್ರಮೇಣ ಪೂರ್ಣವಾಗಿ ಕನ್ನಡ ಭಾಷೆಯತ್ತ ತಿರುಗಿದವು. ಕ್ರಿ.ಶ.೪೫೦ರ ಹಲ್ಮಿಡಿ ಶಾಸನ ಮೊದಲ ಕನ್ನಡ ಶಾಸನವೆಂದು ಹೇಳಿದರೂ ಸಹ ಇಲ್ಲಿ ಸಂಸ್ಕೃತದ ಪ್ರಾಬಲ್ಯ ಬಹಳವಾಗಿಯೇ ಇದೆ. ಕ್ರಿ.ಶ.೯ನೇ ಶತಮಾನದ ನಂತರ ಕನ್ನಡದ ಶಾಸನಗಳು ಹೆಚ್ಚು ಸಂಖ್ಯೆಯಲ್ಲಿ ರಚನೆಯಾಗಲು ಪ್ರಾರಂಭವಾದವು. ಕ್ರಿ.ಶ.೧೦-೧೧ನೇ ಶತಮಾನದ ನಂತರ ಕಲ್ಯಾಣದ ಚಾಲುಕ್ಯರ ಕಾಲವನ್ನು **'ಶಾಸನಗಳ ಸುವರ್ಣ ಯುಗ'**ವೆಂದರೆ ತಪ್ಪಾಗಲಾರದು.

ನಮ್ಮ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಬೇಕಾದರೆ ಅದಕ್ಕೆ ಸಂಬಂಧಪಟ್ಟ ಆಕರಗಳು ಬಹಳ ಮುಖ್ಯವಾಗುತ್ತವೆ. ಅದರಲ್ಲೂ ನಮ್ಮ ಪೂರ್ವಕಾಲದ ಸಂಸ್ಕೃತಿಯನ್ನು ತಿಳಿಯಬೇಕಾದರೆ ಆಶ್ರಯಿಸಬೇಕಾದ ಆಕರಗಳಲ್ಲಿ ಶಾಸನಾಕರಗಳು ಬಹಳ ಮುಖ್ಯವಾಗುತ್ತವೆ.

ಕರ್ನಾಟಕದ ಸಾಂಸ್ಕೃತಿಕ ಪರಂಪರೆಗೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ಈಗ ರಚನೆಗೊಂಡಿರುವ ಇತಿಹಾಸ, ಇದುವರೆಗೆ ದೊರೆತ ಮೂಲ ಆಕರಗಳಾದ ಶಾಸನಗಳು, ಐತಿಹಾಸಿಕ ಸ್ಮಾರಕಗಳು, ವಿದೇಶಿ ಪ್ರವಾಸಿಗರ ದಿನಚರಿಗಳು, ಹಸ್ತಪ್ರತಿಗಳು, ಪ್ರಕಟಿತ ಸಾಹಿತ್ಯ ಕೃತಿಗಳನ್ನು ಅವಲಂಬಿಸಿವೆ. ಇಷ್ಟಾದರೂ ಸಹ ನಾವು ಹಲವಾರು ವಿಷಯಗಳನ್ನು ಸಂಪೂರ್ಣವಾಗಿ ತಿಳಿಯುವಲ್ಲಿ

ವಿಫಲರಾಗಿದ್ದೇವೆ. ಪ್ರಾದೇಶಿಕ ಇತಿಹಾಸವನ್ನೂ ಒಳಗೊಂಡಂತೆ ಕರ್ನಾಟಕದ ಸಮಗ್ರವಾದ ಇತಿಹಾಸದ ರಚನೆ ಈವರೆಗೆ ನಡೆದಿಲ್ಲ. ಇತಿಹಾಸ ರಚನೆಗೆ ದಾಖಲೆಗಳಾದ ಹಸ್ತಪ್ರತಿ, ಶಾಸನಗಳು ಮುಂತಾದವು ಇನ್ನೂ ಹಲವಾರು ಮೂಲಗಳಿಂದ ಸಂಪೂರ್ಣ ಶೋಧನೆಯಾಗಿ ಪ್ರಕಟವಾಗಬೇಕಿದೆ. ಹಾಗೆ ಪ್ರಕಟವಾದ ಆಕರಗಳನ್ನು ವಿಶ್ಲೇಷಿಸುವ ಕೆಲಸ ಇನ್ನುಮುಂದೆ ಆಗಬೇಕಿದೆ. ಇತ್ತೀಚೆಗೆ ಆ ರೀತಿಯ ವಿಶ್ಲೇಷಣಾತ್ಮಕ ಕಾರ್ಯ ನಡೆಯುತ್ತಿದ್ದು ಈ ರೀತಿಯ ಕಾರ್ಯ ಇನ್ನೂ ವ್ಯಾಪಕವಾಗಬೇಕಿದೆ.

ಒಂದು ನಾಡಿನ ಚರಿತ್ರೆಯನ್ನು ರಚಿಸುವಲ್ಲಿ ಶಾಸನಗಳಷ್ಟು ಅತಿ ವಿಶ್ವಾಸದ ದಾಖಲೆಗಳು ಮತ್ತಾವುವೂ ಇಲ್ಲ. ಆದರೆ ನಮ್ಮ ಹಿರಿಯ ಇತಿಹಾಸಕಾರರು ಶಾಸನಗಳಲ್ಲಿ ಉಕ್ತವಾಗಿರುವ ಐತಿಹಾಸಿಕ ಘಟನೆಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡರೆ ವಿನಃ ಅದರಲ್ಲಿ ನಮ್ಮ ಜನರ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಅಂಶಗಳನ್ನು ಅಷ್ಟಾಗಿ ಪರಿಗಣಿಸಲಿಲ್ಲ. ಉದಾಹರಣೆಗೆ ಕನ್ನಡದ ಮೊಟ್ಟ ಮೊದಲ ಶಾಸನ ಹಲ್ಮಿಡಿ ಶಾಸನ. ಅದರಲ್ಲಿ ನಮ್ಮ ಇತಿಹಾಸಕಾರರು ಕಾಕುಸ್ಥವರ್ಮನ ಕಾಲ, ಆಡಳಿತ ಮುಂತಾದ ವಿಚಾರಗಳ ಬಗ್ಗೆ ತಿಳಿಸಿದರೇ ಹೊರತು ಅಲ್ಲಿ ಒಬ್ಬ ವೀರಭಟನಿಗೆ ಸಿಕ್ಕಂತಹ ಗೌರವಗಳ ಬಗ್ಗೆ ಹೆಚ್ಚು ಚರ್ಚೆ ನಡೆಸಲಿಲ್ಲ. ಅಂದರೆ ಬಾಳ್ಗಚ್ಚುವಾಗಿ ಒಬ್ಬ ಉನ್ನತ ಅಧಿಕಾರಿ ತನ್ನ ಕೈ ಕೆಳಗಿನ ವೀರನೊಬ್ಬನ ಹೋರಾಟವನ್ನು ಮೆಚ್ಚಿ ರಕ್ತಸಿಕ್ತವಾದ ಅವನ ಕತ್ತಿಯನ್ನು ಸಭಾಸದರ ಎದುರಿನಲ್ಲಿ ತೊಳೆದು ಅವನಿಗೆ ದಾನ ಕೊಡುತ್ತಾನೆ. ಇಲ್ಲಿ ನಮ್ಮ ದೇಶಕ್ಕಾಗಿ ಪ್ರಾಣವನ್ನು ಮುಡುಪಿಟ್ಟವರಿಗೆ ನಮ್ಮ ಜನರು ಯಾವ ರೀತಿ ಗೌರವಿಸುತ್ತಿದ್ದರು ಎಂಬುದನ್ನು ನಾವು ನೋಡುತ್ತೇವೆ. ಇಂತಹ ಅನೇಕ ವಿಷಯಗಳು ಶಾಸನ ಆಕರಗಳಲ್ಲಿ ಅಡಗಿವೆ. ನಮ್ಮ ಇತಿಹಾಸ ಕೇವಲ ರಾಜ ಮಹಾರಾಜರದಲ್ಲ. ಒಂದು ನಾಡಿನ ಬೆಳವಣಿಗೆಗೆ ರಕ್ತ ಹರಿಸಿದ ಸಾಮಾನ್ಯ ಜನರ ಬದುಕಿನ ಅಂಶಗಳೂ ನಮ್ಮ ಇತಿಹಾಸದಲ್ಲಿ ಸೇರಬೇಕಾಗುತ್ತದೆ. ಆಗ ಅದು ನಿಜವಾದ ಇತಿಹಾಸವಾಗುತ್ತದೆ.

**ಅಧ್ಯಯನದ ಉದ್ದೇಶ**

ಕರ್ನಾಟಕದ ಪ್ರಾಚೀನ ಜನವಸತಿಯ ನೆಲೆಗಳನ್ನು ಹೊಂದಿರುವ ಪ್ರದೇಶಗಳಲ್ಲಿ ಗದಗ ಜಿಲ್ಲೆಯೂ ಒಂದಾಗಿದೆ. ಈ ಜಿಲ್ಲೆಯ ಬಹುತೇಕ ಗ್ರಾಮಗಳು ಕನಿಷ್ಠ ಒಂದು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿವೆ. ಈ ಜಿಲ್ಲೆಯ ಯಾವ ಗ್ರಾಮಗಳಿಗೆ ಹೋದರೂ ಅನೇಕ ಶಾಸನಗಳು, ಶಿಲ್ಪಗಳು ಮತ್ತು ಪ್ರಾಚೀನವಾದ ಹಾಗೂ ಶಿಥಿಲವಾದ ದೇವಾಲಯಗಳನ್ನು ಕಾಣಬಹುದಾಗಿದೆ. ಶಾತವಾಹನರಿಂದ ಮೊದಲ್ಗೊಂಡು ಬದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ಯಾದವ, ಹೊಯ್ಸಳ, ವಿಜಯನಗರ ಹೀಗೆ ಅನೇಕ ಪ್ರಮುಖ ರಾಜಮನೆತನಗಳ ಶಾಸನಗಳು ಗದಗ ಜಿಲ್ಲೆಯಾದ್ಯಂತ ಹರಡಿವೆ. ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲದೆ ವೈವಿಧ್ಯತೆಯ ದೃಷ್ಟಿಯಿಂದಲೂ ಇಲ್ಲಿನ ಶಾಸನಗಳು ಗಮನಸೆಳೆಯುತ್ತವೆ. ಜೈನ, ಶೈವ, ವೈಷ್ಣವ, ವೀರಶೈವಧರ್ಮದ ದಾನಶಾಸನಗಳು,

ವೀರಗಲ್ಲುಗಳು, ಮಹಾಸತಿಕಲ್ಲುಗಳು, ನಿಷಧಿಕಲ್ಲುಗಳು, ಹೀಗೆ ನಾನಾ ಪ್ರಕಾರದ ಶಾಸನಗಳಿವೆ. ಶಾಸನಸಾಹಿತ್ಯವೂ ಕೂಡ ತಿರುಳ್ಗನ್ನಡದ ಕಂಪನ್ನು ಸೂಸುತ್ತಿವೆ.

ಅಲ್ಲದೆ ಈ ಜಿಲ್ಲೆಯ ಅನೇಕ ಗ್ರಾಮಗಳು ಉದಾಹರಣೆಗೆ ಮೇವುಂಡಿ, ಬೂದಿಹಾಳ, ಚಿಂಚಲಿ, ಮುಳಗುಂದ, ಲಕ್ಷ್ಮೇಶ್ವರ, ಬೆಳ್ಳಟ್ಟಿ, ಮೊದಲಾದ ಸ್ಥಳಗಳಲ್ಲಿ ಪೂರ್ವೇತಿಹಾಸ ಕಾಲದ ಮಾನವನ ಅವಶೇಷಗಳು, ವಸತಿ ನೆಲೆಗಳು ಪತ್ತೆಯಾಗಿವೆ.

ಕರ್ನಾಟಕದಲ್ಲಿ ಇತರ ಶಿಸ್ತುಗಳಂತೆಯೆ ಶಾಸನಾಧ್ಯಯನವೂ ಕೂಡ ವಿದೇಶಿಯ ವಿದ್ವಾಂಸರಿಂದಲೇ ಆರಂಭಗೊಂಡಿದೆ. ಇಂತಹ ಕಾರ್ಯಕ್ಕೆ ಅಡಿಗಲ್ಲನ್ನು ಇಟ್ಟವರು ಕರ್ನಲ್ ಮೆಕೆಂಝಿ ಮತ್ತು ಇಲಿಯಟ್ ಅವರು. ನಂತರ ಶ್ರೀಯುತ ಬಿ.ಎಲ್.ರೈಸ್ ಅವರು ಎಪಿಗ್ರಾಫಿಯ ಕರ್ನಾಟಿಕಾ ಹೆಸರಿನ ೧೨ ಸಂಪುಟಗಳಲ್ಲಿ ೮೮೬೯ ಶಾಸನಗಳನ್ನು ಕ್ರಿ.ಶ.೧೮೮೬ ರಿಂದ ೧೯೦೪ ರವರೆಗೆ ಪ್ರಕಟಿಸಿ ಶಾಸನಾಧ್ಯಯನಕ್ಕೆ ಭದ್ರ ಬುನಾದಿಯನ್ನು ಹಾಕಿದರು. ಉತ್ತರ ಕರ್ನಾಟಕದ ಭಾಗದಲ್ಲಿ "ಜಾನ್ ಫೇತ್ ಫುಲ್ ಫ್ಲೀಟ್" ಅವರು ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ತೊಡಗಿ ಎಪಿಗ್ರಾಪಿಯಾ ಇಂಡಿಕಾ ಸಂಪುಟಗಳ ಮೂಲಕ ಶಾಸನಸೌಧವನ್ನು ನಿರ್ಮಿಸಿದರು. ಎಲ್.ಡಿ.ಬಾರ್ನೆಟ್‌ರವರು ಇಂಗ್ಲೆಂಡಿನಲ್ಲೇ ಇದ್ದುಕೊಂಡು, ಕನ್ನಡ ಲಿಪಿಯನ್ನು ಕಲಿತು, ಕನ್ನಡ ಶಾಸನಗಳ ಪಠ್ಯವನ್ನು ಸುದೀರ್ಘ ವಿವರಣೆಗಳೊಂದಿಗೆ ಪ್ರಕಟಿಸಿ ಶಾಸನಶಾಸ್ತ್ರ ಅಧ್ಯಯನಕ್ಕೆ ಉನ್ನತ ಕಲಶವಿಟ್ಟರು.

ವಿದೇಶಿ ವಿದ್ವಾಂಸರ ಪ್ರೇರಣೆಯಿಂದ ದೇಶಿ ವಿದ್ವಾಂಸರೂ ಕೂಡ ಶಾಸನಗಳ ಶೋಧ ಮತ್ತು ಪ್ರಕಟಣೆಗಳಿಗೆ ತೊಡಗಿದರು. ಅವರಲ್ಲಿ ಆರ್.ಎಸ್.ಪಂಚಮುಖಿ, ಕೆ.ಜಿ.ಕುಂದಣಗಾರ, ತಿ.ತ.ಶರ್ಮ, ಜಿ.ಎಸ್.ಗಾಯಿ, ಪಿ.ಬಿ.ದೇಸಾಯಿ. ಬಾ.ರಾ.ಗೋಪಾಲ್, ಶ್ರೀನಿವಾಸ ರಿತ್ತಿ, ಕೊ.ವ್ಯಾರಮೇಶ್, ಲಕ್ಷ್ಮೀನಾರಾಯಣರಾವ್, ಆರ್.ನರಸಿಂಹಚಾರ್. ಮೊದಲಾದವರು ಪ್ರಮುಖರು. ಕೆಲವು ವರ್ಷಗಳ ನಂತರ ಇತಿಹಾಸವನ್ನು ನೋಡುವ ದೃಷ್ಠಿ ಬದಲಾಗಿ ಹಲವಾರು ಅಧ್ಯಯನದಲ್ಲಿ ಬದಲಾವಣೆಗಳಾದವು. ಶಾಸನಗಳನ್ನು ಬರೀ ಇತಿಹಾಸದ ಅಧ್ಯಯನಕ್ಕಾಗಿ ನೋಡುತ್ತಿದ್ದ ಕ್ರಮ ಬದಲಾಗಿ ಅಲ್ಲಿರುವ ನಮ್ಮ ಸಂಸ್ಕೃತಿಯನ್ನು ಮತ್ತು ಸಾಹಿತ್ಯವನ್ನು ಬಿಂಬಿಸುವ ಕಾರ್ಯಗಳು ನಡೆದವು. ಅದರಲ್ಲಿ ಮೊದಲಿಗೆ ಆರ್.ನರಸಿಂಹಾಚಾರ್ಯರವರು ಶಾಸನ ಪದ್ಯ ಮಂಜರಿಗಳನ್ನು ಪ್ರಕಟಿಸಿ ಶಾಸನಗಳಲ್ಲಿದ್ದ ಉತ್ತಮವಾದ ಕಾವ್ಯ ಭಾಗಗಳನ್ನು ಮೊದಲಬಾರಿಗೆ ನಮ್ಮ ಮುಂದಿಟ್ಟರು.

ಶಾಸನಗಳನ್ನಾಧರಿಸಿದ ಸಾಂಸ್ಕೃತಿಕ ಅಧ್ಯಯನದ ಮೂಲಕ ಶಾಸನಗಳ ಅಧ್ಯಯನದ ದಿಕ್ಕನ್ನು ಬದಲಿಸಿದವರು ಡಾ॥ಎಂ.ಚಿದಾನಂದಮೂರ್ತಿಯವರುನಿವರ ಅಧ್ಯಯನ ಮಾರ್ಗದಿಂದ ಒಂದೇ ದಿಕ್ಕಿನಲ್ಲಿ ಸಾಗುತ್ತಿದ್ದ ಶಾಸನಗಳ ಅಭ್ಯಾಸವು ಬೇರೆ ದಿಕ್ಕಿಗೆ ಹೊರಳಿತು. ಇವರಿಂದ ನಮ್ಮ ಜನರ ಬದುಕಿನ ಹತ್ತು ಹಲವು ಮಜಲುಗಳನ್ನು ತಿಳಿಯಲು ಅವಕಾಶವಾಯಿತು. ಇತಿಹಾಸದ ತೆಕ್ಕೆಗೆ

ಧಾರ್ಮಿಕ, ಆರ್ಥಿಕ, ಸಾಮಾಜಿಕ, ಮಜಲುಗಳು ಇದರಿಂದ ದೊರೆತವು. ಜೊತೆಗೆ ವಿದ್ಯಾಭ್ಯಾಸ, ಯುದ್ಧಕಲೆ, ಆತ್ಮಬಲಿ, ಮಹಾಸತಿ, ವೀರಮರಣ, ಆಡಳಿತ ವ್ಯವಸ್ಥೆ, ಮುಂತಾದವುಗಳಲ್ಲದೆ ಕೆಲವು ಆಚರಣೆಗಳ ಅರ್ಥಗಳನ್ನು ಬಿಚ್ಚಿಡುವಲ್ಲಿ ಸಂಶೋಧಕರು ಸಫಲರಾದರು. ಮುಂದೆ ಇದೇ ದಾರಿಯಲ್ಲಿ ನಡೆದ ಡಾ॥ಬಿ.ಆರ್.ಹಿರೇಮಠರವರ ಶಾಸನಗಳಲ್ಲಿ ವರ್ತಕರು ಮತ್ತು ವೀರಗಲ್ಲುಗಳು, ಡಾ॥ಚನ್ನಕ್ಕ ಎಲೆಗಾರರವರ ಮಾಸ್ತಿಕಲ್ಲುಗಳು ಮತ್ತು ಶಾಸನಗಳಲ್ಲಿ ಕರ್ನಾಟಕದ ಸ್ತ್ರಿ ಸಮಾಜ, ಡಾ॥ ಎಂ.ಎಂ.ಕಲಬುರ್ಗಿಯವರ 'ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು' ಮುಂತಾದ ಕೃತಿಗಳ ಮೂಲಕ ಶಾಸನಗಳನ್ನು ನೋಡುವ ಕ್ರಮ ಬದಲಾಯಿತು. ಡಾ॥ಎಚ್.ತಿಪ್ಪೇರುದ್ರಸ್ವಾಮಿಯವರು ಸಹ ಕರ್ನಾಟಕ ಸಂಸ್ಕೃತಿ ಸಮೀಕ್ಷೆಯಲ್ಲಿ ಶಾಸನಗಳ ಆಧಾರದಲ್ಲಿ ನಮ್ಮ ಪೂರ್ವಜರ ಸಂಸ್ಕೃತಿಯನ್ನು ವಿವರಿಸಿದರು. ಡಾ॥ಆರ್.ಶೇಷಶಾಸ್ತ್ರಿಯವರ ಕರ್ನಾಟಕದ ವೀರಗಲ್ಲುಗಳು, ಡಾ॥ಡಿ.ವಿ.ಪರಮಶಿವಮೂರ್ತಿ ಅವರ ಶಾಸನಗಳ ಶಿಲ್ಪ ಕೃತಿಗಳು ಶಾಸನಶಿಲ್ಪವನ್ನು ಆಧರಿಸಿ ನಡೆದ ಅಧ್ಯಯನಗಳಿಗೆ ಉತ್ತಮ ಉದಾಹರಣೆಗಳಾಗಿವೆ. ಡಾ॥ಬಿ.ಎಸ್.ಶೇಠೆ ಅವರ ಕರ್ನಾಟಕದ ಸತಿಪದ್ಧತಿ, ಡಾ॥ಬಸವರಾಜ.ಕಲ್ಗುಡಿಯವರ 'ಮಹಾಸತಿ ಆಚರಣೆ:ಒಂದು ಅಧ್ಯಯನ' ಕೃತಿಗಳು ಈ ಕ್ಷೇತ್ರದ ಮಹತ್ವದ ಕೃತಿಗಳಾಗಿವೆ. ಈ ಮೇಲ್ಕಂಡ ಕೃತಿಗಳಲ್ಲಿ ಗದಗ ಜಿಲ್ಲೆಯ ಶಾಸನಗಳನ್ನು ಪ್ರಾಸಂಗಿಕವಾಗಿ ಬಳಸಿಕೊಳ್ಳಲಾಗಿದೆ.

ಗದಗ ಜಿಲ್ಲೆಯ ಶಾಸನಗಳನ್ನೇ ಆಧರಿಸಿದಂತೆ ನಡೆದ ಅಧ್ಯಯನಗಳಲ್ಲಿ ಬಹಳ ಮುಖ್ಯವಾದುದು ಡಾ॥ಎಂ.ಎಸ್.ನರೆಗಲ್ಲ ಅವರ 'ಉತ್ತರ ಗದಗ ಜಿಲ್ಲೆಯ ಶಾಸನಗಳು:ಒಂದು ಅಧ್ಯಯನ' ಎಂಬ ಕೃತಿಯು ಗಮನಾರ್ಹವಾದುದಾಗಿದೆ. ಸಂಪೂರ್ಣವಾಗಿ ಉತ್ತರ ಭಾಗದ ಗದಗ ಜಿಲ್ಲೆಯ ತಾಲೂಕುಗಳಾದ ರೋಣ, ಗದಗ, ನರಗುಂದ ತಾಲೂಕುಗಳ ಶಾಸನಗಳನ್ನು ಅಧ್ಯಯನ ಮಾಡಿದ ಮೊದಲ ಕೃತಿ ಇದಾಗಿದೆ. ಡಾ॥ಡಿ.ವಿ. ಪರಮಶಿವಮೂರ್ತಿ, ಡಾ॥ಹನುಮಾಕ್ಷಿ ಗೋಗಿ, ಡಾ॥ರಾಠೋಡ್, ಡಾ॥ಬಿ.ರಾಜೇಂದ್ರಪ್ಪ ಮೊದಲಾದವರು ತಮ್ಮ ಅನೇಕ ಲೇಖನಗಳಲ್ಲಿ ಈ ಜಿಲ್ಲೆಯ ಶಾಸನಗಳನ್ನು ಕುರಿತು ಚರ್ಚಿಸಿರುವರು.

ಪ್ರಾಚೀನ ಕರ್ನಾಟಕದ ಇತಿಹಾಸದಲ್ಲಿ ಹಲವಾರು ಆಡಳಿತ ಪ್ರದೇಶಗಳು ಪ್ರಖ್ಯಾತಿಯನ್ನು ಗಳಿಸಿದ್ದವು. ಅವುಗಳಲ್ಲಿ ಬನವಾಸಿ-೧೨೦೦೦, ಪಲಸಿಗೆ-೧೨೦೦೦, ಕೊಂಡಿ-೩೦೦೦, ಬೆಳ್ವಲ-೩೦೦, ಪುಲಿಗೆಜೆ-೩೦೦, ಸಾಂತಳಿಗೆ-೧೦೦೦, ಕೊಲ್ಲಿಪಾಕಿ-೭೦೦೦, ಮುಂತಾದವುಗಳು. ಇದರಂತೆಯೇ ಮಾಸೆವಾಡಿ-೧೪೦ ಕೂಡ ಒಂದು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಾಸೆವಾಡಿ-೧೪೦ರ ಪ್ರಾಂತ ಸುಪ್ರಸಿದ್ಧವಾಗಿತ್ತು ಎಂದು ಡಂಬಳದ ೪,೭,೮,ನೆಯ ಶಾಸನಗಳು ತಿಳಿಸುತ್ತವೆ. ಇದು ಮಾಸೆಯರ+ವಾಡಿ+ನಾಡು= ಮಾಸೆವಾಡಿನಾಡು ಎಂದಾಗುತ್ತದೆ. ಈ ಹೆಸರಿನಲ್ಲಿಯ ಪೂರ್ವಪದ

"ಮಾಸೆಯರು" ಎನ್ನುವದು ಜನಾಂಗವಾಚಿಯಾಗಿದ್ದು, ಮಾಸೆಯರು ನೆಲೆನಿಂತ ನಾಡೇ ಮಾಸೆವಾಡಿನಾಡು, ಮಾಸವಾಡಿನಾಡು. ಇಲ್ಲಿಯ ಮಾಸವಾಡಿ-೧೪೦ ಎನ್ನುವುದು ಈ ಪ್ರಾಂತದಲ್ಲಿರುವ ಹಳ್ಳಿಗಳ ಸಂಖ್ಯೆಯಾಗಿದೆ. ಈ ಹಳ್ಳಿಗಳ ಹೆಸರನ್ನು ಗುರುತಿಸಲು ಮುಂಡರಗಿ ತಾಲೂಕಿನ ಹಿರೇವಡ್ಡಟ್ಟಿಯ ಅಪ್ರಕಟಿತ ಶಾಸನ ಬಹುಮುಖ್ಯವಾದ ಮಾಹಿತಿಯನ್ನು ಒದಗಿಸುತ್ತದೆ. ಆ ಶಾಸನವು ಮಾಸವಾಡಿ ಪ್ರಾಂತದಲ್ಲಿರುವ ಹಳ್ಳಿಗಳಲ್ಲಿಯ ಭೂಮಿಯನ್ನು ಹಿರೇವಡ್ಡಟ್ಟಿಯ ಬಲ್ಲಾಳೇಶ್ವರ, ರೆಮ್ಮೇಶ್ವರ ದೇವರಿಗೆ ದತ್ತಿಯಾಗಿ ಬಿಟ್ಟಿರುವುದನ್ನು ಹೇಳುತ್ತದೆ. ಬಹು ಹಿಂದಿನಿಂದಲೂ ಪ್ರಸಿದ್ಧಿಯಾದ ಭೂಪ್ರದೇಶ. ಇದು ತುಂಗಭದ್ರ ನದಿಯ ಉತ್ತರ ಭಾಗವಾಗಿತ್ತೆಂಬುದಾಗಿ ತಿಳಿದುಬರುತ್ತದೆ. ಮಾಸವಾಡಿ-೧೪೦ ಇಂದಿನ ಮುಂಡರಗಿ, ಹಾವೇರಿ ತಾಲೂಕಿನ ವರದಾ ನದಿಯ ಉತ್ತರದ ಪೂರ್ವಭಾಗ, ಕೊಪ್ಪಳ ಜಿಲ್ಲೆಯಲ್ಲಿ ಬರುವ ಕೊಪ್ಪಳ, ಯಲಬುರ್ಗ ತಾಲೂಕುಗಳ ಪಶ್ಚಿಮ, ಮತ್ತು ಗದಗ ತಾಲೂಕಿನ ಲಕ್ಕುಂಡಿಯ ಪೂರ್ವಭಾಗವಾಗಿತ್ತು. ಇದು ಶಾಸನಗಳಲ್ಲಿಯೂ ಸಹ ಉಕ್ತವಾಗಿದೆ. ಹೇಗೆಂದರೆ

"ಶ್ರೀಕುಂತಳದ ವಿಷಯದ ದಕ್ಷಿಣ ಗಂಗಾ ನದಿಯೋತ್ತರ
ತೀರಂ ಬೀಡಿದೊಪ್ಪುತ್ತಿಪ್ಪ ಮಾಸವಾಡಿ ನಾಡದಂ"[1]

ಎನ್ನುತ್ತಾನೆ. ಮಾಸೇವಾಡಿ-೧೪೦ ಆಡಳಿತ ಭಾಗದಲ್ಲಿ ಈ ಕೆಳಕಂಡ ಗ್ರಾಮಗಳು ಇದ್ದವೆಂದು ಹಿರೇವಡ್ಡಟ್ಟಿ ಶಾಸನ ವಿಷಧವಾಗಿ ತಿಳಿಸುತ್ತದೆ. ಕೊಪ್ಪಳ ತಾಲೂಕಿನ ೧)ಸಿಂಧವಿಗಿ (ಸಿಂಧೋಗಿ), ೨)ನೆಲುವಿಗಿ (ನೆಲೋಗಿ), ೩)ತಿಗುರಿ (ತಿಗುರಿ), ೪)ನಿಡುಸವಗೆ (ನಿಡುಸೋಗಿ), ೪)ಗುಡ್ಡನಾಲೂರು (ಗುಡ್ಲಾನೂರು), ೫)ಕುಡಲಿಗಿ (ಕೂಡ್ಲಿಗಿ), ೬)ಗೊಣ್ಣಬಾಳು (ಗೊಂಡಬಾಳು), ೭)ಕಾತರಿಕೆ (ಕಾತರಿಕಿ), ೮)ಕೋಳೂರು, ೯) ಹುಗೆರೆ (ಹಲಗೇರಿ), ೧೦)ಕೆಸುನೆಲ ೧೧)ಕವಲೂರು, ಮುಂಡರಗಿ ತಾಲೂಕಿನ ೧೨)ಆಲೂರು (ಪೇಠಾಲೂರು), ೧೩)ಸಿರಿವೂರ (ಜಂತ್ಲಿ ಶಿರೂರ), ೧೪)ಮೇಳುವೀಡು (ಮೇವುಂಡಿ), ೧೫) ಭರತಪುರ(ಬರದೂರು), ೧೬)ಹಾರುವಗೆರೆ (ಹಾರೊಗೇರೆ) ೧೭)ಮೆಂಡರೆ(ಮುಂಡರಗಿ) ೧೮) ಬಲವಾಡಿ(ಬ್ಯಾಲವಾಡಿಗಿ) ೧೯)ಕಿಸುಕುಂಡಿ (ತಾಮ್ರಗುಂಡಿ), ೨೦)ಸಿಂಗಟಾಲೂರು (ಸಿಂಗಟಾಲೂರು) ೨೧) ಕೊರಲವಳ್ಳಿ (ಕೊರ್ಲಳ್ಳಿ), ೨೨)ಹೆಸರೂರು, ೨೩)ಹೊನ್ನ ಬರದೂರು (ಬರದೂರು), ೨೪) ಧರ್ಮವೊಳಲ್ (ಡಂಬಳ), ೨೫) ಮೇವುಂಡಿ, ೨೬) ಡೋಣಿ ೨೭) ಕಕ್ಕೂರು, ೨೮) ಬಿದರಹಳ್ಳಿ, ೨೯) ಚಿಕ್ಕವಡ್ಡಟ್ಟಿ, ೩೦) ಬೀಡನಾಳ, ೩೧) ಬಾಗೇವಾಡಿ, ೩೨) ಹಿರೇವಡ್ಡಟ್ಟಿ, ೩೩) ಹಮ್ಮಿಗಿ, ೩೪) ವಿಠಲಾಪುರ, ಶಿರಹಟ್ಟಿ ತಾಲೂಕಿನ ೩೫) ಅರಹಟ (ಅರಗಿಲವಾಡ), ೩೬) ಕನಹಳ್ಳಿ, ೩೭) ಬೆಳವಿ,(ಬೆಳವಿಗಿ) ೩೮) ಬೆಳ್ಳಟ್ಟಿ, ೩೯) ಸಾಸಿರವಾಡ,

೪೦) ಕಪ್ಪಲಟ್ಟಿ, ಯಲಬುರ್ಗ ತಾಲೂಕಿನ ೪೧) ಎಡೆಹಳ್ಳಿ (ಎಡಹಳ್ಳಿ), ಗಂಗಾವತಿ ತಾಲೂಕಿನ ೪೨) ಹೊನ್ನೆಯರಹಳ್ಳಿ ೪೩) ಆನೆಗುಂದಿಗಳು ಸೇರಿದ್ದವು.

ಗದಗ ಜಿಲ್ಲೆಯು ಕರ್ನಾಟಕದ ಇತರೆ ಜಿಲ್ಲೆಗಳಿಗಿಂತ ಹೆಚ್ಚು ಶಾಸನಗಳನ್ನು, ದೇವಾಲಯಗಳನ್ನು ಹೊಂದಿದೆ. ಮೊದಲಿಗೆ ಜೆ.ಎಫ್.ಫ್ಲೀಟ್ ಅವರು ಗದಗಿನ ವೀರನಾರಾಯಣ ದೇವಾಲಯದ ಪ್ರಾಕಾರದಲ್ಲಿರುವ ಎರಡು ಶಾಸನಗಳನ್ನು ಕ್ರಿ.ಶ.೧೮೭೨ರಲ್ಲಿ ಇಂಡಿಯನ್ ಆಂಟಿಕ್ವೆರಿ ಸಂಪುಟ ಎರಡರಲ್ಲಿ ಮತ್ತು ಸೊರಟೂರಿನ ವೀರಭದ್ರ ದೇವರ ದೇವಾಲಯದ ಮುಂದೆ ಇರುವ ರಾಷ್ಟ್ರಕೂಟರ ದೊರೆ ೪ನೇ ಕೃಷ್ಣನ ಕಾಲದ ಶಾಸನವನ್ನು ಕ್ರಿ.ಶ.೧೮೮೩ರಲ್ಲಿ ಇಂಡಿಯನ್ ಆಂಟಿಕ್ವೆರಿ ಸಂಪುಟ ೧೨ರಲ್ಲಿ ಪ್ರಕಟಿಸಿದರು. ಎಫ್.ಕೀಲ್ಹಾರ್ನ್‌ರವರು ಯಾದವ ದೊರೆ ಭಿಲ್ಲಮನ ಶಾಸನವನ್ನು ಕ್ರಿ.ಶ.೧೮೯೪-೯೫ರಲ್ಲಿ ಎಪಿಗ್ರಾಫಿಯ ಇಂಡಿಕಾ ಸಂಪುಟ-೪ರಲ್ಲಿ ಮತ್ತು ನೀಲಗುಂದದ ಶಾಸನವನ್ನು ಎಪಿಗ್ರಾಫಿಯ ಇಂಡಿಕಾ ಸಂಪುಟ-೪ರಲ್ಲಿ ಕ್ರಿ.ಶ.೧೮೯೬-೯೭ರಲ್ಲಿ ಪ್ರಕಟಿಸಿದರು. ಜೆ.ಎಫ್.ಫ್ಲೀಟ್‌ರವರು ಕ್ರಿ.ಶ.೧೯೦೦-೧೯೦೧ರಲ್ಲಿ ರಾಷ್ಟ್ರಕೂಟರ ದೊರೆ ಧ್ರುವನ ಮುಳಗುಂದದ ಶಾಸನವನ್ನು ಎಪಿಗ್ರಾಫಿಯ ಇಂಡಿಕಾ ಸಂಪುಟ-೪ರಲ್ಲಿ ಸಂಪಾದಿಸಿದ್ದಾರೆ. ಎಚ್.ಲಾಡೆರ್ಸ್ ರವರು ೨ನೇ ವೀರಬಲ್ಲಾಳನ ಗದಗದ ಶಾಸನವನ್ನು ಎಪಿಗ್ರಾಫಿಯ ಇಂಡಿಕಾ ಸಂಪುಟ-೨ರಲ್ಲಿ ಟಿಪ್ಪಣಿ ಸಹಿತ ಬೆಳಕಿಗೆ ತಂದರು. ಕ್ರಿ.ಶ.೧೯೧೫-೧೬ರಲ್ಲಿ ಎಪಿಗ್ರಾಫಿಯ ಇಂಡಿಕಾ-೧೩ರಲ್ಲಿ ಡಾ॥ ಜೆ.ಎಫ್.ಫ್ಲೀಟ್ ರವರು ರೋಣದ ಕ್ರಿ.ಶ.೮೬೫ರ ನೃಪತುಂಗನ ಶಾಸನದ ಜೊತೆಗೆ ಮತ್ತೊಂದು ಶಾಸನವನ್ನು ಪ್ರಕಟಿಸಿದರು. ಕ್ರಿ.ಶ.೧೯೨೯-೩೦ರಲ್ಲಿ ಡಾ॥ಆರ್.ಎಸ್.ಪಂಚಮುಖಿಯವರು ಎಪಿಗ್ರಾಫಿಯ ಇಂಡಿಕಾ-೨೦ರಲ್ಲಿ ಗದಗ ಜಿಲ್ಲೆಯ ಕೋಟುಮಚಗಿಯಲ್ಲಿರುವ ಕಲ್ಯಾಣಚಾಲುಕ್ಯ ದೊರೆ ೫ನೇ ವಿಕ್ರಮಾದಿತ್ಯನ ಶಾಸನವನ್ನು ಬೆಳಕಿಗೆ ತಂದರು. ಲೈನಲ್ ಬರ್ನೆಟ್ ಅವರು ಎಪಿಗ್ರಾಫಿಯ ಇಂಡಿಕಾ-೧೫, ೧೬ ಮತ್ತು ೧೯ರಲ್ಲಿ ಕ್ರಮವಾಗಿ ಸೂಡಿಯ ೧೩ ಶಾಸನಗಳನ್ನು, ೬ನೇ ವಿಕ್ರಮಾದಿತ್ಯನ ೨ ಶಾಸನಗಳನ್ನು ಮತ್ತು ಜಗದೇಕಮಲ್ಲನ ಒಂದುಶಾಸನ ಒಟ್ಟು ೩ ಶಾಸನಗಳು ಹಾಗೂ ೨ನೇ ಜಯಸಿಂಹನ ೨ ಶಾಸನಗಳನ್ನು (ಗದಗ ಮತ್ತು ರೋಣ) ಮತ್ತು ಕಲಚುರಿ ದೊರೆ ಸಂಕಮ ಹಾಗೂ ಸಿಂಧರ ವಿಕ್ರಮಾದಿತ್ಯನ ಶಾಸನವನ್ನು ಪ್ರಕಟಿಸಿರುವರು. ಲಕ್ಷ್ಮೀನಾರಾಯಣರಾವ್‌ರವರು ಎಪಿಗ್ರಾಫಿಯ ಇಂಡಿಕಾ-೨೧ರಲ್ಲಿ ಸೊರಟೂರು ಮತ್ತು ಶಿರುಂಜದಲ್ಲಿರುವ ರಾಷ್ಟ್ರಕೂಟ ದೊರೆ ೨ನೇ ಕೃಷ್ಣನ ಶಾಸನಗಳನ್ನು ಟಿಪ್ಪಣಿ ಸಹಿತ ಪ್ರಕಟಿಸಿದರು. ಆರ್.ಎಸ್.ಪಂಚಮುಖಿಯವರು ಎಪಿಗ್ರಾಫಿಯ ಇಂಡಿಕಾ-೨೬ರಲ್ಲಿ ರಾಷ್ಟ್ರಕೂಟರ ದೊರೆ ಅಮೋಘವರ್ಷನ ವೆಂಕಟಾಪುರದ ಶಾಸನವನ್ನು ಬೆಳಕಿಗೆ ತಂದರು. ಡಾ॥ಬಾ.ರಾ.ಗೋಪಾಲ ಮತ್ತು ಡಾ॥ಶ್ರೀನಿವಾಸ ರಿತ್ತಿರವರು ಕ್ರಿ.ಶ.೧೯೫೭-೫೮ರಲ್ಲಿ ಎಪಿಗ್ರಾಫಿಯ ಇಂಡಿಕಾ-೩೨ರಲ್ಲಿ ೨ನೇ ವೀರಬಲ್ಲಾಳನ ಹೊಸೂರಿನ ಶಾಸನವನ್ನು ಪ್ರಕಟಿಸಿದರು.

ಬಾ.ರಾ.ಗೋಪಾಲ್‌ರವರು ಕರ್ನಾಟಕ ಇನ್‌ಸ್ಕ್ರಿಪ್ಷನ್–೫ರಲ್ಲಿ ಗದಗ, ಹಂಚಿನಾಳ, ಬೆಳಹೋಡ, ಚಿಕ್ಕಹಂದಿಗೋಳ, ಹಿರೇಹಂದಿಗೋಳ ಗ್ರಾಮಗಳ ಒಟ್ಟು ೧೧ ಶಾಸನಗಳನ್ನು ಕರ್ನಾಟಕ ಇನ್‌ಸ್ಕ್ರಿಪ್ಷನ್–೬ರಲ್ಲಿ ಅಬ್ಬಿಗೇರಿಯ ಒಂದು ಶಾಸನವನ್ನು ಬೆಳಕಿಗೆ ತಂದರು.

ಪ್ರಾಚೀನ ಕಾಲದಿಂದಲೂ ಗದಗ ಪೌರಾಣಿಕವಾಗಿ, ಐತಿಹಾಸಿಕವಾಗಿ, ಧಾರ್ಮಿಕವಾಗಿ, ಸಂಸ್ಕೃತಿಕವಾಗಿ, ರಾಜಕೀಯವಾಗಿ, ಸಾಹಿತ್ಯಕವಾಗಿ ಪ್ರಸಿದ್ಧಿಯನ್ನು ಪಡೆದಂತಹ ಜಿಲ್ಲೆ. ಇದು ಮೊದಲು ಅಖಂಡ ಧಾರವಾಡದಲ್ಲಿ ವಿಲೀನವಾಗಿತ್ತು. ೧೯೯೭ರಲ್ಲಿ ಐದು ತಾಲೂಕುಗಳನ್ನೊಳಗೊಂಡು ಗದಗ ಜಿಲ್ಲೆಯಾಗಿ ಬೇರ್ಪಟ್ಟಿತು. ಆ ಐದು ತಾಲೂಕುಗಳೆಂದರೆ ಮುಂಡರಗಿ, ಶಿರಹಟ್ಟಿ, ಗದಗ, ರೋಣ, ನರಗುಂದ. ಇದರಲ್ಲಿ ಗದಗ ಜಿಲ್ಲೆಯ ರಾಷ್ಟ್ರೀಯ ಹೆದ್ದಾರಿ ೬೭ರ ದಕ್ಷಿಣ ಭಾಗವನ್ನು ಆಯ್ಕೆ ಮಾಡಿಕೊಂಡು, ಈ ಭಾಗದ ಶಾಸನಗಳನ್ನು ಅನುಲಕ್ಷಿಸಿ ಅಧ್ಯಯನಕ್ಕೆ ತೊಡಗಿದ್ದೇನೆ. ಈವರೆಗೆ ಬೆಳ್ವಲ–೩೦೦ ಮತ್ತು ಪುಲಿಗೇರಿ–೩೦೦ ಅಧ್ಯಯನಗಳು ನಡೆದಿದ್ದವು. ಆದರೆ ಮಾಸವಾಡಿ–೧೪೦, ಕಿಸುಕಾಡು–೭೦, ಕೋಗಳಿ–೫೦೦ರ ಅಧ್ಯಯನ ಅಷ್ಟಾಗಿ ನಡೆದಿಲ್ಲ. ಈ ಎಲ್ಲಾ ಕಾರಣದಿಂದಾಗಿ ದಕ್ಷಿಣ ಗದಗು ಜಿಲ್ಲಾ ಭಾಗಗಳಾಗಿ ಮುಂಡರಗಿ, ಶಿರಹಟ್ಟಿ ಮತ್ತು ಗದಗ ತಾಲೂಕಿನ ಶಾಸನಗಳನ್ನು ಅಧ್ಯಯನ ಮಾಡುವ ಆಸಕ್ತಿ ನನ್ನಲ್ಲಿ ಹುಟ್ಟಿತು. ನನ್ನ ಈ ಅಧ್ಯಯನ ತುಂಗಭದ್ರಾ ನದಿಯ ಉತ್ತರ ತಡಿಯಲ್ಲಿರುವ ಮುಂಡರಗಿ ಮತ್ತು ಶಿರಹಟ್ಟಿ ತಾಲೂಕುಗಳ ಶಾಸನಗಳು ಮತ್ತು ಗದಗ ತಾಲೂಕಿನ ದಕ್ಷಿಣ ಭಾಗದ ಗ್ರಾಮದ ಶಾಸನಗಳನ್ನು ಒಳಗೊಂಡಿದೆ. ಶಾಸನದ ಪಠ್ಯ ಮತ್ತು ಶಿಲ್ಪ ಎರಡನ್ನೂ ಅಧ್ಯಯನ ಮಾಡುವುದು ನನ್ನ ಉದ್ದೇಶ.

ಕರ್ನಾಟಕದಲ್ಲಿ ಶಾಸನ ಸಂಪತ್ತು ಅತೀ ಶ್ರೀಮಂತವಾದದ್ದು. ಸುಮಾರು ೨೫೦೦೦ ದಿಂದ ೩೦,೦೦೦ದ ವರೆಗೆ ಇರುವ ಶಾಸನಗಳೇ ನಮ್ಮ ಆಸ್ತಿ. ನನ್ನ ಅಧ್ಯಯನಕ್ಕೆ ಆಕರಗಳೆಂದರೆ ಶಿಲಾಶಾಸನಗಳು, ತಾಮ್ರಶಾಸನಗಳು ಮತ್ತು ಸ್ಮಾರಕ ಶಾಸನಗಳು. ಇದಕ್ಕೆ ಪೂರಕವಾಗಿ ಸಾಹಿತ್ಯ ಕೃತಿಗಳು ಮತ್ತು ಐತಿಹ್ಯಗಳನ್ನು ಬಳಸಿಕೊಂಡಿದ್ದೇನೆ. ಬಹಳಷ್ಟು ಶಾಸನಗಳು ಈಗಾಗಲೇ ದಕ್ಷಿಣ ಭಾರತ ಶಾಸನಗಳ ವಾರ್ಷಿಕ ವರದಿ, ಎ.ಆರ್.ಎಸ್.ಐ.ಇ. ಕರ್ನಾಟಕ ಇನ್ಸಸ್ಕ್ರಿಪ್‌ಷನ್ಸ್ ಸಂಪುಟಗಳು, ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ ಸಂಪುಟಗಳು, ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳಲ್ಲಿ ಪ್ರಕಟವಾಗಿವೆ. ಇವುಗಳಲ್ಲದೆ ಶಾಸನ ಸಾಹಿತ್ಯ ಸಂಚಯ, ಶಾಸನ ಸಂಪದ, ಶಾಸನ ಸಂಗ್ರಹ, ಧಾರವಾಡ ಜಿಲ್ಲೆಯ ಶಾಸನಸೂಚಿ, ಕರ್ನಾಟಕದ ಶಿಲಾಶಾಸನಗಳು ಮತ್ತು ಶಾಸನ ಪದ್ಯ ಮಂಜರಿಯಲ್ಲಿ ಪ್ರಕಟವಾಗಿವೆ. ಈ ಪ್ರಕಟಿತ ಶಾಸನಗಳ ಹಿನ್ನೆಲೆಯಲ್ಲಿ ಗ್ರಾಮ ಸರ್ವೇಕ್ಷಣೆಯನ್ನು ನಡೆಸಿ ಆಕರಗಳನ್ನು ಸಂಗ್ರಹಿಸಲಾಗಿದೆ. ಅಷ್ಟೇ ಅಲ್ಲದೆ ಶಾಸನಗಳ ಆಧಾರದಲ್ಲಿ ಪ್ರಕಟವಾಗಿರುವ ಡಾ॥ಹೆಚ್.ತಿಪ್ಪೇರುದ್ರಸ್ವಾಮಿಯವರ ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ॥ ಎಂ.ಚಿದಾನಂದಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,

ಡಾ॥ಚೆನ್ನಕ್ಕ ಎಲಿಗಾರ ಅವರ ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಡಾ॥ಡಿ.ವಿ.ಪರಮಶಿವಮೂರ್ತಿಯವರ ಕನ್ನಡ ಶಾಸನಶಿಲ್ಪ, ಇತಿಹಾಸದರ್ಶನ ಸಂಪುಟಗಳು, ಡಾ॥ಎಂ.ಎಂ.ಕಲಬುರ್ಗಿಯವರ "ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು" ಜೊತೆಗೆ ಡಾ॥ಪಾಟೀಲರ ಬೆಳ್ವೊಲ-೩೦೦ ಮತ್ತು ಪುಲಿಗೆರಿ-೩೦೦ ಒಂದು ಅಧ್ಯಯನ ಡಾ॥ಆರ್.ಶೇಷಶಾಸ್ತ್ರಿ ಅವರ ಕರ್ನಾಟಕದ ವೀರಗಲ್ಲುಗಳು, ಹನುಮಾಕ್ಷಿ ಗೋಗಿ ಮತ್ತು ಡಾ.ರಾಠೋಡ್ ಅವರ ಡಂಬಳ ಒಂದು ಸಾಂಸ್ಕೃತಿಕ ಅಧ್ಯಯನ, ಹನುಮಾಕ್ಷಿ ಗೋಗಿ ಅವರ ಲಕ್ಕುಂಡಿ ಶಾಸನಗಳು, ಡಾ॥ಎಂಎಸ್.ನರೇಗಲ್ಲ ಅವರ ಉತ್ತರ ಗದಗ ಜಿಲ್ಲೆಯ ಶಾಸನಗಳು ಕೃತಿಗಳನ್ನು, ಮೃಡದೀಪ್ತಿ ಮತ್ತು ಶಾಸನ ಸಂಪದ ಪುಸ್ತಕಗಳನ್ನು ಆಕರಗಳನ್ನಾಗಿ ತೆಗೆದುಕೊಂಡಿದ್ದೇನೆ. ಇದರ ಜೊತೆಗೆ ಹಲವಾರು ಕೃತಿಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ಅಷ್ಟೇ ಅಲ್ಲದೆ, ಜನರು ಹೇಳುವ ಕೆಲವು ಜಾನಪದ ಐತಿಹ್ಯಗಳನ್ನು ಬಳಸಿಕೊಳ್ಳಲಾಗಿದೆ. ನಮ್ಮ ದೇಶದಲ್ಲಿ ೧೮ನೇ ಶತಮಾನದಿಂದ ಶಾಸನಗಳ ಅಧ್ಯಯನ ಪ್ರಾರಂಭವಾಯಿತು. ಅಂದು ಬಂಗಾಳದ ಏಷ್ಯಾಟಿಕ್ ಸೊಸೈಟಿಯ ಸ್ಥಾಪಕನಾದ ಸರ್ ವಿಲಿಯಂ ಜೋನ್ಸ್, ಹೆನ್ರಿ ಕೊಲ್ ಬ್ರೂಕ್ ಇವರ ತರುವಾಯ ಜೇಮ್ಸ ಪ್ರಿನ್ಸಿಪ್ ನಿಂದ ಸ್ವರ್ಣ ಯುಗವೇ ಆರಂಭವಾಯಿತು. ಇದೇ ರೀತಿ ಕರ್ನಾಟಕದಲ್ಲಿ ಕ್ರಿ.ಶ.೧೭೯೧ರಷ್ಟು ಹಿಂದೆಯೇ ಶಾಸನಗಳ ಅಧ್ಯಯನ ಪ್ರಾರಂಭವಾದರೂ ವಾಲ್ಟರ್ ವಿಲಿಯಂರಿಂದ ಕನ್ನಡ ಶಾಸನಗಳ ಸುವ್ಯವಸ್ಥಿತ ಅಧ್ಯಯನಕ್ಕೆ ನಾಂದಿಯಾಯಿತೆಂದು ಹೇಳಬಹುದು. ಸುಮಾರು ಕ್ರಿ.ಶ.೧೮೦೦ರ ವರಗೆ ದೇಶೀಯ ವಿದ್ವಾಂಸರ ಗಮನ ಅತ್ತ ಹರಿಯಲಿಲ್ಲ. ಕ್ರಿ.ಶ.೧೮೦೭ರಲ್ಲಿ ಮೆಕೆಂಜಿಯವರು ತಾವು ಸಂಗ್ರಹಿಸಿದ ಶಾಸನಗಳನ್ನು ಅಧ್ಯಯನಕ್ಕೆ ಕಳುಹಿಸಿಕೊಟ್ಟು, ಅವು ಅಲ್ಲಿನ ಪತ್ರಿಕೆಯಲ್ಲಿ ಪ್ರಕಟವಾದ ನಂತರ ೧೮೭೧ರಲ್ಲಿ ಸರ್ ಜಾನ್ ಮಾಲ್ಕಂ ವಾಲ್ಟರ್‌ರವರು ಹಲವಾರು ಕನ್ನಡ ನಾಡಿನ ಶಾಸನಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದರು. ಫ್ಲೀಟ್ ಬರ್ಗೆಸ್, ಜೆ.ಎಫ್.ಫ್ಲೀಟ್, ಬಿ.ಎಲ್. ರೈಸ್, ಎಲ್.ಡಿ.ಬಾರ್ನೆಟ್ ರವರು ಕನ್ನಡದ ಶಾಸನಗಳ ಅಧ್ಯಯನದಲ್ಲಿ ತೊಡಗಿದರು.

ಕನ್ನಡದ ಶಾಸನಗಳ ಅಧ್ಯಯನದಲ್ಲಿ ಮೊದಲು ಆಸಕ್ತಿ ತೋರಿದ ದೇಶೀಯರೆಂದರೆ ಬಾಲಗಂಗಾಧರ ಶಾಸ್ತ್ರೀಯವರು. ನಂತರ ಬಾವುದಾಜಿಯವರು, ಎಂ.ಎಚ್.ಕೃಷ್ಣ, ಕೆ.ಬಿ.ಪಾಠಕ್, ಆರ್.ನರಸಿಂಹಚಾರ್ಯ, ಆರ್.ರಾಮರಾವ್, ಆರ್.ಶಾಮಶಾಸ್ತ್ರೀ, ಆರ್.ಎಸ್.ಪಂಚಮುಖಿ ಮುಂತಾದವರು. ಇಲ್ಲಿಯವರೆಗೂ ಶಾಸನಗಳ ಸಂಗ್ರಹಣೆ ಮತ್ತು ಅವುಗಳ ಪಾಠಕ್ರಮ, ಅವುಗಳಿಂದ ದೊರಕುವ ಇತಿಹಾಸ ಘಟನೆಗಳು ಮುಂತಾದವುಗಳ ಬಗ್ಗೆ ವಿವೇಚನೆ ನಡೆಯುತ್ತಿತ್ತು. ಕ್ರಿ.ಶ.೧೯೨೭ರಲ್ಲಿ ಕರ್ನಾಟಕದ ಉದ್ದಗಲಕ್ಕೆ ಸರ್ವೇಕ್ಷಣೆ ಮಾಡಿ, ಶಾಸನಗಳನ್ನು ಸಂಗ್ರಹಿಸಿ, ಅವುಗಳನ್ನು ದಕ್ಷಿಣ ಭಾರತದ ಶಾಸನಸಂಪುಟದಲ್ಲಿ ಒಟ್ಟಿಗೆ ಪ್ರಕಟಿಸಲಾಯಿತು. ನಂತರ ಕರ್ನಾಟಕ ಶಾಸನಸಂಪುಟಗಳಲ್ಲಿ

ಮತ್ತೊಮ್ಮೆ ಪ್ರಕಟಿಸಲಾಯಿತು. ಆದರೂ ಒಂದು ಕ್ರಮಬದ್ಧವಾದ ಅಧ್ಯಯನ ಪ್ರಾರಂಭವಾಗಿದ್ದು, ವಿಶೇಷ ಅಧ್ಯಯನಕ್ಕೆ ಶಾಸನಗಳನ್ನು ಬಳಸಿಕೊಂಡ ಕೀರ್ತಿ ಚಿದಾನಂದಮೂರ್ತಿಯವರಿಗೆ ಸಲ್ಲುತ್ತದೆ. ಇವರು ಕ್ರಿ.ಶ.೪೫೦ರಿಂದ ಹಿಡಿದು ಕ್ರಿ.ಶ.೧೧೫೦ರವರೆಗಿನ ಬಹಳಷ್ಟು ಪ್ರಮುಖ ಶಾಸನಗಳನ್ನು ಆಧಾರವಾಗಿಟ್ಟುಕೊಂಡು, ಸಾಂಸ್ಕೃತಿಕವಾಗಿ ಅಧ್ಯಯವನ್ನು ಕೈಗೊಂಡು, ಶಾಸನಗಳನ್ನು ನೋಡುತ್ತಿದ್ದ ಕ್ರಮವನ್ನೇ ಬದಲಿಸಿದರು. ಅಂದರೆ ಅದುವರೆಗೂ ಶಾಸನಗಳಿಂದ ಇತಿಹಾಸವನ್ನು ಮಾತ್ರ ಪ್ರಧಾನವಾಗಿ ತೆಗೆದುಕೊಳ್ಳುತ್ತಿದ್ದರು. ಅದಕ್ಕೆ ಇವರು ತಮ್ಮ ಗ್ರಂಥದಲ್ಲಿ ಒಂದು ನಾಡಿನ ಇತಿಹಾಸವೆಂದರೆ "ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ನಮ್ಮಲ್ಲಿ ಬೇರೂರಿದೆ. ಒಂದು ನಾಡು ಎಂದರೆ ಅದನ್ನು ಆಳಿದ ರಾಜರಲ್ಲ, ಅಲ್ಲಿ ಬದುಕಿದ ಜನ. ಆ ಜನರು ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನದ ಸಮಸ್ಯೆಗಳು ಮತ್ತು ಮೌಲ್ಯಗಳು ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ"[೨] ಎಂದರು. ಅವರು ಹೇಳಿರುವ ಯಾವುದೇ ಮಾತು ಉತ್ಪ್ರೇಕ್ಷೆಯಲ್ಲ. ಏಕೆಂದರೆ ಶಾಸನಗಳಲ್ಲಿ ನಮ್ಮ ಜನರ ಧರ್ಮ, ಸಾಮಾಜಿಕ ವ್ಯವಸ್ಥೆ, ವಿದ್ಯಾಭ್ಯಾಸ, ಯುದ್ಧಕಲೆ, ಆತ್ಮಬಲಿಯ ಹಲವು ಪ್ರಕಾರಗಳು, ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಅಂಶಗಳು ನೂರಕ್ಕೆ ನೂರರಷ್ಟು ಅಲ್ಲದಿದ್ದರೂ ಸುಮಾರು ೭೫ರಷ್ಟು ಭಾಗ ಲಭಿಸುತ್ತದೆ. ಆದ್ದರಿಂದ ಡಾ॥ಚಿದಾನಂದಮೂರ್ತಿಯವರ ಮಾತು ಅಕ್ಷರಸಹ ಸತ್ಯ.

ಇದೇ ರೀತಿಯ ಅಧ್ಯಯನವನ್ನು ಮುಂದುವರಿಸಿದ ಡಾ॥ಎಚ್.ತಿಪ್ಪೇರುದ್ರಸ್ವಾಮಿಯವರು ತಮ್ಮ "ಕರ್ಣಾಟಕ ಸಂಸ್ಕೃತಿ ಸಮೀಕ್ಷೆ"ಯಲ್ಲಿ 'ಶಾಸನಗಳಲ್ಲಿ ಸಂಸ್ಕೃತಿ' ಎಂದು ಹೇಳುತ್ತಾ ದಾನಶಾಸನಗಳು, ಧರ್ಮಸಮನ್ವಯ, ಸಾಮಾಜಿಕ ಜೀವನ, ಸಾಹಿತ್ಯ ಸೌಂದರ್ಯ ಎಂದು ಹೇಳಿ ಶಾಸನಗಳ ಆಧಾರದಲ್ಲಿಯೇ ವಿವರಿಸಲಾಗಿದೆ. ಡಾ॥ಎಂ.ಎಂ.ಕಲಬುರ್ಗಿಯವರು "ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು" ಹೊತ್ತಿಗೆಯಲ್ಲಿ ವಿವಿಧ ರೀತಿಯ ವೀರಗಲ್ಲುಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಇದೇ ರೀತಿ ಚೆನ್ನಕ್ಕ ಎಲಿಗಾರರವರ ಶಾಸನಗಳಲ್ಲಿ "ಕರ್ನಾಟಕದ ಸ್ತ್ರೀ ಸಮಾಜ" ಪುಸ್ತಕದಲ್ಲಿ ಶಾಸನಗಳನ್ನೇ ಆಧಾರವಾಗಿಟ್ಟುಕೊಂಡು, ಅವುಗಳ ಹಿನ್ನೆಲೆಯಲ್ಲಿಯೇ ಕರ್ನಾಟಕದ ಸ್ತ್ರೀ ಸಮಾಜವನ್ನು ಚಿತ್ರಿಸಲಾಗಿದೆ. ಅದೇ ರೀತಿ ಅಧ್ಯಯನವನ್ನು ಶಿಲ್ಪದ ಕಡೆಗೆ ಹರಿಸಿದವರು ಡಾ॥ಡಿ.ವಿ.ಪರಮಶಿವಮೂರ್ತಿಯವರು. ಇವರು ಲಿಪಿ ಇಲ್ಲದ ಶಾಸನಶಿಲ್ಪವು ನಮಗೆ ನಮ್ಮವರ ಇತಿಹಾಸವನ್ನು ಯಾವ ರೀತಿ ತಿಳಿಸುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಅಂತೂ ಅದುವರೆಗೂ ಶಾಸನಗಳನ್ನು ಕೇವಲ ಇತಿಹಾಸ ರಚನೆಗೋ ಅಥವಾ ಪಾಠಕ್ರಮವನ್ನೋ ಅಭ್ಯಾಸ ಮಾಡುವುದು ತಪ್ಪಿ, ವಿವಿಧ ಆಯಾಮಗಳನ್ನು ಅಭ್ಯಾಸಿಸುವ ಮಾರ್ಗ ಬಂದಿರುವುದು ನಿಜವಾಗಿಯೂ ನಮ್ಮ ಭಾಗ್ಯವೇ ಸರಿ. ಇದರಿಂದ ನಮ್ಮ ನಾಡಿನ ಜನರ ಸಂಸ್ಕೃತಿಯ ವಿವಿಧ ಮಜಲುಗಳನ್ನು ತಿಳಿಯಲು ನಮಗೆ

ಬಹಳ ಅನುಕೂಲವಾಯಿತು. ಇದರಿಂದ ಪ್ರೇರೇಪಿತರಾಗಿ ಒಂದು ಸೀಮಿತ ಪ್ರದೇಶದ ಶಾಸನಗಳನ್ನು ಆಯ್ದುಕೊಂಡು, ಅವುಗಳಲ್ಲಿ ದೊರೆಯುವ ನಮ್ಮ ಜನರ ಎಲ್ಲಾ ಸಂಸ್ಕೃತಿಯನ್ನು ರಚಿಸಲು ಪ್ರಾರಂಭವಾಯಿತು. ಇದರಿಂದ ಹಲವು ಕೃತಿಗಳು ಕೆಲವು ಪ್ರದೇಶಕ್ಕೆ ಸೀಮಿತವಾದಂತೆ ಬಂದವು. ಅಂತಹುಗಳೆಂದರೆ ಡಾ॥ಧನವಂತ ಹಾಜವಗೋಳರವರ "ಮುಳುಗುಂದನಾಡು ಒಂದು ಅಧ್ಯಯನ" ಅಣ್ಣಿಗೇರಿ ಒಂದು ಅಧ್ಯಯನ, ಬೆಳ್ವಲ-೩೦೦, ಪುಲಗೇರಿ-೩೦೦ ಒಂದು ಅಧ್ಯಯನ, ಡಾ॥ವಿ.ಕೆ.ದ್ಯಾವನಗೌಡ ಅವರ "ಡಂಬಳ ಪರಿಸರದ ಶಾಸನಗಳು," ಅಲ್ಲದೆ ವಿವಿಧ ದೇವಾಲಯಗಳ ಅಧ್ಯಯನ, ಸ್ಥಳನಾಮಗಳ ಅಧ್ಯಯನ ನಡೆದಿವೆ.

ಕರ್ನಾಟಕದ ಮತ್ತು ಗದಗ ಜಿಲ್ಲೆಯ ಕುರಿತಾದ ಶಾಸನಗಳ ಅಧ್ಯಯನದಲ್ಲಿ ದಕ್ಷಿಣ ಗದಗ ಭಾಗದ ಮುಖ್ಯ ಆಡಳಿತ ವಿಭಾಗದ ಮಾಸೆವಾಡಿ-೧೪೦, ಕಿಸುಕಾಡು-೭೦, ತೊರೆಗೆಲೆ ನಡುಗಳ ಅಧ್ಯಯನ ವಿವರವಾಗಿ ನಡೆದಿಲ್ಲ. ಈ ಬಗ್ಗೆ ಕೆಲವು ಲೇಖನಗಳು ಮಾತ್ರ ಪ್ರಕಟವಾಗಿವೆ. ಈ ಮೊದಲೆ ಹೇಳಿದಂತೆ ಗದಗ ಜಿಲ್ಲೆಯು ಸಾಂಸ್ಕೃತಿಕವಾಗಿ ಪ್ರಾಚೀನವಾದ ಅಂಶಗಳನ್ನು ಹೊಂದಿರುವ ಜಿಲ್ಲೆ. ಉತ್ತರ ಗದಗ ಜಿಲ್ಲೆಯ ಅಧ್ಯಯನ ನಡೆದಂತೆ ದಕ್ಷಿಣ ಗದಗ ಜಿಲ್ಲೆಯ ಅಧ್ಯಯನ ನಡೆದಿಲ್ಲ. ಹುಲಿಗೆರಿ, ಮುಳಗುಂದ, ಲಕ್ಕುಂಡಿ, ಮೇವುಂಡಿ, ಡಂಬಳ, ಡೋಣಿ ಮುಂತಾದ ಸ್ಥಳಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆದಿಲ್ಲ. ಅದರಲ್ಲೂ ಮುಂಡರಗಿಯಿಂದ ತುಂಗಭದ್ರಾ ನದಿಯ ಎಡದಂಡೆಯ ಭಾಗದಲ್ಲಿ ಈ ರೀತಿಯ ಅಧ್ಯಯನಗಳು ನಡದೇ ಇಲ್ಲ. ಇದನ್ನು ಮನಗಂಡು ಈ ಭಾಗದ ಶಾಸನಗಳನ್ನು ಆಧರಿಸಿ **"ದಕ್ಷಿಣ ಗದಗ ಜಿಲ್ಲಾ ಶಾಸನಗಳು ಒಂದು ಅಧ್ಯಯನ"**ವೆಂಬ ಹೆಸರಿನಲ್ಲಿ ಅಧ್ಯಯನ ನಡೆಸಲು ಬಯಸಿದೆ. ಅಲ್ಲದೆ ಕಳೆದ ಎಂಟು ವರ್ಷಗಳಿಂದಲೂ ಮುಂಡರಗಿ ಪರಿಸರದಲ್ಲಿರುವ ನನಗೆ ಈ ಭಾಗದ ಶಾಸನಗಳು ಆಕರ್ಷಿಸಿದವು. ಈ ಭಾಗದ ಶಾಸನಗಳ ಅಧ್ಯಯನದ ಕೊರತೆಯನ್ನು ಮನಗಂಡ ನಾನು ಈ ಭಾಗದ ಶಾಸನಗಳ ಮಹತ್ವವನ್ನು ದಾಖಲಿಸಲು ಇಲ್ಲಿ ಪ್ರಯತ್ನಪಟ್ಟಿದ್ದೇನೆ.

**ಅಧ್ಯಯನದ ವ್ಯಾಪ್ತಿ**

ಈವರೆಗೆ ಗದಗ ಜಿಲ್ಲೆಯ ಉತ್ತರಭಾಗದ ಶಾಸನಗಳ ಅಧ್ಯಯನ ನಡೆದಿದೆ. ಗದಗ ಜಿಲ್ಲೆಯ ದಕ್ಷಿಣಭಾಗವೂ ಉತ್ತರ ಭಾಗಕ್ಕಿಂತಲೂ ಮಹತ್ವದ ಸ್ಥಳವಾಗಿದೆ. ಈ ಭಾಗದಲ್ಲಿ ಹೆಚ್ಚು ಶಾಸನಗಳು ದೊರೆಯುವುದಲ್ಲದೆ ಪ್ರಾಚೀನ ಆಡಳಿತ ಭಾಗವಾದ ಮಾಸವಾಡಿ-೧೪೦ರ ಭಾಗದ ಅಧ್ಯಯನ ಹಾಗೂ ಈ ಭಾಗದ ಇತರ ಭಾಗಗಳ ಅಧ್ಯಯನವಾದರೆ ಸಂಪೂರ್ಣ ಗದಗ ಜಿಲ್ಲೆಯ ಶಾಸನಗಳ ಅಧ್ಯಯನಸವಾದಂತಾಗುತ್ತದೆ. ಅಲ್ಲದೆ ಇಲ್ಲಿನ ಶಾಸನಗಳು ವಿಷಯದ ದೃಷ್ಟಿಯಿಂದ ಮತ್ತು ಶಿಲ್ಪಗಳ ದೃಷ್ಟಿಯಿಂದ ಬಹಳ ಮಹತ್ವವಾಗಿವೆ. ಇವುಗಳ ಅಧ್ಯಯನದಿಂದ ಗದಗ ಜಿಲ್ಲೆಯ ಸಂಸ್ಕೃತಿಗೆ ಸಂಬಂಧಪಟ್ಟಂತೆ ಅನೇಕ ಹೊಸ ಸಂಗತಿಗಳು ಬೆಳಕಿಗೆ ಬರುತ್ತವೆ ಎಂಬ ಉದ್ದೇಶದಿಂದ "ಗದಗ

ಜಿಲ್ಲೆಯ ದಕ್ಷಿಣ ಭಾಗದ ಶಾಸನಗಳ"ನ್ನು ಅಧ್ಯಯನ ಮಾಡಲು ತೊಡಗಿದ್ದೇನೆ. ಗದಗ ಜಿಲ್ಲೆಯ ಒಟ್ಟು ವಿಸ್ತೀರ್ಣ ೪೬೫೭ ಚ.ಕಿ.ಮೀ. ಇದರಲ್ಲಿ ಮುಂಡರಗಿ ತಾಲೂಕು ೮೮೪ಚ.ಕಿ.ಮಿ. ಶಿರಹಟ್ಟಿ ೯೪೯ಚ.ಕಿ.ಮಿ. ಗದಗ ೧೦೯೭ಚ.ಕಿ.ಮಿ. ರೋಣ ೧೨೯೧ಚ.ಕಿ.ಮಿ. ನರಗುಂದ ೪೩೫ಚ.ಕಿ.ಮಿ. ಇದರಲ್ಲಿ ಮುಂಡರಗಿ, ಶಿರಹಟ್ಟಿ ಮತ್ತು ಗದಗ ತಾಲೂಕಿನ ಅರ್ಧಭಾಗ ಅಂದರೆ ಹುಬ್ಬಳ್ಳಿ-ಬಳ್ಳಾರಿಯ ರಾಷ್ಟ್ರೀಯ ಹೆದ್ದಾರಿಯ ದಕ್ಷಿಣದ ಭಾಗವನ್ನು ಆಯ್ಕೆಮಾಡಿಕೊಂಡು. ಸಂದರ್ಭಕ್ಕೆ ಅನುಗುಣವಾಗಿ ಇತರ ಗ್ರಾಮಗಳ ಶಾಸನಗಳನ್ನು ಬಳಸಿಕೊಂಡಿದ್ದೇನೆ. ಗದಗ ಜಿಲ್ಲೆಯ ಇತಿಹಾಸ, ಸಂಸ್ಕೃತಿ, ಪರಂಪರೆಗಳು ಈವರೆಗೂ ಪೂರ್ಣಪ್ರಮಾಣದಲ್ಲಿ ಬೆಳಕಿಗೆ ಬರದೇ ಇದ್ದುದರಿಂದ ಅವುಗಳ ಅಧ್ಯಯನದತ್ತ ಗಮನಹರಿಸಿದ್ದೇನೆ. ಅದರ ಫಲವಾಗಿಯೇ ಈ "ದಕ್ಷಿಣ ಗದಗ ಜಿಲ್ಲಾ ಶಾಸನಗಳ ಅಧ್ಯಯನ" ಎಂಬ ಮಹಾಪ್ರಬಂಧವು ರೂಪುಗೊಂಡಿದೆ.

ಈ ನಮ್ಮ ಅಧ್ಯಯನದಲ್ಲಿ ಏಳು ಅಧ್ಯಾಯಗಳಿದ್ದು, ಅವುಗಳನ್ನು ಅನೇಕ ಒಳ ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಈ ಕೆಳಗಿನಂತೆ ಅಧ್ಯಯನ ನಡೆಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನಕ್ಕೆ ಬಳಸಿಕೊಂಡ ಆಕರಗಳ ಬಗ್ಗೆ ಚರ್ಚಿಸಲಾಗಿದೆ. ನಮ್ಮ ರಾಜ್ಯದಲ್ಲಿ ಹಲವಾರು ವರ್ಷಗಳಿಂದ ಶಾಸನಗಳ ಅಧ್ಯಯನ ನಡೆಯುತ್ತಲೇ ಬಂದಿದೆ. ಗದಗ ಜಿಲ್ಲೆಯ ಬಗ್ಗೆಯೂ ಹಲವಾರು ಅಧ್ಯಯನಗಳು ನಡೆದು, ಹಲವಾರು ಪ್ರಬಂಧಗಳು ಪ್ರಕಟಗೊಂಡು, ಹಲವಾರು ಹೊಸ ವಿಷಯಗಳನ್ನು ಹೊರಹಾಕಿವೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಗದಗ ಜಿಲ್ಲೆಯ ಶಾಸನಗಳನ್ನು ಕುರಿತು ಸಮಗ್ರ ಅಧ್ಯಯನವನ್ನು ಮಾಡಲು ಕಾರಣ, ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಆ ಅಧ್ಯಯನಕ್ಕೆ ಬಳಸಿಕೊಂಡಿರುವ ಆಕರ ಸಾಮಗ್ರಿಗಳನ್ನು ಕುರಿತಾಗಿ ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ದಾನ ಶಾಸನಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಕರ್ನಾಟಕದಲ್ಲಿ ದೊರೆಯುವ ಶಾಸನಗಳಲ್ಲಿ ಶೇಕಡ ೭೫ರಷ್ಟು ಭಾಗ ದಾನಶಾಸನಗಳಾಗಿವೆ. ಅದರಂತೆಯೆ ದಕ್ಷಿಣ ಗದಗ ಜಿಲ್ಲೆಯಲ್ಲಿ ದೊರೆಯುವ ಶಾಸನಗಳು ಬಹಳಷ್ಟು ದಾನಶಾಸನಗಳೇ. ಇಲ್ಲಿ ದೊರೆಯುವ ಶಾಸನಗಳನ್ನು ಜೈನ, ಶೈವ, ವೈಷ್ಣವ ಎಂದು ವಿಭಾಗಿಸಿಕೊಂಡು, ಅವುಗಳಲ್ಲಿ ಪುನಃ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ನಿರ್ವಹಣೆಗಾಗಿ ಭೂದಾನ, ದೇವಾಲಯದಲ್ಲಿ ನಿತ್ಯ ಪೂಜೆಗಾಗಿ ತೈಲದಾನ, ಎಲೆದಾನ, ಅಡಿಕೆದಾನ, ಸುವರ್ಣದಾನ, ಅಷ್ಟೆ ಅಲ್ಲದೆ ಹುಲ್ಲಿನ ಬಣವೆದಾನ, ನಿವೇಶನದಾನ ಕೊಟ್ಟಿರುವುದನ್ನು ನೋಡಬಹುದು. ಇವಲ್ಲದೆ ವೈಯಕ್ತಿಕವಾಗಿ ಜೈನ ಬಸದಿಗಳಲ್ಲಿ ಇದ್ದಂತಹ ಮುನಿಗಳಿಗೆ, ದೇವಾಲಯದ ಅರ್ಚಕರಿಗೆ, ವಿದ್ಯಾದಾನಕ್ಕಾಗಿ, ಹುಣ್ಣಿಮೆ ಮತ್ತು ದೀಪಾವಳಿಯ ಹಬ್ಬಗಳ ಸಂದರ್ಭಗಳಲ್ಲಿ ಅಂದಿನ ಪೂಜೆಗಾಗಿ ಹತ್ತು ಹಲವು ಬಗೆಯ

ದಾನಕೊಟ್ಟಿರುವುದನ್ನು ನೋಡಲಾಗಿದೆ. ಇವುಗಳ ಜೊತೆಗೆ ಗೋಸಾಸದಾನ ವಿಷಯಗಳ ಬಗ್ಗೆಯೂ ಮತ್ತು ಹೂದೋಟ ದಾನದ ಬಗ್ಗೆಯೂ ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸ್ಮಾರಕ ಶಾಸನಗಳನ್ನು ಕುರಿತು ಚರ್ಚಿಸಲಾಗಿದೆ. ದಕ್ಷಿಣ ಗದಗ ಜಿಲ್ಲೆಯ ಭಾಗದಲ್ಲಿ ದೊರೆಯುವ ಸ್ಮಾರಕ ಶಾಸನಗಳಾದ ವೀರಗಲ್ಲು, ತುರುಗೊಳ್ಕಾಳಗ, ಮಹಾಸತಿಕಲ್ಲುಗಳು, ಆತ್ಮಬಲಿಕಲ್ಲುಗಳು, ಹುಲಿಬೇಟೆಕಲ್ಲುಗಳು, ನಿಸಿಧಿಶಾಸನಗಳು, ಇವುಗಳ ಬಗ್ಗೆ ಚರ್ಚಿಸುತ್ತ, ಅಂದಿನಕಾಲದ ಸಾಮಾಜಿಕ ನಂಬಿಕೆಗಳು, ಅಂದಿನ ಜನರ ಆತ್ಮವಿಶ್ವಾಸ, ವೀರರಿಗೆ ದೊರೆಯುತ್ತಿದ್ದ ಗೌರವ, ಉಂಬಳಿ, ತೆರಿಗೆ ವಿನಾಯಿತಿ, ಇವುಗಳಲ್ಲದೆ ಸಾಹಸಪ್ರಿಯರಾದ ನಮ್ಮ ಜನರು ಕೈಗೊಳ್ಳುತ್ತಿದ್ದ ಸಾಹಸದ ಪ್ರತೀಕವಾದ ಹುಲಿಬೇಟೆ, ಸತಿಆಚರಣೆ, ಜೋಳವಾಳಿ, ವೇಳವಾಳಿ, ಗರುಡಪದ್ಧತಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಈ ಜಿಲ್ಲೆಯ ಇತಿಹಾಸದ ಬಗ್ಗೆ ಅವಲೋಕಿಸುತ್ತ, ಗದಗ ಜಿಲ್ಲೆಯು ಯಾವ ಯಾವ ರಾಜರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದನ್ನು ಮೌರ್ಯರಿಂದ ಮೊದಲ್ಗೊಂಡು ವಿಜಯನಗರದವರೆಗಿನ ಶಾಸನಗಳನ್ನು ಆಧರಿಸಿ, ಅಂದಿನ ಕಾಲದ ರಾಜರ ಸಾಧನೆಗಳನ್ನು, ಅವರು ಸಾಧಿಸಿದ ದಿಗ್ವಜಯಗಳನ್ನು, ಅವರು ನೀಡಿದ ದಾನಧರ್ಮಗಳ ಬಗ್ಗೆ ವಿವೇಚಿಸಲಾಗಿದೆ. ಇನ್ನೂ ಮುಂದುವರೆದು ಅವರ ಕಾಲದ ಸಾಮಾಜಿಕ, ಆರ್ಥಿಕ, ಧಾರ್ಮಿಕ ಪರಿಸ್ಥಿತಿ, ಆಡಳಿತ ವಿಭಾಗಗಳು, ಅವರ ಕಾಲದಲ್ಲಿ ಪ್ರಸಿದ್ಧಿಯಲ್ಲಿ ಇದ್ದ ರಾಜಧಾನಿಗಳು, ಶಾಸನದಲ್ಲಿ ತಿಳಿಸಿರುವಂತೆ ಆಡಳಿತ, ಸ್ಥಳನಾಮಗಳು, ರಾಜ್ಯದ ಆದಾಯ, ಅವರ ಕಾಲದಲ್ಲಿ ಇದ್ದ ವ್ಯಾಪಾರಿ ಸಂಘಗಳು, ಭೂಮಿಯನ್ನು ಅಳೆಯುತ್ತಿದ್ದ ಅಳತೆ ಮಾಪನಗಳು, ಅಲ್ಲದೆ ಪ್ರಮುಖ ರಾಜರ ಕೈಕೆಳಗೆ ಕಾರ್ಯನಿರ್ವಹಿಸುತ್ತಿದ್ದ ಮಂತ್ರಿಗಳು, ಮಹಾಮಂಡಳೇಶ್ವರರು, ಮಂಡಳೇಶ್ವರರು, ಮಹಾಸಾಮಂತರು, ಸಾಮಂತರು, ಪಟ್ಟಸಾಹಣೀಗಳು, ದಂಡಾಧಿಪತಿಗಳು, ಸಂಧಿವಿಗ್ರಹಿಗಳು, ನಾಡಗೌಂಡರುಗಳು, ಪುರಪ್ರಮುಖರು, ಪಟ್ಟಣಶೆಟ್ಟರು ಮುಂತಾದವರ ಬಗ್ಗೆ ವಿವೇಚಿಸಿದೆಯಲ್ಲದೆ, ಶಾಸನಗಳು ರಚನೆಯಾಗಲು ಪ್ರಮುಖ ಕಾರಣರಾದ ಶಿಲ್ಪಿಗಳು, ರೂವಾರಿಗಳು, ಖಂಡರಣೆಕಾರರು, ಕವಿಗಳ ಬಗ್ಗೆ ಈ ಅಧ್ಯಾಯದಲ್ಲಿ ವಿಮರ್ಶಿಸಲಾಗಿದೆ. ಇಲ್ಲಿಯ ಶಾಸನಗಳಲ್ಲಿ ಹುಡುಕಿದಷ್ಟು ಹೊಸ ಹೊಸ ವಿಚಾರಗಳೂ ಹೊರಬರುತ್ತವೆ.

ಐದನೆಯ ಅಧ್ಯಾಯದಲ್ಲಿ ಶಾಸನ ಸಾಹಿತ್ಯದ ಬಗ್ಗೆ ವಿವೇಚಿಸಿದ್ದು ಶಾಸನಗಳಲ್ಲಿ ದೊರೆಯುವ ಕಂದ, ವೃತ್ತ ಪದ್ಯಗಳ ಬಗ್ಗೆ ವಿವೇಚಿಸಲಾಗಿದೆ. ಅವುಗಳಲ್ಲಿ ಬರುವ ನಾಡವರ್ಣನೆ, ಊರಿನ ವರ್ಣನೆ, ಸ್ತ್ರೀವರ್ಣನೆ, ಪುರುಷವರ್ಣನೆ, ಯತಿಗಳ ವರ್ಣನೆಯಲ್ಲದೆ, ಅವುಗಳಲ್ಲಿ ಬರುವ ವಿಶೇಷವಾದ ವೈಶಿಷ್ಟ್ಯಗಳನ್ನು ಈ ಅಧ್ಯಾಯದಲ್ಲಿ ವಿಮರ್ಶಿಸಲಾಗಿದೆ. ಕಡಿಮೆ ಸ್ಥಳಾವಕಾಶದಲ್ಲಿಯೂ ಸಹ

ಶಾಸನಕವಿಗಳು ಎಷ್ಟು ಸೊಗಸಾಗಿ ಸಾಹಿತ್ಯ ರಚನೆ ಕಾರ್ಯದಲ್ಲಿ ತೊಡಗಿದ್ದಾರೆ ಎಂಬುದನ್ನು ಇಲ್ಲಿ ನೋಡಲಾಗಿದೆ. ಇವರು ನಮ್ಮ ಸಂಸ್ಕೃತಿಯನ್ನು ಉಳಿಸಿಕೊಡುವಲ್ಲಿ ಪ್ರಮುಖ ಪಾತ್ರವಹಿಸಿರುವುದರ ಚಿತ್ರಣವನ್ನು ಇಲ್ಲಿ ವಿವೇಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ದಕ್ಷಿಣ ಗದಗ ಜಿಲ್ಲೆಯಲ್ಲಿ ದೊರೆಯುವ ಶಾಸನದಲ್ಲಿ ಉಲ್ಲೇಖಿತವಾದ ಜೈನಬಸದಿಗಳು, ದೇವಾಲಯಗಳ ಬಗ್ಗೆ ವಿವೇಚಿಸಲಾಗಿದೆ. ಅಂತಹ ದೇವಾಲಯಗಳು ಯಾವುವು? ಅವುಗಳ ನಿರ್ಮಾಣ ಯಾವ ಸಂದರ್ಭದಲ್ಲಿ ಆಗಿದೆ? ಆ ದೇವಾಲಯದ ವಿಶೇಷತೆ ಏನು? ಮತ್ತು ಯಾವ ರಾಜನ ಕಾಲದಲ್ಲಿ ಯಾರು ಕಟ್ಟಿಸಿದರು? ಎಂಬುದನ್ನು ನೋಡಲಾಗಿದೆಯಲ್ಲದೆ, ಪೂರ್ವದಿಂದಲೂ ಉಳಿದು ಬಂದಿರುವ ದೇವಾಲಯಗಳು ಯಾವುವು? ಕಾಲನ ಹೊಡೆತಕ್ಕೆ ಸಿಕ್ಕಿ ಹಾಳಾದ ದೇವಾಲಯಗಳು, ಬಸದಿಗಳು ಯಾವುವು? ಎಂಬುದರ ಬಗ್ಗೆ ಇಲ್ಲಿ ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಶಾಸನಶಿಲ್ಪದ ಬಗ್ಗೆ ಚರ್ಚಿಸಲಾಗಿದ್ದು, ದಕ್ಷಿಣ ಗದಗು ಜಿಲ್ಲೆಯಲ್ಲಿ ದೊರೆಯುವ ಲಿಪಿಸಹಿತ ಮತ್ತು ಲಿಪಿರಹಿತ ಶಾಸನಗಳಲ್ಲಿ ಅಡಕವಾಗಿರುವ ಶಿಲ್ಪವನ್ನು ತೆಗೆದುಕೊಂಡು ದಾನಶಾಸನ ಶಿಲ್ಪ, ವೀರಗಲ್ಲುಗಳಲ್ಲಿನ ಶಿಲ್ಪ, ಮಹಾಸತಿ ಶಿಲ್ಪ, ಆತ್ಮಬಲಿ ಶಿಲ್ಪ, ಪ್ರಾಣಿಬೇಟೆ ಶಿಲ್ಪ, ವಾಮನಮುದ್ರೆ ಶಿಲ್ಪ, ದೇವತೆ ಶಿಲ್ಪ ಮುಂತಾದವುಗಳ ಬಗ್ಗೆ ನೋಡುತ್ತ ದಾನಶಾಸನ ಶಿಲ್ಪಗಳನ್ನು ಜೈನದಾನಶಾಸನ ಶಿಲ್ಪ, ಶೈವದಾನಶಾಸನ ಶಿಲ್ಪ, ವೈಷ್ಣವದಾನಶಾಸನ ಶಿಲ್ಪ, ಎಂದು ವಿವೇಚಿಸಲಾಗಿದೆ. ವೀರಗಲ್ಲುಗಳಲ್ಲಿನ ಶಿಲ್ಪದ ಬಗ್ಗೆ ನೋಡಲಾಗಿ ವ್ಯಕ್ತಿ-ವ್ಯಕ್ತಿ ಹೋರಾಟ ಶಿಲ್ಪ, ವ್ಯಕ್ತಿ-ಪ್ರಾಣಿ ಹೋರಾಟ ಶಿಲ್ಪ, ಪ್ರಾಣಿ-ಪ್ರಾಣಿ ಹೋರಾಟ ಶಿಲ್ಪ, ತುರುಗೊಳ್ ಶಿಲ್ಪ, ಹೋರಾಟ ಶಿಲ್ಪ ಮುಂತಾದವುಗಳನ್ನು ವಿವೇಚಿಸಲಾಗಿದೆ. ಇವುಗಳ ಜೊತೆಗೆ ಪ್ರಾಣಿಬೇಟೆ ಶಿಲ್ಪಗಳಲ್ಲಿ ಹುಲಿಬೇಟೆ ಶಿಲ್ಪ, ಪ್ರಾಣಿ-ಪ್ರಾಣಿಬೇಟೆ ಶಿಲ್ಪ ಮುಂತಾದವುಗಳ ಬಗ್ಗೆ ಚರ್ಚಿಸಲಾಗಿದೆ. ಮಹಾಸತಿ ಶಿಲ್ಪಗಳನ್ನು ನೋಡಲಾಗಿದ್ದು ಇವುಗಳ ಜೊತೆಗೆ ನಿಸಿಧಿ ಶಾಸನಗಳು ಮತ್ತು ಆತ್ಮಬಲಿ ಶಿಲ್ಪಗಳನ್ನು ನೋಡುತ್ತ, ಅಂದಿನ ಸ್ವಾಮಿನಿಷ್ಠೆಯಾದ ವೇಳೆವಾಳಿ, ಜೋಳವಾಳಿ, ಗರುಡಪದ್ಧತಿಯನ್ನು ವಿವೇಚಿಸಲಾಗಿದೆ. ಒಟ್ಟಾರೆ ಈ ಅಧ್ಯಾಯದಲ್ಲಿ ಶಾಸನಶಿಲ್ಪದ ಬಗ್ಗೆ ಕೂಲಂಕಷವಾಗಿ ಅದ್ಯಯನ ನಡೆಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪದ ಅಧ್ಯಾಯವಾಗಿದ್ದು, ಒಟ್ಟಾರೆ ಪ್ರಬಂಧದ ಫಲಿತಾಂಶಗಳನ್ನು ಸಾರರೂಪದಲ್ಲಿ ಹಿಡಿದಿಡಲಾಗಿದೆ. ಅನುಬಂಧದಲ್ಲಿ ಗದಗ ಜಿಲ್ಲೆಯ ನಕ್ಷೆಯನ್ನು ತೆಗೆದುಕೊಂಡು, ಅದರಲ್ಲಿ ನನ್ನ ಅಧ್ಯಯನದ ಕ್ಷೇತ್ರವನ್ನು ಗುರುತಿಸಲಾಗಿದೆ. ಜೊತೆಗೆ ಆಡಳಿತ ವಿಭಾಗಗಳನ್ನು, ಶಾಸನಗಳು ಇರುವ ಪ್ರದೇಶಗಳನ್ನು, ಗ್ರಂಥಋಣ, ಛಾಯಾಚಿತ್ರಗಳನ್ನು ನೀಡಲಾಗಿದೆ. ಒಟ್ಟಾರೆಯಾಗಿ ದಕ್ಷಿಣ ಗದಗ ಜಿಲ್ಲೆಯ ಶಾಸನಗಳನ್ನು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಮುಂತಾದ ಎಲ್ಲಾ ಮಜಲುಗಳನ್ನು ಅಧ್ಯಯನ ಮಾಡಲಾಗಿದೆ. ಇದರೊಂದಿಗೆ ಕ್ಷೇತ್ರಕಾರ್ಯ

ಕೈಗೊಂಡು ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳೊಂದಿಗೆ ದಕ್ಷಿಣ ಗದಗ ಜಿಲ್ಲೆಯ ಪೂರ್ಣ ಪ್ರಮಾಣದ ಸಾಂಸ್ಕೃತಿಕ ಇತಿಹಾಸವನ್ನು ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಮೌರ್ಯ ಮನೆತನದವರು ಈ ಭಾಗವನ್ನು ಆಳಿದರೂ ಸಹ, ಇಲ್ಲಿ ಬಾದಾಮಿ ಚಾಲುಕ್ಯರಿಂದ ಶಾಸನಗಳು ಸಿಗಲು ಪ್ರಾರಂಭವಾಗುತ್ತವೆ. ಅಲ್ಲಿಂದ ಹಿಡಿದು ವಿಜಯನಗರದ ಅರಸರುಗಳವರೆಗೆ ಕಂಡುಬರುವ ಶಾಸನಗಳನ್ನು ಅನುಲಕ್ಷಿಸಿ 'ದಕ್ಷಿಣ ಗದಗ ಜಿಲ್ಲೆಯ ಶಾಸನಗಳು ಒಂದು ಅಧ್ಯಯನ' ಎಂಬ ತಲೆಬರಹದ ಅಡಿಯಲ್ಲಿ ಈ ಅಧ್ಯಯನ ನಡೆಸಲಾಗಿದೆ.

**ಆಕರಗಳು**

ಯಾವುದೇ ಒಂದು ನಾಡಿನ ಇತಿಹಾಸವನ್ನು ತಿಳಿಯಲು ಪ್ರಮುಖ ಅಧಾರಗಳೆಂದರೆ ಅಲ್ಲಿ ದೊರೆಯುವ ಶಾಸನಗಳು, ದೇವಾಲಯಗಳು, ಅಲ್ಲಿಯ ಕವಿಪುಂಗವರು ರಚಿಸಿದ ಕಾವ್ಯಗಳು, ಅಲ್ಲಿಯ ಜನಪದ ಅಂಶಗಳು ಮುಂತಾದವುಗಳು. ಅವುಗಳಲ್ಲೆಲ್ಲ ಶಾಸನಗಳಿಗೆ ಅಗ್ರಸ್ಥಾನ ಲಭಿಸುತ್ತದೆ. ಆದ್ದರಿಂದ ಈ ಅಧ್ಯಯನಕ್ಕೆ ಪ್ರಮುಖವಾಗಿ ದಕ್ಷಿಣ ಗದಗ ಜಿಲ್ಲೆಯಲ್ಲಿ ದೊರೆಯುವ ಶಾಸನಗಳನ್ನು ಆಧಾರವಾಗಿ ಬಳಸಿಕೊಂಡಿದ್ದೇನೆ. ಅವುಗಳಲ್ಲಿ ದಕ್ಷಿಣ ಭಾರತದ ಶಾಸನ ಸಂಪುಟ ೧೧, ೧೫, ೨೦ ಮತ್ತು ಕರ್ನಾಟಕ ಶಾಸನ ಸಂಪುಟ ೨, ೫, ಎಪಿಗ್ರಾಫಿಯಾ ಇಂಡಿಕಾದ ಸಂಪುಟಗಳನ್ನು ಮತ್ತು ಇಂಡಿಯನ್ ಅಂಟಿಕ್ವೈರಿಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನಲ್ಲದೆ, ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನಗಳನ್ನು ಬಳಸಿಕೊಂಡಿದ್ದೇನೆ. ಇವುಗಳ ಜೊತೆಗೆ 'ಇತಿಹಾಸ ದರ್ಶನ' ಸಂಪುಟಗಳನ್ನು, ಅನೇಕ ವಿದ್ವಾಂಸರು ನನ್ನ ಗಮನಕ್ಕೆ ತಂದ ಶಾಸನ ಆಕರಗಳನ್ನು ನನ್ನ ಅಧ್ಯಯನದಲ್ಲಿ ಬಳಸಿಕೊಂಡಿದ್ದೇನೆ.

**I.ಶಾಸನ ಸಂಪುಟಗಳು**

೧. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು

೨. ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳು

೩. ಎಪಿಗ್ರಾಫಿಯ ಇಂಡಿಕಾ ಸಂಪುಟಗಳು

೪. ಇಂಡಿಯನ್ ಅಂಟಿಕ್ವೈರಿ

೫. ಕರ್ನಾಟಕ ಇನ್ಸ್‌ಕ್ರಿಪ್‌ಷನ್ಸ್

೬. ಸೌತ್ ಇಂಡಿಯನ್ ಇನ್ಸ್‌ಕ್ರಿಫ್‌ಷನ್ಸ್ ಸಂಪುಟಗಳು

೭. ಆನಿಯಲ್ ರಿಪೋರ್ಟ್ಸ್ ಆನ್ ಸೌತ್ ಇಂಡಿಯನ್ ಎಪಿಗ್ರಾಫಿ

೮. ಎ ಗೈಡ್ ಟು ದಿ ಕೆ.ಆರ್.ಐ. ಮ್ಯೂಸಿಯಂ

**II.ಶಾಸನಾಧ್ಯಯನ ಕೃತಿಗಳು**

೧. ಕನ್ನಡ ಶಾಸನಗಳ ಸಾಸ್ಕೃತಿಕ ಅಧ್ಯಯನ, ಎಂ.ಚಿದಾನಂದಮೂರ್ತಿ.

೨. ಅಶೋಕನ ಧರ್ಮ ಶಾಸನಗಳು, ಶ್ರೀನಿವಾಸ ರಿತ್ತಿ.

೩. ಆರನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಜೆ.ಎಂ. ನಾಗಣ್ಣ

೪. ಕೃಷ್ಣದೇವರಾಯನ ಶಾಸನಗಳು, ಡಿ.ವಿ.ಪರಮಶಿವಮೂರ್ತಿ.

೫. ಶಾಸನಶಿಲ್ಪ, ಡಿ.ವಿ.ಪರಮಶಿವಮೂರ್ತಿ.

೬. ಉತ್ತರ ಗದಗ ಜಿಲ್ಲೆಯ ಶಾಸನಗಳು ಒಂದು ಅಧ್ಯಯನ, ಎಂ.ಎಸ್.ನರೇಗಲ್.

೭. ವೀರಗಲ್ಲುಗಳು, ಬಿ.ಆರ್. ಹಿರೇಮಠ.

೮. ಸಮಾದಿ, ಬಲಿದಾನ, ವೀರಮರಣ ಸ್ಮಾರಕಗಳು,ಎಂ.ಎಂ. ಕಲಬುರ್ಗಿ.

೯. ಕರ್ನಾಟಕದ ಶಾಸನಗಳು, ಆರ್.ಎಸ್. ಪಂಚಮುಖಿ.

೧೦. ಧಾರವಾಡ ಜಿಲ್ಲಾ ಶಾಸನಸೂಚಿ, ಎಂ.ಎಂ. ಕಲಬುರ್ಗಿ.

೧೧. ಮುಳಗುಂದನಾಡು ಒಂದು ಅಧ್ಯಯನ, ಧನವಂತ ಹಾಜವಗೋಳ.

೧೨. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ. ಚನ್ನಕ್ಕ ಎಲಿಗಾರ.

**III.ಸಾಹಿತ್ಯ ಕೃತಿಗಳು**

೧. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಎಚ್.ತಿಪ್ಪೇರುದ್ರಸ್ವಾಮಿ.

೨. ಶಾಸನ ಸಂಪದ, ಎಂ.ಎಂ. ಕಲಬುರ್ಗಿ ಮತ್ತು ಆರ್.ಸಿ. ಹಿರೇಮಠ.

೩. ಶಾಸನ ಪ್ರವೇಶಿಕೆ, ಸಿ.ಪಿ.ಕೆ.

೪. ಶಾಸನ ಪರಿಚಯ, ಬಾ.ರಾ. ಗೋಪಾಲ್.

೫. ಶಾಸನ ಸಂಚಯ, ಎ.ಎಂ.ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿ.

೬. ಡಂಬಳ ಸಾಂಸ್ಕೃತಿಕ ಅಧ್ಯಯನ, ಹನುಮಾಕ್ಷಿ ಗೊಗಿ. ಪಿ.ಕೆ.ರಾಠೋಡ

೭. ಕನ್ನಡ ದಾಖಲು ಸಾಹಿತ್ಯ, ಕೆ.ರವೀಂದ್ರನಾಥ.

೮. ಗದಗ ಜಿಲ್ಲಾ ದೇವಾಲಯ ಕೋಶ, ಬಾಲಸುಬ್ರಮಣ್ಯ ಮತ್ತು ಸಿ.ಎಸ್.ವಾಸುದೇವನ್.

**IV.ಲೇಖನಗಳು**

೧. ಕಪ್ಪೊತ್ತಗಿರಿ ,ಸ್ಮರಣ ಸಂಚಿಕೆ, ಮುಂಡರಗಿ.

೨. ಲಕ್ಕುಂಡಿ, ಸ್ಮರಣ ಸಂಚಿಕೆ, ಲಕ್ಕುಂಡಿ.

೩. ಪ್ರಜಾವಾಣಿ ದಿನಪತ್ರಿಕೆ.

೪. ಸಂಯುಕ್ತ ಕರ್ನಾಟಕ ದಿನಪತ್ರಿಕೆ

೫. ವಿಜಯ ಕರ್ನಾಟಕ ದಿನಪತ್ರಿಕೆ.

**V. ಜನಪದ ಸಾಹಿತ್ಯ ಮತ್ತು ಐತಿಹ್ಯ**

**VI. ಕ್ಷೇತ್ರಕಾರ್ಯ**

ಇವುಗಳ ಆಧಾರದಿಂದ ನನ್ನ ಪ್ರಬಂಧಕ್ಕೆ ವಿಷಯವನ್ನು ಸಂಗ್ರಹಿಸಿಕೊಂಡಿದ್ದೇನೆ.

## ಅಧ್ಯಾಯ ೨

### ದಾನ ಶಾಸನಗಳು

೨.೧ ದಾನದ ಮಹತ್ವ

೨.೨ ಜೈನ ದಾನಶಾಸನಗಳು

೨.೩ ಶೈವ ದಾನಶಾಸನಗಳು

೨.೪ ವೈಷ್ಣವ ದಾನಶಾಸನಗಳು

೨.೫ ಸಾಮಾಜಿಕ ಕಾರ್ಯಗಳು

# ೨
# ದಾನ ಶಾಸನಗಳು

ನಮ್ಮ ನಾಡು ದಾನಗಳ ತವರೂರು. ಇಲ್ಲಿಯ ಜನರು ಹಸಿದವರಿಗೆ ಅನ್ನ ನೀಡುವುದು, ಬಾಯಾರಿದವರಿಗೆ ನೀರು ಕೊಡುವುದು. ಒಂದು ಪುಣ್ಯದ ಕೆಲಸವೆಂದು ತಿಳಿದಿದ್ದರು. ಇಂತಹ ಕೆಲಸಗಳಿಂದ ಪುಣ್ಯ ಲಭಿಸುತ್ತದೆ, ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ನಮ್ಮ ಪೂರ್ವಜರಲ್ಲಿ ಇತ್ತು. ಕಾಲಾನಂತರ ಇಂತಹ ದಾನಗಳು ಅನ್ಯರಿಂದ ಅಪಹರಿಸಲ್ಪಡುತ್ತಿದ್ದುದರಿಂದ ಇದನ್ನು ಗಮನಿಸಿದ ರಾಜರು ಕೊಟ್ಟಂತಹ ದಾನಗಳನ್ನು ಶಾಸನಗಳಲ್ಲಿ ದಾಖಲಿಸಲಾಗುತಿತ್ತು. ನಂತರ ದಾನ ನೀಡಿದ ಜನರು ತಮ್ಮ ಹೆಸರು ಉಳಿಯಲಿ ಎಂಬ ಕಾರಣದಿಂದ ತಾವುಗಳು ಸಹ ದಾನಶಾಸನಗಳನ್ನು ಹಾಕಿಸಲು ಪ್ರಾರಂಭಿಸಿದರು. ಇದರ ಫಲವಾಗಿ ದಾನಶಾಸನಗಳು ಹೆಚ್ಚು ಹುಟ್ಟಿದವು.

### ೨.೧. ದಾನದ ಮಹತ್ವ

ಈವರೆಗೆ ದೊರೆತಿರುವ ಕನ್ನಡ ಶಾಸನಗಳಲ್ಲಿ ಒಂದಲ್ಲ ಒಂದು ಬಗೆಯ ದಾನ ಶಾಸನಗಳ ಸಂಖ್ಯೆಯೇ ಅತ್ಯಧಿಕ. ಇವು ನಮ್ಮ ನಾಡಿನ ಸಂಸ್ಕೃತಿಯ ಒಂದು ಪ್ರಧಾನವಾದ ಅಂಶವನ್ನು ತೋರಿಸುವುದರ ಜೊತೆಗೆ, ನಮ್ಮ ಪೂರ್ವಜರ ಜೀವನದ ಮೌಲ್ಯಗಳಲ್ಲಿ ಧರ್ಮಕ್ಕೆ ಪ್ರಾಧಾನ್ಯತೆಯನ್ನು ನೀಡಿರುವುದು ಮತ್ತು ಧಾರ್ಮಿಕ ಸಂಸ್ಕೃತಿಯ ಸ್ವರೂಪಗಳು ಈ ಶಾಸನಗಳಲ್ಲಿ ಪ್ರತಿಬಿಂಬಿತವಾಗಿದೆ. ನಮ್ಮ ಪೂರ್ವಜರ ದಾನಪ್ರವೃತ್ತಿಯೇ ದಾನಶಾಸನಗಳ ಉಗಮಕ್ಕೆ ಪ್ರೇರಣೆಯಾಗಿದೆ. ನಮ್ಮ ನಾಡಿನ ಪ್ರಥಮ ಶಾಸನವಾದ "ಹಲ್ಮಿಡಿ ಶಾಸನ" ವೀರಶಾಸನವಾಗಿದ್ದರೂ ಸಹ ಕಡೆಯಲ್ಲಿ ದಾನದ ವಿಚಾರವನ್ನು "ಪಲ್ಮಡಿಉಂ ಮೂಟೆವಳ್ಳಿಉಂ ಕೊಟ್ಟಾರ್"[೧] ಎಂದು ಹೇಳುತ್ತದೆ.

ಆದಿಪುರಾಣದಲ್ಲಿ ಮಹಾಕವಿ ಪಂಪನು ದಾನ ಮತ್ತು ದಾನದ ಫಲಗಳ ಬಗ್ಗೆ ೧೦ನೇ ಆಶ್ವಾಸದಲ್ಲಿ ಈ ರೀತಿ ಹೇಳುತ್ತಾನೆ.

"ಕುಡುವುದುಮಾಹಾರಾಭಯ ಭೈಷಜ್ಯಶಾಸ್ತ್ರ ಭೇದದಿಂ ಚತುರ್ವಿದಮಕ್ಕುಂ. ಪಾತ್ರಮುತ್ತಮಮದ್ಯಮ ಜಘನ್ಯಭೇದದಿಂ ತ್ರಿವಿಧಮಕ್ಕುಮಲ್ಲಿ ದರ್ಶನವಿಶುದ್ಧನುಂ ಶೀಲ ಸಂಪನ್ನನುಮಪ್ಪ ಸಂಯತನುತ್ತಮ ಪಾತ್ರಂ ಶ್ರೀಸಮ್ಯಗ್ದರ್ಶನ ವಿಶುದ್ದನುಮಣುವ್ರತಧಾರಿಯುಮಪ್ಪ ಶ್ರಾವಕಂ ಮಧ್ಯಮ ಪಾತ್ರಂ ದರ್ಶನ ವಿಶುದ್ದನಾಗಿಯುಂ ಶೀಲವ್ರತ ಭಾವನಾರಹಿತನ ಸಂಯತಂ ಜಘನ್ಯ ಪಾತ್ರಂ ಮಿಥ್ಯಾದೃಷ್ಟಿಯಪ್ಪಂ ತನ್ನನೆಂತುಂ ಸಮಜಿನೆಗಟ್ಟೊಡಮಾತನ ಪಾತ್ರಮೆ",

ಫಲಮುಂ ಸುಪಾತ್ರದಾನದ
ಫಲಮೆದಲುತ್ಕೃಷ್ಟಭೋಗ ಭೂಮಿಯೊಳಮನಾ ।

ಕುಲಕಲ್ಪಾಮರಲೋಕಂ
ಗಳೊಳಂ ಪುಟ್ಟಿಸುಗುಮಪ್ಪ ಕಾರಣದಿಂದಂ ॥
ಉೞಿದ ಮಧ್ಯಮಜಘನ್ಯಪಾತ್ರದಾನಂಗಳ್ ಮಧ್ಯಮ ಜಘನ್ಯಭೋಗಭೂಮಿ
ಭೋಗಾನುಭವಮನೀಗುಮ ಪಾತ್ರದಾನಂ ಭೋಗಭೂಮಿಗಳೊಳಂ ಭೋಗ ಭೂಮಿ
ಪ್ರವಿಭಾಗದ್ವೀಪಂಗಳೊಳಂ ತಿರ್ಯಗ್ಜಾತಿತ್ವಮುಮಮಂತರ್ದ್ವೀಪಂಗಳೊಳ್
ಸಮಾನುಷತ್ವಮುಮಂ ಮಾಡುಗುಮಿದಾಹಾರದಾನಫಲಂ.

ಅಭಯರ್ ನಿರೋಗರುಂ ಶ್ರುತ
ವಿಭವ ಸಮನ್ವಿತರುಮಪ್ಪರೆಂಬುದು ಪಿರಿದ ।
ಲ್ತು ಭವಾಂಬುಧಿಯುಮನೀಸುವ
ರಭಯೌಷಧಶಾಸ್ತ್ರದಾನ ಫಲವಿಲಸನದಿಂ ॥[೨]

ಪಾರಮಾರ್ಥಿಕ ದಾನಕ್ಕೆ ಪಾತ್ರದತ್ತಿಯೆಂಬ ಹೆಸರೂ ಇದೆ. ಪಾತ್ರರಲ್ಲಿ ಉತ್ತಮ, ಮಧ್ಯಮ, ಜಘನ್ಯ, ಮತ್ತು ಕುಪಾತ್ರರೆಂಬುದಾಗಿ ನಾಲ್ಕು ವಿಧಗಳು. ನಿಯಮ, ನಿಷ್ಠೆಯ ದಿಗಂಬರ ಮುನಿಗಳು ಉತ್ತಮರು. ವ್ರತಮಾಡುವ ಸನ್ಯಾಸಿಗಳು ಮಧ್ಯಮ ಪಾತ್ರರು. ವ್ರತಾಚರಣೆ ಇಲ್ಲದ ಸನ್ಯಾಸಿಗಳು ಜಘನ್ಯಪಾತ್ರರು. ಇವರಾರು ಅಲ್ಲದ ಜೈನ ಧರ್ಮಿಯರು ಕುಪಾತ್ರರು. ಇವು ಜೈನ ಧರ್ಮದಲ್ಲಿರುವ ದಾನದ ಸಂಕ್ಷಿಪ್ತ ವಿವರಗಳು. ಅದರಲ್ಲಿ ಮೊದಲಿಗೆ ಜೈನ ಶಾಸನಗಳನ್ನು ಅವಲೋಕಿಸುತ್ತಾ ಹೋದರೆ, ಬಸದಿ ನಿರ್ಮಾಣ ಮಾಡಿದ ವಿಚಾರಗಳು, ಅವುಗಳ ನಿರ್ವಹಣೆ ಮಾಡಲು ಬಿಟ್ಟ ದಾನಗಳು, ವ್ಯಕ್ತಿಗೆ ಬಿಟ್ಟ ದಾನಗಳು ಅಲ್ಲದೆ ಇತರೆ ದಾನಗಳನ್ನು ನೋಡಬಹುದು.

ನಮ್ಮ ನಾಡಿನಲ್ಲಿ ದಾನಧರ್ಮಗಳಿಗೆ ಯಾವುದೇ ಕೊರತೆ ಇಲ್ಲ. ಪ್ರಾಚೀನ ಕಾಲದಿಂದಲೂ ನಮ್ಮ ನಾಡು ದಾನ ಧರ್ಮಗಳ ತವರೂರಾಗಿದೆ. ಡಾ॥ಹೆಚ್.ತಿಪ್ಪೇರುದ್ರಸ್ವಾಮಿಯವರು ಹೇಳುವಂತೆ "ಶಾಸನಗಳ ಹುಟ್ಟು ದಾನದಿಂದ".[೩] ಈ ಮಾತು ನಿಜವಾಗಿಯೂ ಅಕ್ಷರಸಹ ನಿಜ. ನಮ್ಮ ಕನ್ನಡ ನಾಡಿನಲ್ಲಿ ದಾನ ಶಾಸನಗಳ ಸಂಖ್ಯೆಯೇ ಅಧಿಕ. ಶೇ.೭೫ರಷ್ಟು ದಾನಶಾಸನಗಳೇ ಇವೆ ಎಂದರೆ ಸತ್ಯಕ್ಕೆ ದೂರವೇನಲ್ಲ. ನಮ್ಮ ನಾಡಿನ ಶಾಸನಗಳು ನಮ್ಮ ಜನರ ಅವಿಭಾಜ್ಯ ಅಂಗವಾದ ದಾನಧರ್ಮದ ಬಗ್ಗೆಯೇ ಅಂದರೆ ಬಸದಿ, ದೇವಾಲಯಗಳ ನಿರ್ಮಾಣ, ಅವುಗಳ ನಿರ್ವಹಣೆಗಾಗಿ, ಅರವಟಿಗೆಗಾಗಿ, ಕೆರೆ, ಬಾವಿ, ಕಾಲುವೆಗಳ ನಿರ್ಮಾಣಕ್ಕಾಗಿ, ಅಷ್ಟೇ ಅಲ್ಲದೆ ಅನ್ನಸತ್ರ ನಡೆಸಲು, ವಿದ್ಯಾಭ್ಯಾಸಕ್ಕಾಗಿ, ಹೀಗೆ ವಿವಿಧ ಕಾರ್ಯಗಳಿಗೆ ಸುಂಕದಾನ, ಸುವರ್ಣದಾನ ಮಾಡಿರುತ್ತಾರೆ.

ಶಾಸನಗಳಲ್ಲಿ ಕೆಲವು ದಾನಗಳನ್ನು "ಮಹಾದಾನ" ಎಂದು ಕರೆಯಲಾಗಿದೆ. ಅಗ್ನಿಪುರಾಣದ ಪ್ರಕಾರ ಹತ್ತು ವಿಧದ ದಾನಗಳನ್ನು ಮಹಾದಾನಗಳೆಂದು ಪರಿಗಣಿಸಲಾಗಿದೆ. ಅವುಗಳೆಂದರೆ ಬಂಗಾರ, ಕುದುರೆ, ಎಳ್ಳು, ಆನೆ, ಕನ್ಯೆ, ರಥ, ಭೂಮಿ, ಮನೆ, ವಧು ಮತ್ತು ಕಂದುಬಣ್ಣದ ಹಸು. ಇವಲ್ಲದೆ ಕೆಲವು ಪುರಾಣಗಳಲ್ಲಿ ಹದಿನಾರು ವಿಧದ ಮಹಾದಾನಗಳನ್ನು ಹೇಳಲಾಗಿದೆ. ಅವುಗಳೆಂದರೆ ತುಲಾಪುರುಷ, ಹಿರಣ್ಯಗರ್ಭ, ಬ್ರಹ್ಮಾಂಡ, ಕಲ್ಪವೃಕ್ಷ, ಗೋಸಹಸ್ರ, ಕಾಮಧೇನು(ಹಿರಣ್ಯಕಾಮಧೇನು), ಹಿರಣ್ಯಾಶ್ವ, ಹಿರಣ್ಯಾಶ್ವರಥ, ಹೇಮಹಸ್ತಿರಥ, ಹೈಯಧಾರಾದಾನ, ವಿಶ್ವಚಕ್ರ, ಕಲ್ಪಲತ, ಸಪ್ತಸಾಗರ, ರತ್ನಧೇನು, ಮಹಾಭೂತಘಟ ಮತ್ತು ಪಂಚಲಾಂಬಲಕ ಇವು ಹದಿನಾರು ರೀತಿಯ ಮಹಾದಾನಗಳು. ಇವುಗಳು ಶಾಸನಗಳಲ್ಲಿ ಉಲ್ಲೇಖವಾಗಿವೆ. ಇಂತಹವುಗಳಲ್ಲಿ ಜೈನ, ಶೈವ, ವೈಷ್ಣವ ದಾನಶಾಸನಗಳನ್ನು ನಾವು ಕಾಣಬಹುದು.

**೨.೨. ಜೈನ ದಾನಶಾಸನಗಳು**

ಕರ್ನಾಟಕದ ಪ್ರಾಚೀನವಾದ, ಜನಪ್ರೀಯವಾದ ಧರ್ಮಗಳಲ್ಲಿ ಜೈನಧರ್ಮವೂ ಒಂದು. ಈ ಧರ್ಮದಲ್ಲಿ ದಾನಕ್ಕೆ ಬಹಳ ಮಹತ್ವವನ್ನು ನೀಡಿದ್ದಾರೆ. ಈ ಧರ್ಮದ ಪ್ರಕಾರ ಮೊದಲು ದಾನಪಡೆದವನು ೧ನೇ ತೀರ್ಥಂಕರನಾದ ಆದಿದೇವನು. ಇವನಿಗೆ ದಾನ ಕೊಟ್ಟವನು (ಆಹಾರ ದಾನ) ಶ್ರೇಯಾಂಶ ರಾಜ (ಜೈನರಲ್ಲಿ ಮೊದಲದಾನಿ). ಜೈನ ಧರ್ಮದಲ್ಲಿ ಲೌಕಿಕ ದಾನ ಮತ್ತು ಪಾರಮಾರ್ಥಿಕ ದಾನವೆಂದು ಎರಡು ರೀತಿ ಇದೆ. ಲೌಕಿಕದಲ್ಲಿ ದಯಾದತ್ತಿ, ಸಮಾನದತ್ತಿ ಮತ್ತು ಸಕಲದತ್ತಿ ಎಂದು ಮೂರು ವಿಧಗಳು. ದಯಾದತ್ತಿ ಎಂದರೆ ಬಾಲ, ಮುದುಕರು, ಮೂಕ, ಕುರುಡ, ಕಿವುಡ, ರೋಗಪೀಡಿತ, ಇವರಿಗೆ ಬದುಕಲು ನೀಡುವ ಅವಶ್ಯ ವಸ್ತುಗಳು. ಸಮಾನದತ್ತಿ ಎಂದರೆ ಜೈನ ಮುನಿಗೆ ತನ್ನೆಲ್ಲಾ ಐಶ್ವರ್ಯವನ್ನು ನೀಡುವುದು. ಸಕಲದತ್ತಿ ಎಂದರೆ ಮನೋನಿಗ್ರಹಕ್ಕಾಗಿ ತನ್ನೆಲ್ಲಾ ಐಶ್ವರ್ಯವನ್ನು ತನ್ನ ಮಗನಿಗೆ ನೀಡುವುದು.

**೨.೨.೧. ಬಸದಿಗಳ ನಿರ್ಮಾಣ**

ನಮ್ಮ ನಾಡಿನಲ್ಲಿ ಉದಯಿಸಿದ ಪ್ರಾಚೀನ ಧರ್ಮಗಳಲ್ಲಿ ಜೈನಧರ್ಮವೂ ಒಂದು. ನಮ್ಮ ನಾಡನ್ನು ಆಳಿದ ರಾಜಮನೆತನಗಳಾದ ಶಾತವಾಹನ, ಗಂಗ, ಕದಂಬ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರು ಹೀಗೆ ಹಲವಾರು ರಾಜಮನೆತನಗಳು ಈ ಧರ್ಮಕ್ಕೆ ಆಶ್ರಯದಾತರಾಗಿದ್ದರಲ್ಲದೆ, ಈ ಧರ್ಮವನ್ನು ಪ್ರೋತ್ಸಾಹಿಸಿದ್ದಾರೆ. ಇನ್ನು ಕೆಲವು ರಾಜರು ಸ್ವತಃ ಈ ಧರ್ಮವನ್ನು ಅನುಸರಿಸಿದವರೂ ಆಗಿದ್ದು ಈ ಧರ್ಮ ಬೆಳೆಯಲು ಸಹಕರಿಸಿದರು ಮತ್ತು ಬಸದಿಗಳನ್ನು ನಿರ್ಮಿಸಲು ಸಹಾಯವನ್ನು ಮಾಡಿದರು. ಅದರ ಫಲವಾಗಿ ನಮ್ಮ ಕರ್ನಾಟಕದಲ್ಲಿ ಹಲವಾರು ಜೈನ ಕೇಂದ್ರಗಳು ಇವೆ. ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆ, ವೇಣೂರು ಮುಂತಾದ ಊರುಗಳು ಈ ಧರ್ಮದ

ಪ್ರಮುಖ ಸ್ಥಳಗಳಾಗಿವೆ. ಈ ಧರ್ಮದ ಪ್ರೋತ್ಸಾಹದ ಫಲವಾಗಿ ನಮ್ಮ ನಾಡಿನಾದ್ಯಂತ ಹಲವಾರು ಶಾಸನಗಳು ಹುಟ್ಟಿವೆ. ಇವುಗಳಲ್ಲಿ ಬಸದಿ ನಿರ್ಮಾಣಕ್ಕಾಗಿ ದಾನ ಮತ್ತು ಈ ಧರ್ಮಕ್ಕಾಗಿ ಶ್ರಮಿಸಿದ್ದನ್ನು ತಿಳಿಸುವ ಶಾಸನಗಳ ಬಗ್ಗೆ ಮೊದಲಿಗೆ ಚರ್ಚಿಸಬಹುದು. ಅಲ್ಲದೆ ಇದರ ಜೊತೆಗೆ ಜೈನ ವಿಗ್ರಹಗಳ ಪ್ರತಿಷ್ಠಾಪನೆ, ಕಂಬ ಮತ್ತು ಬಾಗಿಲುಗಳನ್ನು ನಿಲ್ಲಿಸಿರುವ ಉಲ್ಲೇಖಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

ನಮ್ಮ ನಾಡಿನ ಜನರು ಭಕ್ತಪರಾಧೀನರು. ತಮ್ಮ ಭಕ್ತಿಯನ್ನು ದೇವಾಲಯಗಳನ್ನು ನಿರ್ಮಿಸಲು, ಅವುಗಳ ಸೇವಾಕಾರ್ಯ ನಿಲ್ಲದಂತೆ ನಡೆಯಲು ಹಲವಾರು ಏರ್ಪಾಡುಗಳನ್ನು ಮಾಡುತ್ತಿದ್ದರು. ಅಂತಹವರಲ್ಲಿ ಕೆಲವರು ಬಸದಿಗಳನ್ನು ನಿರ್ಮಿಸಿದವರು ಇದ್ದಾರೆ.

ಕ್ರಿ.ಶ.೯೦೨-೯೦೩ರ ಮುಳಗುಂದದ ಶಾಸನವೊಂದು ಬೆಳ್ವೊಲ-೩೦೦ರ ನಾಡಿನಲ್ಲಿ ಧಾವಳ ವಿಷಯಕ್ಕೆ ಸೇರಿದ ಮುಳಗುಂದ ಗ್ರಾಮದಲ್ಲಿ ಟೀಕಾರ್ಯನು ಬಸದಿಯನ್ನು ನಿರ್ಮಿಸುತ್ತಾನೆ. ಈ ಶಾಸನದಲ್ಲಿ ಶಕವರ್ಷ ೮೨೪ರಲ್ಲಿ ಎಂದು ಹೇಳಲಾಗಿರುವುದರಿಂದ ಇದನ್ನು ಕ್ರಿ.ಶ.೯೦೨-೯೦೩ಕ್ಕೆ ಸೇರಿಸಬಹುದು. ಈ ಶಾಸನದಲ್ಲಿ ಶಕವರ್ಷವನ್ನು ಮಾತ್ರ ಹೇಳಲಾಗಿದೆ. ಉಳಿದ ಯಾವುದೇ ದಿನದ ಉಲ್ಲೇಖವನ್ನು ನೀಡಲಾಗಿಲ್ಲ. ಮುಂದೆ ಟೀಕಾರ್ಯನ ಮಗ ಅರಪಾರ್ಯನು ಈ ಬಸದಿಯ ನಿರ್ವಹಣೆಗಾಗಿ ೧೨೦ ಮಹಾಜನರ ಎದುರಿನಲ್ಲಿ 'ಕಂದವರ್ಮ' ಮೂಲ ಭಾಗದಲ್ಲಿ ಭೂಮಿಯನ್ನು ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೪]

ಕ್ರಿ.ಶ.೯೮೬ರ ಮುಂಡರಗಿ ತಾಲೂಕಿನ ಶಿರೂರು ಶಾಸನವು ಅತ್ತಿಮಬ್ಬೆಯ(ಅತ್ತಿಯಬ್ಬೆ) ಬಗ್ಗೆ ತಿಳಿಸುವ ಅತ್ಯಂತ ಪ್ರಾಚೀನ ಶಾಸನ. ಈ ಶಾಸನವನ್ನು ಶಕವರ್ಷ ೯೦೮ರ ಸರ್ವಜಿತು ಸಂವತ್ಸರದ ಫಾಲ್ಗುಣ ಮಾಸದ ನಂದೀಶ್ವರ ಅಷ್ಟಮಿಯ ಭಾನುವಾರದಂದು ಇಂದ್ರಕೀರ್ತಿ ದೇವರ ಕಾಲನ್ನು ತೊಳೆದು, ಮಾಸವಾಡಿ ನಾಡಿನಲ್ಲಿ ಗಾವುಣ್ಡಿಗನಹಳ್ಳಿಯನ್ನು ಸರ್ವಭಾದಪರಿಹಾರವಾಗಿ ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಇಲ್ಲಿ ಅತ್ತಿಮಬ್ಬೆಯನ್ನು ಹೊಗಳಿರುವ ಒಂದು ಕಂದ ಪದ್ಯದ ಜೊತೆಗೆ ಅವಳ ಸಂಬಂಧಿಕರ ಹೆಸರುಗಳನ್ನು ಸಹ ಹೇಳಲಾಗಿದೆ. "ಜಿನನಿಳಯನಿವಹಕೆಲ್ಮಂ ಮುನ್ನಂ ಕರುವೆನೆ ಮಾಡಿಸಿದಳಾ ಶಿರವೂರದೂ... ಇಸ್ತು ತನ್ನ ಮಾಡಿಸಿ ಬಸದಿಯ"[೫] ಎಂದಿರುವುದರಿಂದ ತಾನು ಸಿರಿವೂರಲಿ ಕಟ್ಟಿಸಿದ ಬಸದಿಗೆ ದಾನ ಕೊಟ್ಟ ವಿಚಾರವನ್ನು ತಿಳಿಸಲಾಗಿದೆ.

ಲಕ್ಕುಂಡಿಯಲ್ಲಿ ಕ್ರಿ.ಶ.೧೦೦೭ರ ಅತ್ತಿಮಬ್ಬೆಯ ಮತ್ತೊಂದು ಶಾಸನವಿದ್ದು, ಅದು ಅತ್ತಿಮಬ್ಬೆಯು ಬ್ರಹ್ಮಜಿನಾಲಯ ನಿರ್ಮಾಣ ಮಾಡಿದ ವಿಚಾರವನ್ನು ತಿಳಿಸುತ್ತದೆ. ಈ ಶಾಸನದ ಕೊನೆಯ ಭಾಗದಲ್ಲಿ ಬರುವ ಎರಡು ಪದ್ಯಗಳು ಗಮನಾರ್ಹವಾಗಿದ್ದು ಅತ್ತಿಮಬ್ಬೆ ಕಟ್ಟಿಸಿದ ಬಸದಿ ಕುಸಿದು ಬಿತ್ತೆಂದು, ಅದನ್ನು ದೆಯ್ವಭರತಾರ್ಯ ಮೊದಲಾದವರು ಅದನ್ನು ಸುಂದರವಾಗಿ ಜೀರ್ಣೋದ್ಧಾರ ಮಾಡಿಸಿದರೆಂದು, ಸಿರಿಪಾಳಸೆಟ್ಟಿಯ ಮಗನಾದ ಬಾಹುಬಲಿ ಈ ಶಾಸನವನ್ನು ಸವಿಸ್ತಾರವಾಗಿ

ಬರೆದನೆಂದು ಆ ಪದ್ಯಗಳಿಂದ ತಿಳಿಯುತ್ತದೆ. ಈ ಶಾಸನವನ್ನು ಎರಡು ಬಾರಿ ರಚಿಸಲಾಗಿದೆ. ಕ್ರಿ.ಶ.೯೯೫ರಲ್ಲಿ ರಚಿಸಿದ ಶಾಸನ ಒಡೆದು ಹಾಳಾಗಲಾಗಿ, ಅದೇ ವಿಚಾರಗಳನ್ನೇ ಹೊತ್ತ ಕ್ರಿ.ಶ.೧೦೦೭ರ ಶಾಸನ ಅತ್ತಿಮಬ್ಬೆಯ ಹಲವಾರು ವಿಷಯಗಳನ್ನು ಹೊರಹಾಕುತ್ತದೆ. ಅತ್ತಿಮಬ್ಬೆಯು ತಮ್ಮ ಗುರುಗಳಾದ "ಸೂರಸ್ತಗಣದ ಅರ್ಹನನ್ದಿಪಣ್ಡಿತ ದೇವರ್ಗ್ಗೆ ಶ್ರೀ ಲೋಕ್ಯಗುಣ್ಡಿಯೊಳ್ಬಸದಿಯಂ ಮಾಡಿಸಿ"[೭] ಎಂದು ಉಲ್ಲೇಖಿಸಲಾಗಿದೆ. ಇದರಲ್ಲಿ ರನ್ನನ ಅಜಿತಪುರಾಣದ ೨ ಪದ್ಯಗಳಿವೆ. ಆದ್ದರಿಂದ ಈ ಶಾಸನವನ್ನು ರನ್ನನು ರಚಿಸಿರಬಹುದೆಂದು ಊಹಿಸಬಹುದು. ಈ ಶಾಸನದಲ್ಲಿ ಸುಮಾರು ೮೮ ಸಾಲುಗಳಿದ್ದು ಎತ್ತರವಾಗಿಯೂ, ಅಗಲವಾಗಿಯೂ ಇದೆ. ಇರಿವಬೆಡಂಗನ ಗುಜರಾಥದ ಮೇಲಿನ ದಂಡಯಾತ್ರೆಯನ್ನು ಉಲ್ಲೇಖಿಸಿದೆ. ಅತ್ತಿಮಬ್ಬೆಯ ನಾಲ್ಕುಪವಾಡಗಳನ್ನು ಇದು ತಿಳಿಸುತ್ತದೆ.

ನರಪನ ಬೆಸದಿಂ ಜಿನನಂ
ಶಿರದೊಳ್ಸಲೆ ತಾಳ್ದಿ ದಾನಚಿಂತಾಮಣಿ ನಿ
ರ್ಭರ ಗೋದಾವರಿಯಂ ಪುಗೆ
ಪರಿ ಯುಡುಗಿದುದೆಂದೂಡೊಳ್ಪನದನೇ ವೇಳ್ವೆಂ ॥

ಚಾಲುಕ್ಯ ಸೈನ್ಯವು ಗೋದಾವರಿ ನದಿಯನ್ನು ದಾಟಿ ಆಚೆಯ ದಡದಲ್ಲಿರುವ ಶತ್ರು ಸೈನ್ಯವನ್ನು ಎದುರಿಸಬೇಕಾಗಿರುತ್ತದೆ. ಆದರೆ ನದಿಯಲ್ಲಿ ನೀರು ತುಂಬಿ ಹರಿಯುತ್ತಿದ್ದರಿಂದ ಆ ಕಡೆಗೆ ಸಾಗಲು ಸಾದ್ಯವಿಲ್ಲದಂತಹ ಪರಿಸ್ಥಿತಿ. ಆಗ ರಾಜನು ಚಿಂತಾಕ್ರಾಂತನಾಗಿ ಅತ್ತಿಮಬ್ಬೆಯಲ್ಲಿ ಪ್ರಾರ್ಥಿಸಲು, ಆ ಪ್ರಾರ್ಥನೆಗೆ ಒಪ್ಪಿದ ಅತ್ತಿಮಬ್ಬೆ ಜಿನಮೂರ್ತಿಯನ್ನು ತಲೆಯ ಮೇಲೆ ಹೊತ್ತು ಗೋದಾವರಿ ನದಿಯಲ್ಲಿ ಇಳಿದೊಡನೆ ನದಿಯ ನೀರು ಜಲ್ಲನೆ ಇಳಿದು ನಡೆದಾಡುವ ಮಟ್ಟಕ್ಕೆ ಬಂದಿತು. ಈ ಸಂತೋಷದಿಂದ ರಾಜನು ಗೌರವದಿಂದ ಅತ್ತಿಮಬ್ಬೆಗೆ ಪೂಜೆ ಸಲ್ಲಿಸಿದನು.

ಮದವತ್ಕರಿಸೆಜೆಯಂ ಪಜೆ
ದೊದವಿದ ಮುಳಿಸಿಂದೆ ಭೋರನೆಯ್ತಂದೊಡದ ।
ರ್ಕ್ಕದಿರದಿರೆ ಭಕ್ತಿಯಿಂದದು
ಪದಯುಗ ಕೆಜಗಿದುದು ದಾನಚಿಂತಾಮಣಿಯಾ ॥

ಮದವೇರಿದ ಆನೆಯೊಂದು ಕಟ್ಟಿದ ಕಟ್ಟನ್ನು ಬಿಚ್ಚಿಕೊಂಡು ಬೀದಿಗಳಲ್ಲಿ ಹುಚ್ಚೆದ್ದು ಓಡುತ್ತಿರುವಾಗ ಅದರಿಂದ ಗಾಬರಿಗೊಂಡು ತೊಂದರೆಗೊಳಗಾದ ಜನ ಅತ್ತಿಮಬ್ಬೆಯಲ್ಲಿ ಪ್ರಾರ್ಥಿಸಿದರು. ಆಗ ಅತ್ತಿಮಬ್ಬೆಯು ಶಾಂತಚಿತ್ತಳಾಗಿ, ಗಾಂಭೀರ್ಯದಿಂದ "ಣ"ಮೋಕಾರ ಮಂತ್ರ ಹೇಳುತ್ತಾ ಆನೆಯ

ಹೆಸರು ಕರೆದು ಈ ಉನ್ಮತ್ತತನವನ್ನು ಬಿಡಲು ಹೇಳಿದ ಕೂಡಲೇ, ಮದವೇರಿದ ಆನೆ ತನ್ನ ಮದ ಕಳೆದುಕೊಂಡು ಅತ್ತಿಮಬ್ಬೆಯ ಕಾಲಿಗೆರಗಿತು.

ಮುದದರ್ಚ್ಚಿಪ ಜಿನಬಿಂಬಂ
ನದಿಯೊಳ್ಕಯ್ಬರ್ದ್ದುಕಿ ಬಿಟ್ಟೊಡದು ಬಪ್ಪಿನ ಮು
ಣ್ಬುದ ನುಳಿದಿರಲೆಂಟುದಿನ
ಕ್ಕದು ಬಂದುದು ಕಯ್ಗೆ ದಾನಚಿಂತಾಮಣಿಯಾ ॥

ಮುದದಿಂದ ಪೂಜಿಸುತ್ತಿದ್ದ ಜಿನಬಿಂಬ ನದಿಯಲ್ಲಿ ಪ್ರಯಾಣಿಸುವಾಗ ಕೈಜಾರಿ ಬಿದ್ದುಹೋಗಲು ಆಗ ಅತ್ತಿಮಬ್ಬೆಯು ಚಿಂತಾಕ್ರಾಂತಳಾಗಿ ಆಹಾರ ನೀರು ತೊರೆದು ಜೈನ ಬಸದಿಯಲ್ಲಿ "ಣ"ಮೋಕಾರ ಮಂತ್ರ ಜಪಿಸುತ್ತಾ ಕುಳಿತುಬಿಡುತ್ತಾಳೆ. ಆಗ ಎಂಟು ದಿನಗಳ ನಂತರ ಜಿನಬಿಂಬವು ಮರಳಿ ಅತ್ತಿಮಬ್ಬೆಯ ಕೈಸೇರುತ್ತದೆಂದು ಈ ಪದ್ಯದಿಂದ ತಿಳಿದುಬರುತ್ತದೆ.

ಪ್ರಳಯಾಗ್ನಿಯನ್ತೆ ಕಟಕಮ
ನೊಳಕೊಣ್ಡುಳುರ್ವ್ವಗ್ನಿ ದಾನಚಿನ್ತಾಮಣಿ ನಿ
ರ್ಮ್ಮಳ ಜಿನ ಗನ್ಧೋದಕಮಂ
ತಳಿಯಲ್ಚುಪಶಮಿಸಿತೆಂದೊಡೇ ವಣ್ಣಿಸುವೆ ॥

ಬ್ರಹ್ಮಾಂಡವನ್ನೇ ಸುಟ್ಟು ಹಾಕುವ ಪ್ರಳಯಾಗ್ನಿಯೊಂದು ಕಟಕದಲ್ಲಿ ಕಾಣಿಸಲಾಗಿ, ದಿಕ್ಕೆಟ್ಟ ಜನ ಅತ್ತಿಮಬ್ಬೆಯಲ್ಲಿ ಮೊರೆಯಿಡಲಾಗಿ, ಅತ್ತಿಮಬ್ಬೆಯು ಜನತೆಗೆ ಧೈರ್ಯವನ್ನು ಹೇಳಿ, ನಿರ್ಮಲ ಮನಸ್ಸಿನಿಂದ ಜಿನಗಂಧೋದಕವನ್ನು ಅಗ್ನಿಗೆ ಚಿಮುಕಿಸಲು ಅಗ್ನಿ ಮರುಕ್ಷಣವೆ ಉಪಶಮನವಾಯಿತು. ಹೀಗೆ ಆ ಶಾಸನದಲ್ಲಿ ಆಕೆಯ ಪವಾಡವನ್ನು ಹೊಗಳಲಾಗಿದೆ. ಇಲ್ಲಿ ಇದ್ದ ಮತ್ತೊಂದು ಶಾಸನ ಇಂದು ಇಲ್ಲವಾಗಿದೆ. ಇದರಲ್ಲಿ "ಸೆಟ್ಟಿಯ ಮಗಂ ಸೋವಿಸೆಟ್ಟಿ ಮುನ್ನಂ ಬಸದಿಯ ಮಾಡಿಸಿ ಬಿಟ್ಟ"[೭] ಎಂದು ಇರುತ್ತದೆ. ಅಂದರೆ ಮೊದಲೇ ಸೋವಿಸೆಟ್ಟಿ ಎಂಬುವವನು ಬಸದಿಯನ್ನು ನಿರ್ಮಿಸಿದ್ದ ಎಂದು ತಿಳಿದು ಬರುತ್ತದೆ. ಅಲ್ಲದೆ ಮೊದಲು ನಿರ್ಮಾಣವಾದಂತಹ ಬಸದಿಗಳಿಗೆ ನಮ್ಮ ಜನರು ಮಾನ್ಯತೆ ನೀಡಿ ಅವುಗಳ ನಿರ್ವಹಣೆಗಾಗಿ ಮುಂದೆಯೂ ಶ್ರಮಿಸುತ್ತಿದ್ದುದು ನಮಗೆ ವೇದ್ಯವಾಗುತ್ತದೆ.

ಕ್ರಿ.ಶ.೧೨ನೇ ಶತಮಾನದ ಶಾಸನವು ಮುಂಡರಗಿ ತಾಲೂಕಿನ ಕಲಕೇರಿ ಗ್ರಾಮದ ಚಾವಡಿಯ ಹತ್ತಿರ ಅನಾಥವಾಗಿ ಬಿದ್ದಿರುವ ಜಿನಮೂರ್ತಿಯ ಪಾದಪೀಠದಲ್ಲಿ ಇದ್ದು "ಸಕಳಚಂದ್ರಭಟ್ಟಾರಕ ದೇವರ್ಗ್ಗೆ ಬಸದಿಯಂ ಮಾಡಿಸಿಕೊಟ್ಟು, ಪಾರ್ಶ್ವನಾಥ ದೇವರ ಪ್ರತಿಷ್ಠೆಯಂ ಮಾಡಿದ"[೮] ಎಂದು ಸ್ಪಷ್ಟವಾಗಿ ಹೇಳಿದೆ. ಸಕಳಚಂದ್ರಭಟ್ಟಾರಕ ಮುನಿಗಳಿಗೆ ಭಾನುಕೀರ್ತಿಸಿದ್ಧಾಂತಿದೇವನ ಶಿಷ್ಯ

ಹಾಲಿಗಾವುಂಡನು ಬಸದಿಯನ್ನು ಕಟ್ಟಿಸಿಕೊಟ್ಟು, ಅದರಲ್ಲಿ ಪಾರ್ಶ್ವನಾಥ ದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿ, ಅಲ್ಲಿ ಪೂಜಾಕಾರ್ಯಗಳು ನೆಲೆಗೊಳ್ಳುವಂತೆ ಮಾಡಿದನು ಎಂದು ತಿಳಿಸುತ್ತದೆ.

ಇಲ್ಲಿ ಕೆಲವೇ ಶಾಸನಗಳು ಬಸದಿಯನ್ನು ನಿರ್ಮಿಸಿದ ವಿಚಾರವನ್ನು ತಿಳಿಸಿದರೂ ಬಸದಿ ನಿರ್ಮಾಣದ ಆಸಕ್ತಿ ಅನೇಕರಿಗಿತ್ತು. ಅದರ ಮೂಲಕ ಅವರು ಜೀವನ ಸಾರ್ಥಕ್ಯವನ್ನು ಪಡೆಯುತ್ತಿದ್ದರೆಂದು ಮತ್ತು ಆಯಾ ಕಾಲದ ಧಾರ್ಮಿಕ ಪ್ರೇರಣೆಗಳನ್ನು ತಿಳಿಸುತ್ತವೆ.

### ೨.೨.೨. ಬಸದಿಗಳ ಜೀರ್ಣೋದ್ಧಾರ

ನಮ್ಮ ಪೂರ್ವಜರು ಹಿಂದೆ ಕಟ್ಟಿಸಿ ಬಿಟ್ಟುಹೋದ ಸ್ಮಾರಕಗಳು, ದೇವಾಲಯಗಳು, ಜಿನಾಲಯಗಳು ಯಾವುದಾದರೂ ಯುದ್ಧಗಳು ನಡೆದಾಗ, ಊರಿಗೆ ಬೆಂಕಿಬಿದ್ದಾಗ, ಇತರೆ ಪ್ರಕೃತಿ ವಿಕೋಪಗಳಿಂದ ಹಾಳಾದಾಗ ಮುಂದಿನ ತಲೆಮಾರಿನವರು ಅವುಗಳನ್ನು ರಕ್ಷಿಸಿ ಹಾಳಾಗದಂತೆ ನೋಡಿಕೊಳ್ಳುತ್ತಿದ್ದರು. ಜನರು ಅವುಗಳು ನಶಿಸದಂತೆ ಜೀರ್ಣೋದ್ಧಾರದ ಕೆಲಸಗಳನ್ನು ಸ್ವತಃ ಮಾಡಿಸುತ್ತಿದ್ದರು. ಲಕ್ಕುಂಡಿಯಲ್ಲಿ ಅತ್ತಿಮಬ್ಬೆಯು ಕಟ್ಟಿಸಿದ ಬಸದಿಯು ಬೀಳಲಾಗಿ ಅದನ್ನು ಸಿರಿಪಾಳಶೆಟ್ಟಿಯು ಪುನಃ ಜೀರ್ಣೋದ್ಧಾರ ಮಾಡಿಸಿದ. ಇಂತಹ ಕಾರ್ಯಗಳ ನೆನಪಿಗಾಗಿಯೂ ಸಹ ಅನೇಕ ಶಾಸನವನ್ನು ಬರೆಸಿದ್ದಾರೆ.

ಲಕ್ಷ್ಮೇಶ್ವರದಲ್ಲಿ ಎರಡನೇ ವಿಕ್ರಮಾದಿತ್ಯನ ಕಾಲದ ಕ್ರಿ.ಶ.೭೩೫ರ ಶಾಸನವಿದ್ದು, ಅದು ಬಾಹುಬಲಿ ಶ್ರೇಷ್ಠಿಯ ವಿನಂತಿಯ ಮೇರೆಗೆ, ಅರಸನಿಂದ ಧವಳ ಜಿನಾಲಯದ ಜೀರ್ಣೋದ್ಧಾರ ಮಾಡಿದ ವಿಷಯವನ್ನು "ಧವಳ ಜಿನಾಲಯಸ್ಯ ಜೀರ್ಣೋದ್ಧಾರಣಂ ಕೃತ್ವಾ" ಎಂದು ಸ್ಪಷ್ಟಪಡಿಸುತ್ತದೆ. ನಮ್ಮ ಜನರು ನಾಶದಂಚಿನಲ್ಲಿದ್ದಂತಹ ಪವಿತ್ರ ಜಿನಾಲಯಗಳನ್ನು ಬಹಳ ಎಚ್ಚರಿಕೆವಹಿಸಿ, ಕಾಳಜಿಯಿಂದ ಉನ್ನತೀಕರಿಸಿರುವುದು ನಮಗೆ ತಿಳಿಯುತ್ತದೆ.

ಇದೇ ತರಹ ಕ್ರಿ.ಶ.೧೨-೧೩ನೇ ಶತಮಾನಕ್ಕೆ ಸೇರಿದ ನಗರ ಉದ್ಧಾರಕ(ಸುಧಾರಕ) ಉಕ್ಕಲದೇವನ ಶಾಸನ ಇದ್ದು "ಕಲಿದೇವ ಸ್ವಾಮಿಯಾದೀ ಜಿನ ಭವನ ಮಹಾಮಂಟಪಮರಿ ಮಾಸಲುಮುಂಸಲರ್ಗ್ಗ ಕೊಳ್ವಾಗದಯಯರಿಸಿರಲ ನವದಾನಾತ್ಮಕಂ ದಾನಭೂಮಿ ಮೆಯ್ಗಲಿ ಜೀರ್ಣೋದ್ದಾರಮಂ ಮಾಡಿಸಿದನೆನಲಿದೇಂ"[೧೦] ಎಂದು ಹೇಳುತ್ತದೆ. ಇಲ್ಲಿ ಇವನನ್ನು ಬಹಳವಾಗಿ ಹೊಗಳಲಾಗಿದೆ. ಅಂತೂ ಹಾಳಾಗುತ್ತಿದ್ದಂತಹ ಜಿನಾಲಯಗಳನ್ನು ಸಹ ನಮ್ಮ ಪೂರ್ವಜರು ಉಳಿಸಿ, ಬೆಳಸಿಕೊಂಡು ಬಂದಿರುವುದು ನಮಗೆ ತಿಳಿಯುತ್ತದೆ.

### ೨.೨.೩. ಪ್ರತಿಷ್ಠಾಪನೆ

ನಮ್ಮ ಜನರು ದೇವಾಲಯಗಳಲ್ಲಿ, ಬಸದಿಗಳಲ್ಲಿ ಮೂರ್ತಿಗಳು ಭಿನ್ನವಾದಾಗ (ಒಡೆದು ಹಾಳಾದಾಗ) ಅವುಗಳು ಪೂಜೆಗೆ ಯೋಗ್ಯವಲ್ಲ ಎಂದು ಭಾವಿಸಿ, ಅದರ ಸ್ಥಾನದಲ್ಲಿ ಪುನಃ ಬೇರೆ

ವಿಗ್ರಹಗಳನ್ನು ಸ್ಥಾಪಿಸಿ, ಪೂಜಾಕಾರ್ಯಗಳು ನಿರ್ವಿಘ್ನವಾಗಿ ಸಾಗಲು ಕ್ರಮಗಳನ್ನು ಕೈಗೊಳ್ಳುತ್ತಿದ್ದರು. ಅದರ ಫಲವಾಗಿ ಪ್ರತಿಷ್ಠಾಪನೆ ಮಾಡಿ ಪುನಃ ನಿತ್ಯ ದೇವತಾ ಕೈಂಕರ್ಯಗಳು ನಡೆಯುವಂತೆ ಮಾಡಿದ್ದಾರೆ. ಅಂತಹವುಗಳನ್ನು ಇಲ್ಲಿ ಚರ್ಚಿಸಿದೆ.

ಯಾದವ ಸಿಂಹಣನ ಕ್ರಿ.ಶ.೧೨೪೭ರ ಶಾಸನವು ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದ ಸಮೀಪವಿರುವ ಗಣಪತಿ ದೇವಾಲಯದ ಗೋಡೆಗೆ ನಿಲ್ಲಿಸಲಾಗಿದ್ದು, ಇದು ಸಿಂಹಣನ ಸೇನಾಪತಿ ಬೀಚಿರಾಜನು "ಶ್ರೀವಿಜಯ ಜಿನಾಲಯಂ ಕಾಲದಿಂ ಜೀರ್ಣಮಾದೊಳು ನಿಜಗುರೂಪದೇಶದಿಂ ಪೊಸದಾಗಿ ಮಾಡಿಸಿ ದೇವರ ಶ್ರೀ ಕಾರ್ಯ..."[೧೧] ಎಂದಿದೆ. ಅಂದರೆ ಶ್ರೀ ವಿಜಯ ಜಿನಾಲಯವನ್ನು ಗುರುಗಳ ಉಪದೇಶದಂತೆ ಜೀರ್ಣೋದ್ಧಾರ ಮಾಡಿ, ವಾಗ್ದೇವಿಯ ಪ್ರತಿಷ್ಠಾಪನೆ ಮಾಡಿಸಿದ ವಿಷಯ ನಮಗೆ ಈ ಶಾಸನದಿಂದ ತಿಳಿದುಬರುತ್ತದೆ.

ಮುಂಡರಗಿ ತಾಲ್ಲೂಕಿನ ಡೋಣಿ ಗ್ರಾಮದ ಕ್ರಿ.ಶ.೧೨೯೯ರ ಶಾಸನವು ಹನುಮಂತ ದೇವಾಲಯದ ಹತ್ತಿರ ಇದ್ದು, "ಸ್ವಸ್ತಿ ಜಿನಶಾಸನಾಯ॥ ವಿಧುನಿಧಿಹರಮಿತಶಕಗತ ಶುಕ್ಲಾಬ್ಧಸುಚೈತ್ರಮಾಸ ಸಿತಸಪ ಮ್ಯಾಂ ಶಶಿವಾರೇ ಮೃಗಶ್ಯಿರ್ಷ ಸೌಭಾಗ್ಯೇ ವೃಷಭಲಗ್ನ ಕೇ ಗರಜಾಯಂ॥ ಬೊಪ್ಪಶ್ರೀಕರಣಾದಿತ್ಯ ಪಾರ್ಶ್ವೇಶಂ ಪಾತ್ಯಾತಿಷ್ಠಪತ್ ಕರ್ಣ್ನಾಟ ಮಂಡಳಂ ಸರ್ವಂ ತಿಪ್ಪರಾಜೇ ಪ್ರಶಾಸತಿ॥ ವ್ರಭಯನಯಾತ್ಮಕತತ್ವಮನುಭಯಗ್ರಂಥಪ್ರಮುಕ್ತಮಲಧಾರಿಮುನಿ ಪ್ರಭು ಬಾಳಚಂದ್ರವಚನದೊಳಭಿನುತಗಣಕಪ್ರಧಾನ ಬೋಪಂತಿಳಿದಂ॥ ಶ್ರೀಮತು ಮಲಿಸೆಟ್ಟಿಯ ಮಕ್ಕಳು ಬೊಪ್ಪಸೆಟ್ಟಿ ಸೇನಬೋವ ಆದಂಣ್ನನ ಮೊಂಮಂ ಶ್ರೀಕರಣದ ಬೊಪ್ಪಣ್ನಂ ಕಾಣೂರ್ಗ್ಗಣದ ಮರುದೇವಿ ಅವ್ವೆಯ ಬಸದಿಗೆ ಕೊಟ್ಟಂ ಪಾರಿಶ್ವ ಪ್ರತಿಮೆ" ಎಂದು ಪಾರ್ಶ್ವನಾಥ ವಿಗ್ರಹದ ಪಾದ ಪೀಠದಲ್ಲಿಯ ಈ ಶಾಸನವು ಕಾಣೂರಗಣದ ಮರುದೇವಿ ಅವ್ವೆಯ ಬಸದಿಗೆ ಪಾರ್ಶ್ವನಾಥ ವಿಗ್ರಹವನ್ನು ತಿಪ್ಪರಾಜನು ಕರ್ನಾಟಕ ಮಂಡಲವನ್ನಾಳುವಾಗ ಶ್ರೀಕರಣದ ಬೊಪ್ಪಣ್ಣನು ದಾನ ಮಾಡಿ ಅದರ ಪ್ರತಿಷ್ಠಾಪನೆ ಮಾಡಿಸಿದನು.[೧೨] ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ.

ಕ್ರಿ.ಶ.೧೬೭೫ರಲ್ಲಿ ಮುಳಗುಂದದ ಮೇಲೆ ಮಹಮ್ಮದೀಯರು ದಾಳಿಮಾಡಿ ಅಲ್ಲಿಯ ಚಂದ್ರನಾಥ ಬಸದಿಯಲ್ಲಿ ಇದ್ದ ಆದಿನಾಥ ವಿಗ್ರಹವನ್ನು ಹಾಳುಮಾಡಿದಾಗ, ಅದನ್ನು ತಿಳಿದ ಬನದಾಂಬಿಕೆ, ಪುನಃ ಆದಿನಾಥ ವಿಗ್ರಹವನ್ನು ಮಾಡಿಸಿ, ಪ್ರತಿಷ್ಠಾಪನೆ ಮಾಡಿದ ಉಲ್ಲೇಖ ಚಂದ್ರನಾಥ ಬಸದಿಯ ಕಂಬದ ಮೇಲಿದೆ.[೧೩] ಇವೆಲ್ಲವುಗಳನ್ನು ವೀಕ್ಷಿಸಿದರೆ ಯುದ್ಧ ಸಂದರ್ಭಗಳಲ್ಲಿ ದೇವಾಲಯಗಳ, ಬಸದಿಗಳ ಮೇಲೆಯೂ ದಾಳಿ ನಡೆದು, ಅವುಗಳು ಹಾಳಾದ ಸಂದರ್ಭದಲ್ಲಿ ಭಕ್ತ ಜನರು ಪುನಃ ಅವುಗಳನ್ನು ಸರಿಪಡಿಸಿ, ಪೂಜಾಕ್ರಮಗಳು ಮತ್ತೆ ನಡೆಯುವಂತೆ ಮಾಡುತ್ತಿದ್ದುದು ತಿಳಿದುಬರುತ್ತದೆಯಲ್ಲದೇ ಧರ್ಮವೈಷಮ್ಯಗಳು ನಡೆಯುತ್ತಿದ್ದುದು ತಿಳಿದುಬರುತ್ತದೆ.

### ೨.೨.೪. ಬಸದಿಗಳ ನಿರ್ವಹಣೆಗಾಗಿ ದಾನ

ನಮ್ಮ ಜನರು ಬಸದಿ, ದೇವಾಲಯಗಳನ್ನು ಕಟ್ಟಿಸುತ್ತಿದ್ದರಲ್ಲದೇ ಅಲ್ಲಿಯ ಪೂಜಾ ಕಾರ್ಯಗಳು ಯಾವುದೇ ಆತಂಕವಿಲ್ಲದೇ ನೆಡೆಯಲು ಅವುಗಳ ನಿರ್ವಹಣೆಗಾಗಿ ಹಲವಾರು ದಾನಗಳನ್ನು ಮಾಡಿದ್ದಾರೆ. ಪ್ರತಿನಿತ್ಯ ದೇವರ ನೈವೇದ್ಯಕ್ಕಾಗಿ, ನಂದಾದೀವಿಗೆಗಾಗಿ ದಾನಗಳನ್ನು ನೀಡಿದ್ದಾರೆ. ಅಂತಹ ವಿಷಯಗಳು ನಮಗೆ ನೂರಾರು ಶಾಸನಗಳಲ್ಲಿ ದೊರೆಯುತ್ತವೆ. ನಮ್ಮ ಪೂರ್ವಜರು ಬಸದಿಗಳನ್ನು ನಿರ್ಮಿಸುವುದು ಎಷ್ಟು ಪವಿತ್ರ ಕೆಲಸ ಎಂದು ತಿಳಿದಿದ್ದರೋ, ಅದರಲ್ಲಿ ಪೂಜಾ ಕೆಲಸಗಳು ಯಾವುದೇ ವಿಘ್ನಗಳಿಲ್ಲದೆ ನಿರ್ವಿಘ್ನವಾಗಿ ನಡೆಯುವುದು ಅಷ್ಟೇ ಪವಿತ್ರ ಕೆಲಸ ಎಂದು ತಿಳಿದಿದ್ದರು. ಅದರಿಂದಾಗಿ ಬಸದಿಗಳಿಗೆ ನಮ್ಮ ಜನರು ಭೂದಾನ, ಗ್ರಾಮದಾನ, ಎಣ್ಣೆದಾನ, ಹೂದೋಟದಾನ ಮುಂತಾದವುಗಳನ್ನು ನೀಡಿರುವುದು ಶಾಸನಗಳಲ್ಲಿ  ಉಕ್ತವಾಗಿದೆ.

### ೨.೨.೪.೧. ಭೂದಾನ

ಲಕ್ಷ್ಮೇಶ್ವರದ ಕ್ರಿ.ಶ.೬೦೮–೬೪೨ ರ ಒಂದು ಶಾಸನ, ಬಾದಾಮಿ ಚಾಲುಕ್ಯ ದೊರೆ ಎರಡನೇ ಪುಲಕೇಶಿಯ ಕಾಲದ್ದಾಗಿದ್ದು,  ಈ ಭಾಗದಲ್ಲಿ ದೊರೆಯುವ ಅತೀ ಪ್ರಾಚೀನ ಶಾಸನವಾಗಿದೆ. ಇದು ಸಂಸ್ಕೃತ ಮಿಶ್ರವಾದ ಶಾಸನವಾಗಿದ್ದು, ಇದರಲ್ಲಿ ಸೇಂದ್ರವಂಶದ ವಿಜಯಶಕ್ತಿಯ ಮಗನಾದ ಕುಂದಶಕ್ತಿಯ ಮಗ ದುರ್ಗಶಕ್ತಿ ಎಂಬುವವನು ಶಂಖಜಿನಾಲಯಕ್ಕೆ  ಭೂದಾನವನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ[೧೪]  ಇದರಲ್ಲಿ ಎರಡನೇ ಪುಲಕೇಶಿಯ ವಿಷಯವನ್ನು ತಿಳಿಸುತ್ತ

"ಸ್ವಸ್ತಿ॥ ಚಾಳುಕ್ಯಪೃಥ್ವಿವಲ್ಲಭ ಕುಳತಿಳಕೇಷು ಬಹುಷ್ವತೀತೇಷುರಣ ಪರಾಕ್ರಮಾಜ್ಕ ಮಹಾರಾಜೋ ಭವತ್ತ॥ದ್ರಾ ಜತನಯಃ। ರಾಜಿತನಯೋ ವಿವರ್ದ್ಧಿತೈಶ್ವರ್ಯ್ಯತುಸ್ಸಮುದ್ರಾನ್ತ ಸ್ನಾತತುರಜ್ಗೇಭ ಪದಾತಿ ಸೇನಾಸಮೂಹಃ ಎಱೆಯಮ್ಮ ನಾಮಧೇಯಃ ಶ್ರೀವಲ್ಲಭೋ ಭವತ್॥

(ಅ) ಪಿ ಚ॥ಶಾಸತೀಮಾಂ ಸಮುದ್ರಾನ್ತಾಂ ವಸುಧಾಂ ವಸುಧಾಧಿಪೇ । ಸತ್ಯಾಶ್ರಯ ಮಹಾರಾಜೇ ರಾಜತ್ಸತ್ಯ ಸಮನ್ವಿತೇ ॥ ಎಂಬುದಾಗಿ ಉಲ್ಲೇಖಿಸಲಾಗಿದೆ. ದುರ್ಗಶಕ್ತಿ ಪಂಡಿತನ ಬಗ್ಗೆ ಹೇಳುತ್ತ ಭುಜಗೇಂದ್ರಾನ್ವಯಸೇನ್ದ್ರಾವನೀಂದ್ರಸನ್ತ ತೌ ಅನೇಕನೃಪಸತ್ತಮೇಷ್ವತೀತೇಷು ತತ್ಕುಳ ಗಗನಚಂದ್ರಮಾಃ ಬಹು ಸಮರ ವಿಜಯ ಲಬ್ಧಪತಾಕಾವಭಾಸಿತದಿಗನ್ತ ರಾಳವಳಯಃ ವಿಜಯಶಕ್ತಿರ್ನ್ನಾಮ ನೃಪತಿರ್ಬ್ಬಭೂವ ॥ ತತ್ಸೂನುರುದಿತ ತರುಣದಿವಾಕರ ಕರಸಮಪ್ರಭಃ ಸೌರ್ಯ್ಯಧೈರ್ಯ್ಯ ಸತ್ವಗುಣೋಪಪನ್ನಃ ಸಾಮನ್ತಬೃನ್ದ ಮೌಳಿಮಾಳಾವಲೀಢ ಚರಣಃ ಕುನ್ದ ಶಕ್ತಿರ್ನ್ನಾಮ ರಾಜಾಭೂತ್ತಸ್ಯ ಪ್ರಿಯತನಯಃ ॥ ಅದ್ವಿತೀಯ ಪುರುಷಾಕಾರ ಸಂಪನ್ನಃ। ಧರ್ಮ್ಮಾರ್ತ್ಥ ಕಾಮಪ್ರಧಾನಃ ಅನೇಕ ರಣವಿಜಯ ವೀರಪತಾಕಾಗ್ರಹಣಾರ್ತ್ಥ ಕೀರ್ತ್ತಿಃ॥ ತೇನ ದುರ್ಗ್ಗಶಕ್ತಿನಾಮದೇಯೇನ ಶಂಖಜಿನೇಂದ್ರಚೈತ್ಯ ನಿತ್ಯಪೂಜಾರ್ತ್ಥಂ ಪುಣ್ಯಾಭಿವೃದ್ಧಯೆ ಚ ॥ ಪುಲಿಗೆಱೆನಾಮ

ನಗರಸ್ಯೋತ್ತರಪಾರ್ಶ್ವೇಪಂಚಶತನಿವರ್ತ್ತನಂಪರಿಮಾಣಕ್ಷೇತ್ರಂ ದತ್ತಂ॥" ಎಂದು ದುರ್ಗಶಕ್ತಿ ಪಂಡಿತರ ಪೂರ್ಣ ವಿವರವನ್ನು ತಿಳಿಸುತ್ತದೆ.

ಎರಡನೇ ವಿಕ್ರಮಾದಿತ್ಯನ ಕಾಲದ ಕ್ರಿ.ಶ.೭೩೫ರ ಲಕ್ಷ್ಮೇಶ್ವರ ಶಾಸನವು ಧವಳ ಜಿನಾಲಯ ಮತ್ತು ಅಲ್ಲಿಯ ದಾನಶಾಲೆಗಳಿಗೆ ಅವುಗಳ ಜೀರ್ಣೋದ್ಧಾರ ಮತ್ತು ನಿರ್ವಹಣೆಗಾಗಿ ಬಾಹುಬಲಿ ಶ್ರೇಷ್ಠಿಯ ವಿಜ್ಞಾಪನೆ ಮೇರೆಗೆ ಅರಸನು ನಗರದ ಉತ್ತರ ದಿಕ್ಕಿನಲ್ಲಿ ಭೂದಾನವನ್ನು ಬಿಟ್ಟ ವಿಷಯವನ್ನು ತಿಳಿಸುತ್ತದಲ್ಲದೆ ಅದನ್ನು ನಾಶ ಮಾಡಿದರೆ "ಷಷ್ಠಿವರ್ಷ ಸಹಸ್ರಾಣಿ ವಿಷ್ಠಾಯಂ ಜಾಯತೆ ಕ್ರಿಮಿಃ"[೧೫] ಅಂದರೆ ೬೦ಸಾವಿರ ವರ್ಷಗಳ ಕಾಲ ಕ್ರಿಮಿಯಾಗಿ ಜನಿಸಲಿ ಎಂದು ಶಾಪಾಶಯವನ್ನು ಹೇಳಲಾಗಿದೆ. ಇದರಲ್ಲಿ ಚಾಲುಕ್ಯ ವಂಶದ ವಿಚಾರವನ್ನು ತಿಳಿಸುತ್ತ, ಅವರನ್ನು "ಸ್ವಸ್ತಿ ಜಯತ್ಯಾವಿಃಕ್ರಿತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾನ್ತಭುವನಂ ವಪುಃ॥ ಶ್ರೀಮತಾಂ ಸಕಳಭುವನ ಸಂಸ್ತೂಯಮಾನ ಮಾನವ್ಯಸಗೋತ್ರಾಣಾಂ ಹಾರೀತಿಪುತ್ರಾಣಾಂ ಸಪ್ತಲೋಕಮಾತ್ರಭಿಃ ಸಪ್ತಮಾತೃಭಿರಭಿವರ್ದ್ಧಿತಾನಾಂ ಕಾರ್ತ್ತಿಕೇಯಪರಿರಕ್ಷಣಪ್ರಾಪ್ತ ಕಲ್ಯಾಣಪರಂಪರಾಣಾಂ ಭಗವನ್ನಾರಾಯಣ ಪ್ರಸಾದಸಮಾಸಾದಿತ ವರಾಹಲಾಂಚ್ಛನೇಕ್ಷಣ(ಕ್ಷಣ)ವಶೀಕೃತಾಶೇಷಹೀಧ್ಯತಾಂ ಚಾಳುಕ್ಯಾನಾಂ ಕುಳಮಳಂಕರಿಷ್ಣೋರಶ್ವಮೇಧಾವ ಭೃಥಸ್ನಾನಪವಿತ್ರೀಕೃತಗಾತ್ರಸ್ಯ" ಎನ್ನುತ್ತದೆ. ಇದರಲ್ಲಿ ಚಾಲುಕ್ಯರನ್ನು ಹಾರೀತಿಪುತ್ರರು, ಕಾರ್ತಿಕೇಯನನ್ನು ಆರಾದಿಸುವವರು, ಸಪ್ತಮಾತೃಕೆಯರಿಂದ ರಕ್ಷಣೆ ಪಡೆದವರು ಎಂದು ಉಲ್ಲೇಖಿಸುತ್ತದೆ. ಮುಂದುವರೆದು ಪುಲಕೇಶಿವಲ್ಲಭ ಇವನ ಮಗ ವಿಕ್ರಮಾದಿತ್ಯ ಈತನ ಮಗ ವಿಜಯಾದಿತ್ಯ ಎಂದಿದೆಯಲ್ಲದೆ ಎರಡನೇ ಪುಲಕೇಶಿಯ ಪರಾಕ್ರಮವನ್ನು ಹೊಗಳಲಾಗಿದೆ. "ಶ್ರೀ ವಿಜಯದೇವಪಂಡಿತಾಚಾರ್ಯ್ಯಾಯ ಜಿನಪೂಜಾಭಿವೃದ್ಧರ್ತ್ಥಂ ಬಾಹುಬಲಿಶ್ರೇಷ್ಠಿ ವಿಜ್ಞಾಪನೇನ ಪುರಿಕರನಗರ್ಯಾಂ ಶಂಖತೀರ್ತ್ಥವಸತೇರ್ಮಣ್ಡನಮಂಡಿತಃ (ತಥಾ) ಧವಳಜಿನಾಲಯಸ್ಯ ಜೀರ್ಣೋದ್ಧರಣಂ ಕೃತ್ವಾ ಖಣ್ಡಸ್ಫುಟಿತ ನವಸಂಸ್ಕಾರಬಲಿ ನಿಮಿತಂ ದಾನಶಾಲಾದಿ ಪ್ರವರ್ತ್ತನಾರ್ತ್ಥಂ ದಿಶಿರಾಜಮಾನೇನ ಶತಾರ್ದ್ಧನಿವರ್ತ್ತನ ಪ್ರಮಾಣ ಕ್ಷೇತ್ರಂ ಸರ್ವ್ವಬಾಧಪರಿಹಾರಂ ದತ್ತಂ" ಎನ್ನುತ್ತದೆ.

ರಾಷ್ಟ್ರಕೂಟರ ದೊರೆ ಎರಡನೇ ಕೃಷ್ಣನ ಕ್ರಿ.ಶ.೯೦೨-೦೩ರಲ್ಲಿನ ಮುಳಗುಂದದ ಜಿನಾಲಯದ ಗೋಡೆಯಲ್ಲಿರುವ ಈ ಶಾಸನವು ಟೀಕಾರ್ಯನಿಂದ ಮುಳಗುಂದದಲ್ಲಿ ಕಟ್ಟಿದ ಬಸದಿಗೆ ಅವನ ಮಗನಾದ ಅರಪಾರ್ಯನು ಭೂಮಿಯನ್ನು ದಾನವಾಗಿ ಬಿಟ್ಟು, ಜಿನಾಲಯದಲ್ಲಿ ನಿತ್ಯ ಪೂಜೆಗಳು ಸಾಂಗವಾಗಿ ನಡೆಯಲು ಆಶಿಸಿದ್ದಾನೆ.[೧೬]

ಗಂಗದೊರೆ ಎರಡನೇ ಮಾರಸಿಂಹನು ನೊಳಂಬವಾಡಿಯನ್ನಾಳುವಾಗ ರಚಿತವಾದ ಮುಳಗುಂದದ ಕ್ರಿ.ಶ.೯೭೧ರ ಶಾಸನವು ಶಂಖಜಿನಾಲಯಕ್ಕೆ ಭೂಮಿಯನ್ನು ದಾನವಾಗಿ ಕೊಟ್ಟ

ವಿಷಯವನ್ನು ತಿಳಿಸುತ್ತದೆ. ಈ ಶಾಸನ ಬಹಳಷ್ಟು ತೃಟಿತವಾಗಿರುವುದರಿಂದ ಇನ್ನುಳಿದ ವಿಷಯವನ್ನು ತಿಳಿಯಲು ಅಸಾಧ್ಯವಾಗಿದೆ.[೧೬] ಈ ಶಾಸನದಲ್ಲಿ "ಸ್ವಸ್ತಿ ಶಕ ವರ್ಷ ೮೯೩ನೆಯ ಪ್ರಜಾಪತಿ ಸಂವತ್ಸರದ ಕಾರ್ತಿಕ ಸುದ್ದ ಪೌ(ರ್ಣ್ನಮಾ)ಸೆ ಯನ್ದು । ಸ್ವಸ್ತಿ ಸತ್ಯ ವಾಕ್ಯ ಕೊಂಗುಣಿವರ್ಮ್ಮ ಧರ್ಮ್ಮಮಹಾರಾಜಾಧಿರಾಜ ಕುವಳಾಳಪುರ ಪರಮೇಶ್ವರ ನನ್ದ ಗಿರಿನಾಥ. . . . ಗಂಗ. . . .ಂಗಕನ್ದರ್ಪ್ಪಂ ಗಂಗ(ರ) ಸಿಂಗ ಗಂಗವಜ್ರಂ ಶ್ರೀ ಮನ್ನೊಳಂಬಕುಳಾಂತಕ(ಪೆರ್ಮ್ಮಾ)ನಡಿಗಳ್ ಮಹಾ. . . .ಮಹಾದಾನಂ. . . ಬಿಟ್ಟ ಬಸದಿಗೆ. . . . .ಮಹಾಶಬ್ದಂ ಸೂ. . .ಕಳಮೆಂಬೀ. . . .ಸಂಖಜಿನಾ(ಲ)ಯಕ್ಕೆ(ಬಿಟ್ಟ)ತಳವೃತ್ತಿ" ಎನ್ನುತ್ತದೆ.

ಜಂಕ್ಲಿ–ಶಿರೂರಿನ ಕ್ರಿ.ಶ.೯೮೬ರ ಶಾಸನವು ಅತ್ತಿಮಬ್ಬೆಯು ಜೈನ ಬಸದಿಯನ್ನು ಕಟ್ಟಿಸಿ "ಸಕನೃಪಕಾಳಾತೀತ ಸಂವತ್ಸರ ಶತಂಗಳ್ ೯೦೮ನೆಯ ಸರ್ವ್ವಜಿತ್ಸಂವತ್ಸರದ ಫಾಲ್ಗುಣ ಮಾಸದ ನನ್ದೀಶ್ವರಾಷ್ಟಮಿಯಾದಿತ್ಯವಾರದನ್ದು ಶೀಮದಿನ್ದ್ರಕೀರ್ತಿದೇವರ ಕಾಲಂಕಚ್ಚಿ ಮಾಸಿಯವಾಡಿ ನಾಡೊಳಗಣ ಗಾವುಣ್ಡಿಗನಪಳ್ಳಿಯುಮಂ ರಾಜಮಾನದೊಳಿನ್ನೂಱು ಮತ್ತರ್ತ್ತಳ ವೃತ್ತಿಯುಂ ಸರ್ವ್ವಬಾಧಾಪರಿಹಾರಂ ನಮಶ್ಯಮಾಗೆ ಬಿಟ್ಟರ್" ಎಂದು ಹೇಳುತ್ತದೆ.[೧೭] ಇದು ಆ ಜಿನಾಲಯದ ಪೂಜೆ ಪುನಸ್ಕಾರಗಳಿಗಾಗಿ ನೀಡಿದ್ದಲ್ಲದೆ ಇನ್ನೂರು ಮತ್ತರು ಭೂಮಿಯನ್ನು ಸರ್ವಬಾಧಾ ಪರಿಹಾರವಾಗಿ ದಾನವಾಗಿ ಬಿಟ್ಟಿದ್ದಾರೆ.

ಕಲ್ಯಾಣ ಚಾಲುಕ್ಯರ ದೊರೆ ಇರಿವಬೆಡಂಗನು ರಾಜ್ಯವಾಳುತ್ತಿರುವಾಗ ಕ್ರಿ.ಶ.೯೯೫ರಲ್ಲಿ ರಚಿತವಾದ ದಾನಚಿಂತಾಮಣಿ ಅತ್ತಿಮಬ್ಬೆ ಮಾಡಿದ ದಾನದ ಬಗ್ಗೆ ಹೇಳುವ ಶಾಸನ ಒಡೆದು ನಾಶವಾಗಿದ್ದು, ಅದರ ನಕಲನ್ನು ಕ್ರಿ.ಶ.೧೦೦೭ರಲ್ಲಿ ಪುನಃ ರಚನೆ ಮಾಡಲಾಗಿದೆ. ಇದು ಅತ್ತಿಮಬ್ಬೆಯ ವ್ಯಕ್ತಿತ್ವದ ಬಗ್ಗೆ ಹೇಳುತ್ತದೆ.[೧೮] ಆಕೆ ಕಟ್ಟಿಸಿದ ಬಸದಿ, ಅದಕ್ಕೆ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆಯಲ್ಲದೆ ಈ ಶಾಸನದಲ್ಲಿ ರನ್ನನ ಅಜಿತನಾಥ ಪುರಾಣದ ಎರಡು ಪದ್ಯಗಳನ್ನು ರಚಿಸಲಾಗಿದೆ.

ಆ ಪರಮೇಶ್ವರಿಗೆ ಜಗ
ದ್ವ್ಯಾಪಕ ಶುದ್ಧೇಂದು ಕೀರ್ತ್ತಿ ಪಿರಿಯಮಗಂ ಲ।
ಕ್ಷ್ಮೀಪತಿ ಸಮಗ್ರ ವಿಜಯ
ಶ್ರೀಪತಿಯನೆ ಧರೆಗೆ ನೆಗಟ್ದಿ ಪಡೆವಳ ತೈಲಂ॥

ಆ ಸತಿ ಮುಮ್ಮಾಡಿಸಿದಾ
ಸಾಸಿರದಯ್ನೂಱು ಬಸದಿಗಿದು ಕಳಶಮೆನ
ಲ್ಭಾಸುರಮಾಯ್ತು ಜಿನೇಂದ್ರಾ

ವಾಸಂ ತೊಳಗುವ ಸುವರ್ಣ್ಣ ಕಳಶೋನ್ನತಿಯಿಂ॥

ಎಂದು ವರ್ಣಿಸಲಾಗಿದೆ. ಈ ಶಾಸನದಲ್ಲಿ "ಸಕವರ್ಷ ೯೨೯ನೇ ಪ್ಲವಂಗ ಸಂವತ್ಸರದ ಫಾಲ್ಗುಣ ಮಾಸದ ನನ್ದೀಶ್ವರದಷ್ಟ(ಮಿ)ಯುಂ ಬೃಹಸ್ಪತಿವಾರದಂದು ಶುಭಲಗ್ನೋದಯದೊಳ್ಮಹಾಧ್ವಜಮಹಾಭಿಷೇಕ ಮಹಾದಾನ ಧರಣಾನನ್ತರಂ ತಮ್ಮ ಗುರುಗಳು ಸೂರಸ್ತಗಣದ ಕೌಜೂರ್ಗ್ಗಚ್ಛದ ಅರ್ಹನನ್ದಿಪಣ್ಡಿತದೇವರ್ಗ್ಗೆ ಶ್ರೀಲೊಕ್ಕಿಗುಣ್ಡಿಯೊಳ್ಬಸದಿಯಂ ಮಾಡಿಸಿಯದಕ್ಕೆ ತಳವೃತ್ತಿಯೆಂದು ಕೊಟ್ಟ ಸುಜುಕಿಯ ಸೀಮಾಮರ್ಯ್ಯಾದೆ"ಎಂದು ಹೇಳಲಾಗಿದೆ.

ಕ್ರಿ.ಶ.೧೦೫೩ರ ಕಲ್ಯಾಣ ಚಾಲುಕ್ಯ ದೊರೆ ಒಂದನೇ ಸೋಮೇಶ್ವರ ದೇವ (ಶ್ರೀಮತ್ ತ್ರೈಲೋಕ್ಯಮಲ್ಲದೇವ)ನ ಕಾಲದ ಶಾಸನವು ಮುಳಗುಂದದ ನಗರೇಶ್ವರ ಗುಡಿ ಹಿಂದೆ ಇದ್ದು, ಈ ಶಾಸನ ಸಿಂಧ ವಂಶದ ಕಂಚರಸನು ಜಿನಾಲಯಕ್ಕೆ ದಾನವಾಗಿ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೧೯] ಇದರಲ್ಲಿ "ಶಕವರ್ಷಂ ೯೭೫ನೇ ವಿಜಯ ಸಂವತ್ಸರದ ಉತ್ತರಾಯಣ ಸಂಕ್ರಾಂತಿಯಂದು ತ್ರಿಥ್ಥದ ಬಸದಿಗೆ ಆಹಾರ ದಾನ ನಿಮಿತ್ತಂ ನಿಜಾಂಬಿಕೆಯ ಅಪ್ಪ ಗೊಜ್ಜಿಕಬ್ಬೆಗೆ ಪರೊಕ್ಷ ವಿನಯಂ ನಗರ ಮಹಾಜನಮುಂ ಪಂಚಮತಸ್ಥನಮುಂ ಆರ್ಯೆ ನಗರೇಶ್ವರದ ಗಡಿಂಬದ ಕೋಲೋಳ್ ಅಳೆದು ಕಿರುಗೆರಿಯ ಕೆಯ್ಯೋಳಗೆ ಸರ್ವಭಾಧಾಂ ಆಗಿ ಬಿಟ್ಟ ಕೈಮತ್ತರ್" ಎಂದು ಹೇಳಲಾಗಿದೆ.

ಕ್ರಿ.ಶ.೧೧೯೬-೯೭ರ ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಡೋಣಿಯಲ್ಲಿರುವ ಶಾಸನವು ಪಿರಿಯರಿಸಿ ಲಕ್ಷ್ಮೀಮಹಾದೇವಿ ಡೋಣಿಪುರವನ್ನು ಆಳುತ್ತಿದ್ದಾಗ ಸೋಕಸೆಟ್ಟಿ ಕಟ್ಟಿಸಿದ್ದ ಬಸದಿಗೆ ಬಿಟ್ಟ ತೋಟದ ಬಗ್ಗೆ ತಿಳಿಸುತ್ತದೆ. "ಶ್ರೀ ಚಾಳುಕ್ಯವಿಕ್ರಮಕಾಲದ ೨೦ನೆಯ (ಯುವ) ಸಂವತ್ಸರದ ಪಾಲ್ಗುಣ ಸುದ್ಧ ತ್ರಯೋದಶಿ ಬ್ರಹಸ್ಪತಿವಾರದಂದು ॥ ತರ್ಕ್ಕ . . . ಯಮಕಳಂಕೋ ವ್ಯಾಕರಣೇ ಶಾಕಟಾಯನೋ ಭಗವಾನ್ ತ್ರೈವಿದ್ಯೋ ಮುನಿಚಂದ್ರಸ್ಸಿಧ್ಧಾನ್ತೇ ಸಿದ್ಧನನ್ದೀಮುನೀ. . . ॥ ಯಾಪುನೀಯಸಂಗದೆ ವೃಕ್ಷಮೂಲಗಣದ ಮುನಿಚಂದ್ರತ್ರೈವಿದ್ಯಭಟ್ಟಾರಕರ ಶಿಷ್ಯರಪ್ಪ ಚಾರುಕೀರ್ತ್ತಿಪಣ್ಡಿತರ್ಗ್ಗೆ ದಸವರ್ಮ್ಮ. . . ಸೆಟ್ಟಿಯ ಮಗಂಸೋ(ವಿ)ಸೆಟ್ಟಿ ಮುನ್ನಂ ಬಸದಿಯಂ ಮಾಡಿಸಿ ಬಿಟ್ಟತೋಂಟಂ ಮತ್ತೆರೆರಡುವರೆ ನಮಶ್ಯ ಪಡಗಲು ಕಲ್ಲಭಣ್ಡೆಯ(ಬಟ್ಟೆ)ಯೇ ಮೇರೆ ಮೂಡಲು. . . . ಬಟ್ಟೆಯೇ ಮೇರೆ ತೆಂಕಲು ಮಣ್ಡೆಯರ ಮಲ್ಲಿಸೆಟ್ಟಿಯ ತೋಂಟವೇ ಮೇರೆ ಪಡುವಲು ಕೋಟೇಶ್ವರದ ಅಕ್ಕಸಾ. . .ದ ತೋಟಗಳೇಮೇರೆ ಆ ತೋಂಟಕ್ಕೆ ವಾಯವ್ಯದ ದೆಸೆಯ(ಲಿ)ಅಯ್ಚಿಸೆಟ್ಟಿ ಕೊಟ್ಟಮತ್ತರ ನಮಶ್ಯ . .ಸೆಟ್ಟಿಯ। ರೇವಿಸೆಟ್ಟಿಯ ತೋಂಟಂಗಳೆ ಮೇರೆ। ಮೂಡಲು ಓಣಿಯ ಬಟ್ಟೆಯೇ ಮೇರೆ । ತೆಂಕಲು ಚಲ್ವಮಯ್ಯನ ಕೇಸಿಯಣ್ಣನ ತೋಂಟವೇ ಮೇರೆ । ಪಡುವಲು ಮೊಜಿಡಿಯೇ ಮೇರೆ । ಊರಿಂದಂ ಮೂಡಲು ಗಂಗಬ್ಬೆಯ ಹಳ್ಳ ಬಡಗಲು ಕಿ(ಜೆ)

ಮಂಗಿರಯ್ಯನ ತೋಂಟದ ತಂಕ ದೆಸೆಯಲು ಊರು ಕೊಟ್ಟ ಕಮ್ಮ ೨೨೫ ಬಸದಿಯ ಕೇರಿಗೆ ಬಡಗಲು ಸಿರಿಯಣ್ಣನ ಅಂಗಡಿಯ ಉದಯಣ್ಣನ । ಹೊನ್ನೋಲೆಯೆ ಮುದ್ದಿಸೆಟ್ಟಿಯ ಸಂಕರಯ್ಯನ ಮನೆಗಳ ಮೇರೆ । ಪಡುವಲು ಬೀದಿಯೇ ಮೇರೆ । ತೆಂಕಲು ಬಸದಿಯ ಮೂಡಣ ಗೋಂಟು ಮೇರೆ । ಮೂಡಲಕ್ಕಸಾಲೆ ನೇಮೋಜನ ಮನೆಯೇ ಅತ್ತಿ ಬನ್ದ ಬೀದಿಯೇ ಮೇರೆ ಎಂದಿಂತ್ತು ಬಸದಿಗೆ ಮುನ್ನಂ ನಡೆವ ಮೂಱುಂ ಸ್ತಳದ ತೋಂಟಂಗಳಂ ಕೇರಿಗೆ ಬೇಜಿ ಬೇಜಿ ಆಘಾಟ ಶುದ್ಧಿಯ ಮಾಡಿ ಶಿಲಾಶಾಸನಮಂ ಬರೆಯಿಸಿ ಕೊಟ್ಟನು". ಎಂದು ವಿವರವಾಗಿ ಕೊಟ್ಟ ದಾನದ ವಿವರವನ್ನು ಮತ್ತು ಅದರ ಗಡಿಗಳನ್ನು ಸ್ಪಷ್ಟವಾಗಿ ಗುರುತಿಸಿ ಹೇಳುತ್ತದೆ.[೨೦] ಅಲ್ಲದೆ ನಿವೇಶನವನ್ನು ಬಿಟ್ಟ ವಿಚಾರಗಳನ್ನು ತಿಳಿಸುತ್ತದೆ.

೧೨ನೇ ಶತಮಾನದಲ್ಲಿಯೇ ಇದೇ ಡೋಣಿ ಗ್ರಾಮದಲ್ಲಿ ಅರವತ್ತು ಮಹಾಜನರಿಂದ ಸೋಕಸೆಟ್ಟಿ ಕಟ್ಟಿಸಿದ ಅದೇ ಬಸದಿಗೆ ನಿವೇಶನವನ್ನು ಮತ್ತು ಭೂಮಿಯನ್ನು ದಾನವಾಗಿ ನೀಡಲಾದ ವಿಷಯವನ್ನು ಈ ರೀತಿಯಾಗಿ ಹೇಳುತ್ತದೆ, ". . .೧೩ ಆದಿವಾರದಂದು ದೇವರ ನೀವೇಶಣಂ ಪತ್ತಿರೆ ಬಡಗಲು ಅಂಗಡಿ ೪ ಮಂ ಮನೆಯುಮಂ ಊರೊದೆಯೆ ಪ್ರಮುಖಶೇಷ ಮಹಾಜಣಂಗಳು ಮಾ. . . ಬರಂವಿರ್ದ್ದು ಕೊಟ್ಟರು ಅದಕ್ಕೆ ಸೀಮೆ ಪಡುವಲು ಬೀದಿಯೆ ಮೇರೆ। ಬಡಗಲು ರಾಜಬೀದಿಯೆ ಮೇರೆ । ಮೂಡಲು ಭಂಡಸಾಲೆಯವರ ಮನೆಯೆ ಮೇರೆ ಮತ್ತಂವೂರೊಡೆಯ ಪ್ರಮುಖ ಮಹಾಜನಂಗಳು. . . ದಿರ್ಬ್ಬರುವಿದ್ದು ಪುಣ್ಯತಿಥಿಯಲು ದೇವರ್ಗ್ಗೆ ಕೊಟ್ಟ ತೋಂಟ ಮತ್ತರು೧।"ಎನ್ನುತ್ತದೆ. ಅಲ್ಲದೆ ಈ ಧರ್ಮವನ್ನು "ಮಹಾಜನ ಸೆಟ್ಟಿಯರುಮಾದೆವರುಂ (ಧ)ರ್ಮ್ಮವಂ ಪ್ರತಿಪಾಳಿಸುವರು"[೨೧] ಎಂದು ಹೇಳಲಾಗಿದೆ

**೨.೨.೪.೨. ಗ್ರಾಮ ದಾನ**

ನಮ್ಮ ಪೂರ್ವಜರು ಬಸದಿಗಳಿಗೆ ಭೂಮಿ, ನಿವೇಶನ, ಹೂದೋಟ ದಾನಗಳನ್ನು ನೀಡುತ್ತಿದ್ದರಲ್ಲದೆ, ಕೆಲವು ಗ್ರಾಮಗಳನ್ನೇ ನಿರ್ಮಿಸಿ ಅದನ್ನು ಬಸದಿಗೆ ನೀಡುತ್ತಿದ್ದರು. ಅಂತಹ ನಿದರ್ಶನಗಳು ನಮಗೆ ಅನೇಕ ಶಾಸನಗಳಿಂದ ದೊರೆಯುತ್ತವೆ.

ಕ್ರಿ.ಶ.೬೮೫ರ ವಿನಯಾದಿತ್ಯನ ಕಾಲದ ಶಾಸನವೊಂದು ಲಕ್ಷ್ಮೇಶ್ವರದ ಶಂಖಬಸದಿಯ ಬಲಗೋಡೆಯಲ್ಲಿದ್ದು, ಅದು ಶಂಖಜಿನಾಲಯಕ್ಕೆ ಹಡಿಗೆಲೆ ಗ್ರಾಮವನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಈ ಶಾಸನವು ಬಾದಾಮಿ ಚಾಲುಕ್ಯರ ವಂಶವೃಕ್ಷವನ್ನು "ಸಮರ ಸಂಸಕ್ತ ಸರಳೋತ್ತರ ಪಥೇಶ್ವರ ಶ್ರೀಹರ್ಷವರ್ಧನ ಪರಜಯೋಪಲಬ್ಧ" ಎಂದು ವರ್ಣಿಸಿದ್ದಾರೆ. ಇದರಲ್ಲಿ ಕಾಲವನ್ನು ಹೇಳುವಾಗ 'ಅಷ್ಟೋತ್ತರಷಟ್ಯತೇಷು ಶಕವರ್ಷೇಷ್ವತೀತೇಷು ಪ್ರವರ್ತ್ತಮಾನವಿಜಯರಾಜ್ಯ ಪಂಚಮಸಂವತ್ಸರೇ ಶ್ರೀ ರಕ್ತಪುರ (ಮಧಿ) ವಸತಿ ವಿಜಯ ಸ್ಕನ್ಧಾವಾರೇ ಪೌಷಮಾಸ ಪೌರ್ಣ್ಣ

ಮಾಸ್ಯಾಂ" ಅಂದರೆ ಶಕವರ್ಷ ೬೦೮ರ ಪುಷ್ಯ ಮಾಸದ ಹುಣ್ಣಿಮೆಯ ಬುಧವಾರದಂದು "ಶಂಖ ದೇವತಾಪಾವನಖಣ್ಡ ಸ್ಫುಟಿತ ಸಂಸ್ಕಾರ. . . ಕುಸುಮದೇವ ಭೋಗನಿಮತ್ತಂ ದಾನ ಶಾಲಾಪ್ರವರ್ತ್ತನಾರ್ಥಂ ಬೆಳುವಲ ಶತತ್ರಯಮದ್ಯವರ್ತ್ತಿ. . . ಹಡಿಗೆಲೆ ನಾಮ ಗ್ರಾಮಂ ಸರ್ವ್ವ ಬಾಧ ಪರಿಹಾರಂ ದತ್ತವಾನ್"[೨೨] ಎಂದು ಜಿನಾಲಯಕ್ಕೆ ದಾನವಾಗಿ ಬಿಟ್ಟ ಕ್ರಮವನ್ನು ತಿಳಿಸುತ್ತದೆ.

ಕ್ರಿ.ಶ.೭೨೩ರ ವಿಜಯಾದಿತ್ಯನ ಕಾಲದಲ್ಲಿ ಇದೇ ಶಂಖಜಿನಾಲಯಕ್ಕೆ ಸಂಬೊಳಲ ಗ್ರಾಮವನ್ನು ದಾನವಾಗಿ ನೀಡಿದ ವಿಷಯವನ್ನು ತಿಳಿಸುತ್ತದೆ. ಇದೂ ಸಹ ಮೊದಲು ಕ್ರಿ.ಶ.೬೮೩ರ ಶಾಸನವನ್ನು ಹೋಲುತ್ತದೆ (ವಿಜಯಾದಿತ್ಯನ ಹೆಸರಿನವರೆಗೆ). ನಂತರ ದಾನದ ವಿಚಾರ ಬಂದಾಗ ವಿಷಯ ಬದಲಾವಣೆಯಾಗುತ್ತದೆ. ಇದು "ಶ್ರೀ ದೇವಚಾರ್ಯಸ್ತಸ್ಯ ಶಿಷ್ಯೋ (ಚಿಕಣದೇವಾಚಾರ್ಯ ತತ್ಶಿಶ್ಯೋ ರಾಮದೇವಾಚಾರ್ಯ್ಯಸ್ತಸ್ಯ ಧರ್ಮತನಯೋ ಜಯದೇವಪಂಡಿತಾಚಾರ್ಯ್ಯಸ್ತನ್ನಿಮಿತ್ತಂ ನಾನ ನೃಪಕುಳಪ್ರಧಾನಭೂತಾಗುಣವಂಶೋತ್ಪನ್ನೋ ದ್ರೋಣಮ್ಮ ನಾಮಧ್ಯೇಯಸ್ತಸ್ಯ ಸೂನುಃ ಸದ್ಧರ್ಮ್ಮ ನಾಮ ತತು ಪ್ರಿಯತನಯಸ್ಯ ವಿಜಯನಾಮ್ನೋ ಸುಮಹತ್ತರಸ್ಯ ವಿಜ್ಞಾಪನಾಯಾ ಶ್ರೀ ಬಿಕ್ಕಿರಾಣಕೇನ ಪುರಿಕರನಗರೇ ಶ್ರೀ ಶಂಖಜಿನಾಲಯಾಂತವರ್ತ್ತಿಯತ್ಕಾರಿತಂ ಶ್ರೀ ಜಿನ ಭಟ್ಟಾರಕಾಯತನಂ ತಸ್ಯಾಯತನಸ್ಯ ಖಣ್ಡ ಸ್ಫುಟಿತದಾನಶಾಲಾನಿಮಿತ್ತಂತಂ ನಗರಾದ್ದಕ್ಷಿಣಸ್ಯಾಂ ದಿಶಿಸೆಂಬೊಳಲನಾಮಗ್ರಾಮಂ ಸರ್ವ್ವ ಬಾಧಾಪರಿಹಾರಂ ದದೌ" ಎಂದು ಅವರ ವಂಶವಾಳಿಯನ್ನು ಹೇಳುತ್ತದೆ.[೨೩] ಅಲ್ಲದೆ ಶ್ರೀಜಿನಭಟ್ಟಕಾಯತನಂಗೆ ಸಂಬೊಳಲನಾಮ ಗ್ರಾಮವನ್ನು ಸರ್ವ ಬಾಧಾಪರಿಹಾರವಾಗಿ ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ.

ಇದೇ ವಿಜಯಾದಿತ್ಯನ ಕ್ರಿ.ಶ.೭೩೦ರ ಶಾಸನವು "ಶಂಖಜಿನಾಲಯದ ನಿತ್ಯನೈಮಿತ್ತಿಕ ಪೂಜಾನಿಮಿತ್ತಂ ನಗರದ ದಕ್ಷಿಣ ದಿಕ್ಕಿನಲ್ಲಿರುವ ಕದ್ದಮಗ್ರಾಮಂ ದತ್ತವಾನ್" ಎಂದು ತಿಳಿಸುತ್ತದೆ.[೨೪] ಅಲ್ಲದೆ ಇದಕ್ಕೆ ಗಡಿಗಳನ್ನು ತಿಳಿಸುತ್ತದೆ.

ಕ್ರಿ.ಶ.೯೬೮-೯೯ರ ಗಂಗರ ದೊರೆ ಎರಡನೇ ಮಾರಸಿಂಹನ ಕಾಲದಲ್ಲಿ ಇದೇ ಪುಲಿಗೆರಿ ನಾಡಿಗೆ ಸೇರಿದ ದಕ್ಷಿಣಭಾಗದ "ಮೊಳಗೆಱೆ ಸಿಗ್ಗಲ" ಗ್ರಾಮಗಳನ್ನು ದೇವಬೋಗ ನಿಮಿತ್ತಂವಾಗಿ "ಶಕನೃಪಕಾಳಾತೀತ ಸಂವತ್ಸರತೇಷ್ವಷ್ಟಸು ನವತ್ಯುತ್ತರೇಷು ಪ್ರವರ್ತ್ತಮಾನೇ ವಿಭವಸಂವತ್ಸರೇ ಶಂಖವಸತಿತೀರ್ತ್ಥಂ ವಸತಿಮಸ್ತಕಮಣ್ಡನಸ್ಯ ಗಜ್ಜಕನ್ದರ್ಪ್ಪಜಿನೇಂದ್ರಮಂದಿರಸ್ಯದೇವಭೋಗನಿಮಿತ್ತಂ ಪುರಿಗೆಱೆವಿಷಯಾನ್ತರ್ವ್ವರ್ತಿನಂ ಪುರಿಗೆಱೆನಗರಾದ್ದಕ್ಷಿಣಸ್ಯಾಮಾಶಾಯಾ(ಂ)ಮೊಳಗೆಱೆ ಸಿಗ್ಗಲಗ್ರಾಮಃ" ಎಂದು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ.[೨೫]

ಕ್ರಿ.ಶ.೧೦೭೪ರ ಕಲ್ಯಾಣ ಚಾಲುಕ್ಯ ದೊರೆ ಎರಡನೇ ಸೋಮೇಶ್ವರ(ಭುವನೈಕಮಲ್ಲ)ನ ಕಾಲದಲ್ಲಿ ಅಂದರೆ "ಸ್ವಸ್ತಿ ಸಕವರ್ಶ ೯೯೬ನೆಯಾನನ್ದ ಸಂವತ್ಸರದ ಚೈತ್ರ ಸುದ್ಧ ಪ್ರಥಮನನ್ದೀಶ್ವರದ ೮

ಆದಿತ್ಯವಾರದನ್ದು ಪುರಿಗೆಱೆಗೆಬಿಜಯಂ ಗೆಯ್ದಲ್ಲಿಯ ಶ್ರೀ ಶಂಕತೀರ್ತ್ಥಾದಿ ಜೈನಮಂದಿರಂಗಳಂ ವನ್ದನಾಭಕ್ತಿಪೂರ್ವ್ವಕಂ ನೋಡುತ್ತಂ ಬನ್ದು ಪೆರ್ಮ್ಮಾಡಿಯ ಬಸದಿಗೆ ವನ್ದಲ್ಲಿಯ ಮೂಲಸಂಘಾನ್ವಯದ ಬಳಾತ್ಕಾರಗಣದ ಗಣ್ಡವಿಮುಕ್ತ ಭಟ್ಟಾರಕರ ಶಿಷ್ಯರ್ ತ್ರಿಭುವನಚಂದ್ರಪಣ್ಡಿತದೇವರಂ ಕಣ್ದು ತ್ರಿಕರಣಸುದ್ಧಿಯಿಂ ಬನ್ದಿಸಿ ಕುಳ್ಳಿಱ್ದು

ಪುರಿಗೆಱೆಯೊಳ್ಪೆರ್ಮಾಡಿಯ
ಪುರವರಮಳಿದಿಱ್ದುದಂ ಗಜಾರಿಧ್ವಜನಾ।
ದರದಿನ್ದಮೆನೋಡಿ ಪುನ
ರ್ಭರಣಂ ಮಾಡಲ್ಕೆ ವೇಡಿಜಯಕೇಶಿನ್ರಿಪಂ ॥

ಸ್ಮರರೂಪಂ ಪೆರ್ಮ್ಮಾಡಿಯ
ಪುರವರದೊಳ್ ನಡೆವ ಮನ್ನೆಯದ ಕಿಱುದೆಱೆಯಂ ।
ಪುರದಾನಿಕೆಯುಳ್ವ ದೀಪಂ
ಪರಿಹಾರಂ ಬಿಟ್ಟು ಮಾಡಿದಂ ತತ್ಪರಮಂ ॥

ಮಣಲ ವಂಶದ ಜಯಕೇಶಿ ಪೆರ್ಮಾಡಿಯು ಶಂಖ ಬಸದಿಗೆ ಒಂದು ಪುರವನ್ನು ರಚಿಸಿಕೊಟ್ಟ ಎಂಬ ವಿಷಯವನ್ನು ತಿಳಿಸುತ್ತದೆ.[೨೬]

### ೨.೨.೪.೩. ವ್ಯಕ್ತಿ ದಾನ

ನಮ್ಮ ಪೂರ್ವಜರು ಮತ್ತು ರಾಜರು ದೇವಾಲಯದ ಅರ್ಚಕರಿಗೂ ಸಹ ದಾನವಾಗಿ ಭೂಮಿಬಿಟ್ಟಿರುವ ವಿಷಯಗಳು ನಮಗೆ ಶಾಸನಗಳಿಂದ ದೊರೆಯುತ್ತವೆ. ಇವುಗಳನ್ನು ವ್ಯಕ್ತಿದಾನವಾಗಿ ನಾವು ಪರಿಗಣಿಸಬಹುದು. ಇದರಲ್ಲಿ ಮುಖ್ಯವಾಗಿ ಕ್ರಿ.ಶ.೯೬೮-೬೯ರ ಗಂಗ ದೊರೆ ಎರಡನೇ ಮಾರಸಿಂಹನ ಕಾಲದ ಜೈನಶಾಸನವು ಗಂಗಕಂದರ್ಪನು ಜಿನಾಲಯಕ್ಕಾಗಿ "ಶಕನೃಪ ಕಾಳಾತೀತಂ ಸಂವತ್ಸರ ಶತೇಷ್ವಷ್ಟಸುನವತ್ಯುತ್ತರೇಷು ಪ್ರವರ್ತ್ತಮಾನೆವಿಭವ ಸಂವತ್ಸರೆ ಶಂಖ ವಸತಿತೀರ್ತ್ಥ ವಸತಿಮಣ್ಡಳಮಣ್ಡನಸ್ಯ ಗಂಗಕಂದರ್ಪ ಜಿನೇಂದ್ರಮನ್ದಿರಸ್ಯ ದಾನ ಪೂಜಾದೇವಭೋಗನಿಮಿತ್ತಂ ಪುಲಿಗೆಱೆನಗರಾತ್ಪೂರ್ವ್ವಸ್ಯಾಂ ದಿಶಿತಳವೃತ್ತಿಂದತ್ತೇಸ್ಯ" ಎಂದು ಜಯದೇವ ಪಂಡಿತನಿಗೆ ನೀಡಿದ ಭೂದಾನದ ವಿಷಯವನ್ನು ತಿಳಿಸುತ್ತದೆ.[೨೭] ಈ ಶಾಸನವು ಗಂಗ ವಂಶದ ವರ್ಣನೆಯನ್ನು ಮತ್ತು ಗಂಗಕಂದರ್ಪನ ಬಗ್ಗೆ ವಿವರವಾಗಿ ತಿಳಿಸಿದೆ. ಗಂಗಕಂದರ್ಪ ಜಿನೇಂದ್ರ ಮನ್ದಿರಸ್ಯದಾನ

ಪೂಜಾದೇವಭೋಗನಿಮಿತ್ತಂ ಆ ಜಿನಾಲಯದ ಮುನಿಂದ್ರ ಜಯದೇವಪಂಡಿತನಿಗೆ ಆ ಜಿನಾಲಯದ ವ್ಯವಹಾರವನ್ನು ನಡೆಸಿಕೊಂಡು ಹೋಗಲು ಭೂಮಿಯನ್ನು ದಾನವಾಗಿ ನೀಡಲಾಗಿದೆ.

**೨.೨.೪.೪. ಇತರದಾನ**

ನಮ್ಮ ನಾಡ ಪ್ರಭುಗಳು, ಜನರು, ದೇವಾಲಯ, ಬಸದಿಗಳಲ್ಲಿ ಪೂಜೆ ಸಾಂಗೋಪಸಾಂಗವಾಗಿ ನಡೆಯಲು ಬಹಳವಾಗಿ ಶ್ರಮಿಸಿದ್ದಾರೆ. ಅಂತವುಗಳಲ್ಲಿ ದೇವರಿಗೆ ಹೂವಿನಿಂದ ಹಿಡಿದು ಸುವರ್ಣದವರೆಗೂ ದಾನಮಾಡಿರುವುದು ನಮಗೆ ಅನೇಕ ಶಾಸನಗಳಿಂದ ತಿಳಿದುಬರುತ್ತದೆ.

ಡಂಬಳದ ಕ್ರಿ.ಶ.೧೦೫೯ರ ಶಾಸನವು ಕಲ್ಯಾಣ ಚಾಲುಕ್ಯರ ಒಂದನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು ಇದರಲ್ಲಿ ಧರ್ಮವೊಳದ ೧೬ ಸೆಟ್ಟಿಗಳ ಸಮ್ಮುಖದಲ್ಲಿ ಬೀರಯ್ಯಸೆಟ್ಟಿಯು ನಗರ ಜಿನಾಲಯಕ್ಕೆ ಸುವರ್ಣ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨೮] "ಸಕವರ್ಷ ೯೮೧ನೇ ವಿಕಾರಿ ಸಂವತ್ಸರದ ಚೈತ್ರ ಸುದ್ಧ ತ್ರಯೋದಶಿ ಆದಿತ್ಯವಾರದ(ಂ)ನ್ದು ಕೊಟ್ಠ ಮೊಕ್ಕೆಯ ಪೊಸವೊಂಗದ್ಯಾಣ ೩೫ । ಈ ಪೊ(ಂ)ನ್ನ ಶ್ರಾವಕ ಸಮೂಹ ಮಿಟ್ಟು ಕಾಳಾನ್ತರದೊಳ್ ನಡೆಯುಸುವರ್ । ಇನ್ತೀ ಧರ್ಮ್ಮಮ ನಡೆಯಿಸಿದ ಮಹಾಪುರುಷರ್ಗೆ ತೀರ್ಥಸ್ತಾನದ ಮಹಾಧ್ವಜಮೆತ್ತಿದ ಫಳಮಕ್ಕುಂ" ಎಂದು ದಾನವಾಗಿ ನೀಡಿದ್ದಾನೆ. ಅಲ್ಲದೆ ಇದು ಆ ಜಿನಾಲಯದೊಡವೆ ಎಂದು ತಿಳಿಸಲಾಗಿದೆ.

ಕ್ರಿ.ಶ.೧೦೭೧ರ ಸೊರಟೂರಿನ ಜೈನಬಸದಿಯ ಬಳಿ ಇರುವ ಶಾಸನ ಕಲ್ಯಾಣ ಚಾಲುಕ್ಯರ ದೊರೆ ಎರಡನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು, "ಸಕವರ್ಷ ೯೯೩ನೆಯ ವಿರೋಧಕೃತ್ಸಂವತ್ಸರದ ಮಾಘ ಸುದ್ಧ ಪಾಡಿವಮಾದಿತ್ಯವಾರಮುತ್ತರಾಯಣ ಸಂಕ್ರಾಂತಿ ವ್ಯತೀಪಾತದಂದು ಪಾದಪ್ರಕ್ಷಾಳನ.. . . (ತ)ನ್ನ ಪ್ರಭುಸಾಮ್ಯದ ಅಗ್ರಹಾರಂ ಸರಟವುರದ ಬಲದೇವಜಿನಾಲಯಕ್ಕೆ ತಮ್ಮ ಮಾನ್ಯದೊಳಗೆ ಇಂ(ಬ). . . ದಿಂ ಪಡುವ ಮೂವತ್ತಾಱು ಮತ್ತರ್ಕ್ಕೆಯ್ಯುಮಂ। ಹದಿಯಱದೋಂಟದಿಂ ತೆಂಕಮೂಡದೆಸೆಯಲಯ್ನೂಱು.. . .. ಟಮುಮಂ ತಳಭೋಗಮುಮಂಸರ್ಬ್ಬಬಾಧಾಪರಿಹಾರಮಾಗಿಬಿಟ್ಟು ಕೊಟ್ಟರ್॥ ಮತ್ತ ಮಾ ಬಲದೇವಯ್ಯ . .ಕ್ಕೆ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಟಾನಪರಾಯಣಜಪಸಮಾಧಿಶೀಳ(ಸಂಪ್ಪನ್ನ) ರಪ್ಪ ಶ್ರೀಮತ್ಸರಟವುರದ ಮಹಾಜನವಿನ್ನೂರ್ವ್ವರು ಮಿಟ್ಟ್ರಿ ಎಲೆವಳ್ಳದಿಂ ಮೂಡಲು ಪನ್ನಿರ್ಮ್ಮತ್ತರ್ಕ್ಕೆಯ್ಯ . . . ಯ್ನೂರುಬಳ್ಳಿಯ ತೋಂಟಮುಮಂ। ಒನ್ದು ಘಾಣಮುಮಂ। ಎರಡು ಮನೆಯ ನಿವೇಶಣಮುಮಂ। ಸರ್ವ್ವಬಾಧಾಪರಿಹಾರಮಾಗೆ ಬಿಟ್ಟು ಕೊಟ್ಟರ್." ಎಂದು ಈ ಶಾಸನವು ದಂಡನಾಯಕನಾದಂತಹ ಬಲದೇವಯ್ಯನು ಮತ್ತು ಮಹಾಜನಗಳು ಹುಲಿಯಬ್ಬಜ್ಜಿಕೆಯ ಕಾಲು ತೊಳೆದು ಬಲದೇವ ಜಿನಾಲಯಕ್ಕೆ ನೀಡಿದ ಭೂದಾನದ ವಿಷಯವನ್ನು ಮತ್ತು ಗಾಣವನ್ನು, ಎರಡು

ಮನೆಯ ನಿವೇಶನಗಳನ್ನು ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೨೯] ಈ ಶಾಸನದಲ್ಲಿ ಸೋಮೇಶ್ವರನನ್ನು ಹೊಗಳಿದ್ದು ಹುಲಿಯಬ್ಬಜ್ಜಿಕೆಯ ವಿಚಾರವನ್ನು ತಿಳಿಸಲಾಗಿದೆ.

ಪೊರೆದಾಳ್ದಂ ಭುವನೈಕಮಲ್ಲಮಹಿಪ ತನ್ನಿಷ್ಟದೈವಂ ಜಿನೇ
ಶ್ವರನಾತ್ಮಾಂಬಿಕೆ ಗೊಜ್ಜಿಕಬ್ಬೆ ಜನಕಂ ಗಂಗಾನ್ವಯ ಶ್ರೀವಧೂ
ವರ ನಪ್ಪಗ್ಗಳದೇವನಣ್ಣನನಘಂ ಬೆಳ್ದೇವನೆನ್ದಂದೆ ಭಾ
ಸುರ ತೇಜಂ ಬಲದೇವ ನೆಯ್ದೆ ಕೃತಕೃತ್ಯ . . . ಚಕ್ರದೊಳ್

ಇಂತಹ ಧರೆಯನ್ನು ಹೊಣೆಗಾರಿಕೆಯಿಂದ ಭುವನೈಕಮಲ್ಲ ದೊರೆ ಆಳುತ್ತಿದ್ದಾನೆ, ಜಿನೇಶ್ವರನನ್ನು ಇಷ್ಟದೈವವನ್ನಾಗಿ ಹೊಂದಿದವನು. ಅಂತಹ ಅತ್ಮಾಂಬಿಕೆಯಾದ ಗೊಜ್ಜಿಕಬ್ಬೆ (ಹುಲಿಯಬ್ಬಜ್ಜಿಕಬ್ಬೆಯ)ಯ ಜನಕ ಗಂಗಾನ್ವಯ ಶ್ರೀವಧೂವರನಪ್ಪಗ್ಗಳದೇವನ ಅಣ್ಣ ಅನಂಗ ಬೆಳ್ದೇವನೆಂಬವನು ವೀರಯೋಧನಂತವನು, ಉತ್ಸಾಹಿಯು ಆದ ಬಲದೇವನು ಸಂತುಷ್ಟನಾಗಿ ಇದ್ದನು ಎಂದು ಹೇಳುತ್ತದೆ. ಮುಂದಿನ ಪದ್ಯದಲ್ಲಿ

ಕಂದ :– ಪರಮಜಿನಂ ತನಗಾಪ್ತಂ
ಗುರುಗಳ್ನಯಸೇನದೇವರೊರ್ಜ್ಜಿತ ಧರ್ಮ್ಮಂ
ಪಿರಿದಪ್ಪ ಬಸನಮೆಂದೊಡೆ
ಧರೆಯೊಳ್ ಬಲದೇವನನ್ನುನೋನ್ತರು ಮೊಳರೇ

ಪರಮಜಿನನು ತನಗಾಪ್ತನಂತೆಯು, ಗುರುಗಳಾದ ನಯಸೇನದೇವರು ಊರ್ಜ್ಜಿತಗೊಳಿಸಿದ ಧರ್ಮ್ಮವು ಇರುವಾಗ, ಅಂತವರಿಗೆ ಹಿರಿಯದಾದ ವ್ಯಸನವೆಂದರೆ ಧರೆಯಲ್ಲಿ ಬಲದೇವನಂತವರು ಬೆಳಗದೆ ಇರುವರೆ ಎಂದು.

ಉತ್ಪಲಮಾಲವೃತ್ತ :– ಕನ್ತುಮದೇಭಸಿಂಹರನ ಸನ್ದಪೊಗರ್ತ್ತೆಯ ಚನ್ದಣನ್ದಿಸಿ
ದ್ಧಾನ್ತ ಮುನೀಶ್ವರ್ಗುರುಗಳೆಂಬ ನೆಗರ್ತ್ತೆಯ ದಾವಣನ್ದಿಸಿ
ದ್ಧಾನ್ತ ಮುನೀಶ್ವರರ್ತ್ತಮಗೆ ಶಿಷ್ಯಗಣಾಧಿಪರೆಂಬ ಪೆಂಪು ಲೋ
ಕಾನ್ತ ಮನೆಯ್ದಿತ್ತೇಂ ಸಕಳ ಚನ್ದ್ರಮುನೀನ್ದ್ರರಗಣ್ಯಪುಣ್ಯರೋ.

ಕನ್ತು ಮಹಾದೇವಸಿಂಹನ ಸಲ್ಲಿಸಿದ ಪೊಗರ್ತ್ತೆಯ ಚಂನ್ದಣಸಿದ್ಧಾನ್ತ ಮುನೀಶ್ವರ ಗುರುಗಳೆಂಬ ನೆಗರ್ತ್ತೆಯ ದಾವಣನ್ದಿಸಿದ್ಧಾನ್ತ ಮುನೀಶ್ವರಗೆ ಶಿಷ್ಯರಾಗಿದ್ದ ಚಂದ್ರಮುನಿಗಳ ಶಿಷ್ಯಳಾಗಿದ್ದಳು.

ಕಲಚುರಿವಂಶದ ದೊರೆ ರಾಯಮುರಾರಿ ಸೋವಿದೇವನ ಕಾಲಕ್ಕೆ ಸೇರಿದ ಕ್ರಿ.ಶ.೧೧೭೩ರ ಗುಣನಿಧಿಕೇಶವದೇವನು ಬಸದಿಗೆ ಕೊಟ್ಟ ಸುವರ್ಣದಾನದ ವಿಷಯವನ್ನು ತಿಳಿಸುವ ಶಾಸನವು ಲಕ್ಕುಂಡಿಯ ಜೈನಬಸದಿಯ ಪ್ರವೇಶದ್ವಾರದ ಬಲಕಂಬದಲ್ಲಿದೆ.[೩೦] ಈ ಶಾಸನವು ಸೋವಿದೇವನನ್ನು

ಹೊಗಳಿದೆಯಲ್ಲದೇ ಆ ಕಾಲಕ್ಕೆ ಲೊಕ್ಕಿಗುಣ್ಡಿಯು ಮಹಾ ಅಗ್ರಹಾರವಾಗಿರುವ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ಅಲ್ಲಿ ಧರ್ಮವನ್ನು ರಕ್ಷಿಸಿಕೊಂಡು ಬರುತ್ತಿದ್ದ ಜನರ ಬಗ್ಗೆಯೂ ತಿಳಿಸಿದೆ. ಇಲ್ಲಿ ಬರುವ ಗುಣನಿಧಿಕೇಶವನು ಮಹಾಸಂಪನ್ನನು, ಈತನು, ಜೀಮಯ್ಯನು, ಬಸದಿಯ ದೇವರಷ್ಟವಿಧಾರ್ಚನೆಗೆ ಅಲ್ಲಿಯ ಆಚಾರ್ಯ ಶ್ರೀಷುಷೇನಪಣ್ಡಿತದೇವರ ಕಾಲನ್ನು ತೊಳೆದು ೧೨೦ ಚಿನ್ನದ ವಟಗದ್ಯಾಣ ೩೭೦ ಆಚಂದ್ರಾರ್ಕತಾರಂಬರಂ ನಡೆವನ್ತಾಗಿ ಕೊಟ್ಟರು. ಅಲ್ಲದೆ ನಾಗಿಶೆಟ್ಟಿಯು ಸಹ ೧೦ ಗದ್ಯಾಣವನ್ನು ನೀಡಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ.[೨೧]

ಲಕ್ಕುಂಡಿಯ ಚಂದ್ರಮೌಳೇಶ್ವರ ದೇವಾಲಯದ ತೊಲೆಗಳಲ್ಲಿರುವ ನಾಲ್ಕನೇ ಸೋಮೇಶ್ವರ (ತ್ರಿಭುವನಮಲ್ಲ)ನ ಕಾಲಕ್ಕೆ ಸೇರಿದ ಕ್ರಿ.ಶ.೧೧೮೫ರ ಶಾಸನವು ನೋಂಪಿಯ ಬಸದಿಯ ಅಷ್ಟವಿಧಾರ್ಚನೆಗಾಗಿ ಸುವರ್ಣದಾನದ ವಿಷಯವನ್ನು ತಿಳಿಸುತ್ತದೆ.[೨೨] ಇದರಲ್ಲಿಯೂ ಸಹ ಸೋಮೇಶ್ವರನನ್ನು ಹೊಗಳಲಾಗಿದೆ. "ತಳಭೋಗದ ಕೇಣಿಕಾಜಿ ಬಸವರಸ ಸಿದ್ಧಯ್ಯಂಗಳು ಶ್ರೀಮತ್ತ್ರಿಭುವನಮಲ್ಲದೇವವರ್ಷದ ೩ನೆಯ ಕ್ರೋಧಿಸಂವತ್ಸರದ ಪುಸ್ಯ ಸುದ್ಧ ಪಂಚಮಿ ಸೋಮವಾರ ಉತ್ತರಾಯಣ ಸಂಕ್ರಮಣ ಬ್ಯತೀಪಾತಿದಂದಯಿಸ್ತರ ಕೇಶವಾದಿತ್ಯದೇವರ ನಂದಾದೀವಿ(ಗೆ)ಗಾಚಂದ್ರಾರ್ಕ್ಕ ತಾರಂಬರಂ ಸಲುವಂತಾಗಿತಂಮ ತಳಭೋಗದ ಸ್ಥಳದಲು ಬಿಟ್ಟ ಪಣ . . ತಳಭೋಗದ ಹಿರಿಯ ಸೇನಭೋಗಂ ಕಳಲ ಕನ್ದರ ವಾಮರಸರು ಬಿಟ್ಟ ಪಣ ೧ ಪೊತ್ಥಗ್ರಾಹಕಂ ಬಸವರಸರಳಿಯ ಮಲ್ಲಯ್ಯ ಬಿಟ್ಟ ಹಣ ೧ ಮತ್ತವಾ ಭತ್ತ ಹಟ್ಟಿಯ ಸ್ಥಳದಲುಂ ನಡೆವ ಕೇಸವದೇವ ನಾಗಂಣನಿನ್ತಿವರು ಬಿಟ್ಟ ಪಣ೧ ಭವಣೆಗೆಯ ಸ್ಥಳಕ್ಕೆ ನಡೆವ ಸೇನಭೋಗ ಲಕ್ಕರಸಲ್ಲಯ್ಯಂಗಳು ಬಿಟ್ಟ ಪಣ ೧ ನೆಲ್ಲ ಕಟ್ಟೆಯಲ್ಲಿಯುಂ ನಡೆವ ಬೊಪ್ಪದೇವನಾಯಕರುಂ ಮಾಚಿಸೆಟ್ಟಿಯರುಂ ಬಿಟ್ಟ ಹಣ ೧ ಎಲೆಯ ಸೂದೆಯ ಸ್ಥಳಕ್ಕೆ ನಡೆವ ಸೇನಬೋವ ಮಾಧವದೇವ ಸೋಮಯ್ಯಂಗಳು ಬಿಟ್ಟ ಪಣ ೧ ವೊಮದೆ ವಣಕ್ಕೆ ನಡೆವ ಸೇನಬೊವ ಸೋಮಯ್ಯನಾಗದೇವರಿಂತಿರ್ವ್ವರುಂ ಬಿಟ್ಟ ಪಣ ೧ ನಾಲ್ಕುಂ ಹೆಬದಬಾಗಿಲಲುಂತಳ ಭೋಗದದೆಸೆಯಿಂ ನಡೆವ ಕೋಲುಕಾಜಿರು ಬಿಟ್ಟ ಹಣ ೧ ಪೇಣ್ಡೆಯ ಕೇರಿಯಲು ನಡೆವಂತಹ ಕೋಲುಕಾಜಿರಿರ್ವ್ವರುಂ ಬಿಟ್ಟ ವೀಸ ೧೦ ದೇವರ ವೀಳಯಕ್ಕೆ ಬಿಟ್ಟಲೆ ದೀಪಾವಳಿಯ ಹರ್ವ್ವದಲು ದೇವರ ಭೋ(ಗ)ಕ್ಕೆ ಬಿಟ್ಟ ಮೆಣಸು ಬಳ್ಳೆಯೆರಡು ಕಾರಪುಂಣಮಿಯಲು ದೇವರ್ಗ್ಗೆ ಹಬ್ಬಕ್ಕೆಂದು ಬಿಟ್ಟಬೆಲ್ಲ ೨೦ಬ್ಯವಹಾರಿ ಸಂಕಂಣನಾ ಸೋವಂಣ ಮೆಳಸಿನ ಕೊಳಗದ ಸಿವಂಣಗಳಿಂತೀ ಮೂವರು ಬಿಟ್ಟ ಮ ೧॥ ಕೋಲ ಕೇಣಿಕಾಜಿಂ ಆಚಯ್ಯಂ ಕೋಲ ಕೇಣಿಯಲು ಬಿಟ್ಟ ಮ ೧ ಕೊಡೆಯ ವೀಸವಂ ನೋಡುವ ಹೊಂನವರ ಬಾಚರಸ ಮಿಂಡರ ಸೋವಣ್ಣನಿಂತಿವರು ಧೂಪಕ್ಕೆ ಬಿಟ್ಟ ಹಣಂ ೧ ಅವರ ಕೋಲುಕಾಜಿ ಬಸವಂಣ ಕೊಟ್ಟ ಹಾಗ(೧)ಮತ್ತವಾ ಪುಣ್ಯದಿನದಲು ಕರವಡದ ಕೇಣಿಕಾಜಿಂ ಬಸವರಸ ಸಿದ್ಧಯ್ಯಂಗಳತಿಶಯಧರ್ಮ್ಮಮನಸ್ಸರುಂ ಪುರಸ್ಸರರಾಗಿ ಶ್ರೀ

ಕೇಶವಾದಿತ್ಯದೇವ ರಂಗಭೋಗವಾಚಂದ್ರತಾರಂಬರಂ ನಡೆವಂತಾಗಿ ತಂಮೆಕರವಡದ ಕೇಣಿಯಲು ಬಿಟ್ಟ ಪಣ ೫ ಆ ಹಿರಿಯ ಸೇನಬೋವ ಕಳಲಕನ್ದರ ವಾಮರಸ ಭೂಪಕ್ಕೆ ಬಿಟ್ಟ ಪಣ ೧ ಮತ್ತವಾ ಪೊತ್ಥಗ್ರಾಹಕ ವತ್ಸರಸ ಬಿಟ್ಟ ಮ ೧ ಕರವಡದ ಭ್ರಮಾಂತುಕಕ್ಕೆ ನಡೆವ ನಾಗರಸ ಬಿಟ್ಟ ಮ ೧ ಆ ಪಾಂಡವರ ದೇವಬಿಟ್ಟ ಮ ೧ ಆ ಕೋಲುಕಾಱ ನಾರಣದೇವದಾಮಯ್ಯನಿಂತಿವರು ಬಿಟ್ಟ ಪಣ೧ ಯಿಂತೀ ಸಾಸರಾರ್ಗ್ಗದಿನ್ದಾರಾದಡಂ ತಳಭೋಗಕರವಡದಿಂ ಕೊಂಡ ಕೇಣಿಕಾಱರು ತಂತಂಮ ಧರ್ಮ್ಮಂಗಳಾಗಾಚಂದ್ರತಾರಂಬರಂ ನಡವನ್ತಾಗಿ ನಡಸುವರ್ನ್ನಡಸಿದವರ್ಗ್ಗೆ ಗಂಗೆಗಯೆ ವಾರಣಾಸಿಯಲು ಸಹಸ್ರ ಕವಿಲೆಯಂ ಸಹಸ್ರ ವೇದವಿದರಾಗಿರ್ದ್ದ ಬ್ರಾಹ್ಮಣರ್ಗ್ಗಿತ್ತ ಫಲವಕ್ಕು" ಎಂದು ಕಂಮಟೇಶ್ವರ ಸೊಡರೆಣ್ಣೆಗೆ ಬಿಟ್ಟ ಸುವರ್ಣದಾನದ ವಿಷಯವನ್ನು ತಿಳಿಸುತ್ತದೆ.[೩೩]

೧೨ನೇ ಶತಮಾನದ ಒಂದು ಶಾಸನವು "ಶ್ರೀಮತು ವಸುಧೈಯ್ಯಬಾನ್ಧವ ಜಿನಾಲಯದ ತ್ರಿಭುವನ ತಿಲಕ ಶ್ರೀಶಾನ್ತಿನಾಥದೇವರ್ಗ್ಗೆ ಶ್ರೀಸಾಸಿರ್ವ್ವರು ಸರ್ವ್ವ ನಮಸ್ಯವಾಗಿ ಕೊಟ್ಟ ದಾನ (ಸಾ)ಲೆಯ ಮನೆಯ ನಿವೇಶಣದ ಸೀಮೆ ಮಂಗಳ ಮಹಾ ಶ್ರೀ ಶ್ರೀ " ಎಂದು ಸರ್ವನಮಸ್ಯೆ ಪರಿಹಾರವಾಗಿ ದಾನಶಾಲೆಗೆ ನಿವೇಶನವನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ.[೩೪]

೧೨-೧೩ನೇ ಶತಮಾನದ ಶಾಸನವೊಂದು ಗದುಗಿನ ವೀರನಾರಾಯಣನ ಗುಡಿಯಲ್ಲಿದ್ದು, ಕಲಿದೇವಸ್ವಾಮಿಯಾದಿ ಜಿನಭವನ ಮಹಾಮಂಟಪಮಂ ಮಾಡಿಸಲು ಮಹಾಪ್ರಧಾನ ಮಹಾದೇವನಿಗೆ ಯಕ್ಕಲ ಭೂಪಾಲ ಕೊಟ್ಟ ವಿವರಗಳನ್ನು ತಿಳಿಸುತ್ತದೆ. [೩೫.]

ಕ್ರಿ.ಶ.೧೨೮೮ರ ಡಂಬಳದಲ್ಲಿರುವ ಯಾದವ ದೊರೆ ರಾಮಚಂದ್ರನ ಕಾಲದ ಶಾಸನವೊಂದು ಅಬ್ಬುಲ್ಲವಲ್ಲಿಯ ಗೋರಿ ಎದುರು ಇದ್ದು, ಅದು ಶ್ರೀಮನ್ನಗರ ಜಿನಾಲಯಕ್ಕೆ "ಸ್ವಸ್ತಿ ಶ್ರೀಮತು ಯಾದವನಾರಾಯಣ ಭುಜಬಳ ಪ್ರೌಢಪ್ರತಾಪ ಚಕ್ರವರ್ತ್ತಿ ವೀರರಾಮದೇವ ರಾಜ್ಯೋದಯದ ಶಕವರುಷ ೧೨೧೧ನೆಯ ಸರ್ವ್ವದಾರಿ ಸಂವತ್ಸರದ ಪುಸ್ಯ ಸುಧ ಬಿ ೨ ಆದಿವಾರಮುಂಮುತ್ತರಾಯಣ ಸಂಕ್ರಾಂನ್ತಿ ಬ್ಯತೀಪಾತಮುಮಿಂತಪ್ಪ ಸುಭದಿನದಲು ಶ್ರೀಮತ್ಸಾಳ್ವ ಚಾಉಂಡನನುಜಂ ಸಪ್ತರಸನುತ್ಸಾಹದಿಂ ಪ್ರೇಮಂ ಧರ್ಮ್ಮೊಳಲೆಂಟು ನಾಡದಿಪರಿರೆಣ್ಬರ್ಮ್ಮಹಾನಾಡುಗಳ್ ಶ್ರೀಮಂನ್ನಗರಜಿನಾಲಯಕ್ಕೆ ಪಿರಿದೊಂದನಂದ ಸದ್ಭಕ್ತಿ ಇಂತಾಮೊಲಿದಿತ್ತರು ಸಚಿಧಾಯಾಯಮನಿತಂ ಚಂದ್ರಾರ್ಕತಾರಂಬರಂ ಪಸರಕ್ಕೆ ಸೂಂಟಿಗೆ ಜೋಳಂ ಹೇರಿಂಗೆ ೧೦೦ ಎಲೆ ಹೊತ್ತಳಕ್ಕೆ ೫೦ಬಿಟ್ಟರು ಅಯ್ವತೊಕ್ಕಲು ದೇವರಿಗೆ ನಂದಾದೀವಿಗೆಗೆ ಬಿಟ್ಟ ಯಂಣ್ನೆಯ ಸೊಂಟಿಗ ಅರ್ದ್ದ ಪ್ರಮಾಣಮತ್ತಂ. . . . ಅಷ್ಟವಿಧಾರ್ಚ್ಚನೆಗೆ ಯೇಣೆಗೆಹಾರವಂ"[೩೬] ಬಿಟ್ಟ ವಿಷಯವನ್ನು ತಿಳಿಸುತ್ತದೆ.

ಲಕ್ಷ್ಮೇಶ್ವರದ ಕ್ರಿ.ಶ.೧೨೯೫ರ ರಾಮಚಂದ್ರ ದೊರೆಯ ಶಾಸನವು ಸೋಮೇಶ್ವರ ದೇವಾಲಯದ ಹತ್ತಿರವಿರುವ ಗಣಪತಿ ದೇವಾಲಯದ ಪಕ್ಕದಲ್ಲಿದ್ದು, ಇದು ಸೋಮಯ್ಯನು ಶಾಂತಿನಾಥದೇವರಿಗೆ

ಅಂಗಭೋಗ, ರಂಗಭೋಗ, ನಿತ್ಯ ಪೂಜಾನಿಮಿತ್ತವಾಗಿ ಕೊಂಡ ಭೂಮಿಯನ್ನು ದಾನವಾಗಿಬಿಟ್ಟ ವಿಷಯವನ್ನು ತಿಳಿಸುತ್ತದೆ.[೩೭]

**೨.೩. ಶೈವ ದಾನ ಶಾಸನಗಳು**

ಕರ್ನಾಟಕದಲ್ಲಿ ಜೈನಧರ್ಮ ಜನಪ್ರೀಯವಾದಂತೆ ಶೈವ ಧರ್ಮವೂ ಕೂಡ ಜನಪ್ರೀಯವಾದ ಧರ್ಮವಾಗಿದೆ. ಈ ಧರ್ಮದಲ್ಲಿ ಕಾಳಾಮುಖರು, ಕಾಪಾಲಿಕರು, ಪಾಶುಪತರು ಮತ್ತು ಲಾಕುಳರು ಎಂಬ ಗುರುಗಳನ್ನು ನೋಡುತ್ತೇವೆ. ಆದರೂ ಸಹ ಇಲ್ಲಿ ಶೈವ ಮತ್ತು ವೀರಶೈವ ಎಂದು ಭೇದವನ್ನು ಪರಿಗಣಿಸದೆ, ಈ ಧರ್ಮವನ್ನು ನೋಡಲಾಗಿದೆ. ನಾವು ಈ ಧರ್ಮವನ್ನು ವಿವೇಚಿಸುವಾಗ ಈ ಧರ್ಮದ ಪ್ರಾಚೀನತೆಯನ್ನು ಗಮನಿಸಬೇಕಾಗುತ್ತದೆ. ಈ ಧರ್ಮದ ಮೂಲ ನೆಲೆಯನ್ನು ನಾವು ಸಿಂಧೂಬಯಲಿನ ನಾಗರೀಕತೆಯಲ್ಲಿ ಕಾಣಬಹುದು. ಸಿಂಧೂಬಯಲಿನ ನಾಗರೀಕತೆಯ ಪ್ರದೇಶಗಳನ್ನು ಉತ್ಖನನ ಮಾಡಿದಾಗ ಅಲ್ಲಿ ಶೈವಧರ್ಮದ ಅಂಶಗಳು ಬೆಳಕಿಗೆ ಬರುತ್ತವೆ. ಹೇಗೆಂದರೆ ಅಲ್ಲಿ ದೊರೆತಿರುವ ಶಿವಲಿಂಗ, ಪಶುಪತಿಮುದ್ರೆ ಮತ್ತು ಡುಬ್ಬದಗೂಳಿ(ವೃಷಭ) ಇವು ಶೈವ ಧರ್ಮದ ಕುರುಹುಗಳು. ಹರಪ್ಪ ಎಂಬ ಸ್ಥಳವು ಹರ+ಅಪ್ಪ=ಹರಪ್ಪ ಎಂಬ ಹರನ(ಶಿವನ) ಹೆಸರಿನಲ್ಲೆ ಅಲ್ಲದೆ, ಹರನೇ ತಂದೆ, ಅವನೇ ಒಡೆಯ ಎಂಬುದನ್ನು ಪ್ರತಿಧ್ವನಿಸುತ್ತದೆ. ಇನ್ನು ವೇದಗಳಲ್ಲಿ ಶಿವ, ರುದ್ರ, ವೃಷಭ, ದೇವರುಗಳ ಉಲ್ಲೇಖವಿರುತ್ತದೆ. ಋಗ್ವೇದದಲ್ಲಿ ರುದ್ರ ಅಧ್ಯಾಯವೆಂಬ ಒಂದು ಭಾಗವೇ ಇದೆ. ಇನ್ನು ವೀರಶೈವ ಧರ್ಮವು ಶೈವ ಧರ್ಮದ ಒಂದು ಭಾಗವೇ ಆಗಿದೆ. ೧೨ನೇ ಶತಮಾನದಲ್ಲಿ ಬಸವಣ್ಣನವರು ಈ ಧರ್ಮವನ್ನು ಜನಪ್ರೀಯಗೊಳಿಸಿದರಲ್ಲದೆ ದಾನದ ಶ್ರೇಷ್ಠತೆಯನ್ನು ತಿಳಿಸುತ್ತ "ಸ್ವಾಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ"[೩೮] ಎಂಬ ಮಾತನ್ನು ಹೇಳಿದ್ದಾರೆ. ಸರ್ವಜ್ಞನು ತನ್ನ ವಚನದಲ್ಲಿ

ಕೊಟ್ಟದ್ದು ತನಗೆ, ಬಚ್ಚಿಟ್ಟಿದ್ದು ಪರರಿಗೆ
ಕೊಟ್ಟಿದ್ದು ಕೆಟ್ಟಿತೆನಬೇಡ । ಮುಂದೆ
ಕಟ್ಟಿಹುದು ಬುತ್ತಿ ಸರ್ವಜ್ಞ॥

ಎಂದು ಹೇಳುತ್ತಾನೆ. ಅಂದರೆ ಕೊಟ್ಟ ದಾನ ಮನುಷ್ಯನಿಗೆ ಮುಂದಿನ ಜನ್ಮದಲ್ಲೂ ಆತನಿಗೆ ಒಳಿತನ್ನು ಮಾಡುತ್ತದೆ, ಬಚ್ಚಿಟ್ಟ ಐಶ್ವರ್ಯ ಇಂದಲ್ಲ ನಾಳೆ ಬೇರೆಯವರ ವಶವಾಗುತ್ತದೆ. ಆದ್ದರಿಂದ ಮನುಷ್ಯ ತಾನು ಬದುಕಿರುವ ಅವಧಿಯಲ್ಲಿಯೇ ದಾನವನ್ನು ನೀಡಿ ಪುಣ್ಯದ ಫಲವನ್ನು ಸಂಪಾದಿಸಬೇಕು ಎಂಬುದಾಗಿ ಈ ತ್ರಿಪದಿಯಲ್ಲಿ ತಿಳಿಸುತ್ತಾನೆ. ಪ್ರಾಚೀನ ಕಾಲದಲ್ಲಿ ದಾನಗಳನ್ನು ದೊರೆಗಳು, ಮಹಾಮಂಡಳೇಶ್ವರರು, ಮಹಾಸಾಮಂತರು, ಪ್ರಭುಗಾವುಂಡರು, ವ್ಯಾಪಾರಿಗಳು, ಆಡಳಿತವರ್ಗದವರು ಮತ್ತು ಊರಿನ ಪ್ರಮುಖರು ನೀಡುತ್ತಿದ್ದ ವಿಷಯ ಶಾಸನಗಳಲ್ಲಿದೆ.

### ೨.೩.೧. ದೇವಾಲಯಗಳ ನಿರ್ಮಾಣ

ಈ ಭಾಗದಲ್ಲಿ ದೊರೆಯುವ ದೇವಾಲಯಗಳ ನಿರ್ಮಾಣದ ಶಾಸನಗಳು ಕಡಿಮೆ. ಆದರೆ ಕ್ರಿ.ಶ. ೮೭೫ರ ರಾಷ್ಟ್ರಕೂಟರ ದೊರೆ ಎರಡನೇ ಕೃಷ್ಣನ ಕಾಲಕ್ಕೆ ಸೇರಿದ (ಅಮೋಘವರ್ಷ ಬದ್ದೆಗ) ಗಂಗರ ಅರಸ ಮಾರಸಿಂಹನ ಅಜ್ಜಿಯಾದ ಬುಜ್ಜಬ್ಬರಸಿ ಹೆಬ್ಬಾಳದಲ್ಲಿ ಶಿವದೇವಾಲಯವನ್ನು ನಿರ್ಮಿಸಿ ಆ ದೇವಾಲಯಕ್ಕೆ ಭೂದಾನವನ್ನು ಮಾಡಿರುತ್ತಾಳೆ.[೩೯] ಈ ವಿಚಾರ ಹೆಬ್ಬಾಳದ ಶಾಸನದಿಂದ ತಿಳಿದುಬರುತ್ತದೆ.

ಯಾದವ ದೊರೆ ಸಿಂಹಣನ ಕಾಲಕ್ಕೆ ಸೇರಿದ ಒಂದು ಶಾಸನವು ಲಕ್ಷ್ಮೇಶ್ವರದ ಸೋಮನಾಥ ದೇವಾಲಯದ ಪಕ್ಕದಲ್ಲಿರುವ ಗಣಪತಿ ದೇವಾಲಯದ ಗೋಡೆಗೆ ನಿಲ್ಲಿಸಲಾಗಿದ್ದು ಈ ಶಾಸನವು ಸಂಗಯ್ಯ ಎಂಬುವವನು ಇದೇ ಸೋಮನಾಥ ದೇವಾಲಯದ ಆವರಣದಲ್ಲಿ ರಮೇಶ್ವರ ದೇವಾಲಯವನ್ನು ಕಟ್ಟಿಸಿದ ವಿಚಾರದ ಬಗ್ಗೆ ತಿಳಿಸುತ್ತದೆ.[೪೦]

ಕಲ್ಯಾಣ ಚಾಲುಕ್ಯರ ದೊರೆ ಆರನೇ ವಿಕ್ರಮಾದಿತ್ಯನ ಕಾಲದ ಸುಮಾರು ಕ್ರಿ.ಶ.೧೧೦೧ಕ್ಕೆ ಸೇರಿದ ಶಾಸನವೊಂದು ಬಹಳ ತ್ರುಟಿತವಾಗಿದ್ದು, ಮುದ್ದಿಮಯ್ಯ ನಾಯಕನು ಶಂಕರನಾರಾಯಣ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಕೆರೆ, ಸತ್ರ ನಿರ್ಮಿಸಿ, ಭೂಮಿ, ಹಣ, ದಾನ ಮಾಡಿದ ವಿಷಯವನ್ನು ಗದುಗಿನ ವೀರನಾರಾಯಣ ಗುಡಿ ಪ್ರಕಾರದಲ್ಲಿರುವ ಶಾಸನ ತಿಳಿಸುತ್ತದೆ.[೪೧]

### ೨.೩.೨. ಪ್ರತಿಷ್ಠಾಪನೆಗಾಗಿ

ನಮ್ಮ ಜನರು ದೇವಾಲಯಗಳು ಹಾಳಾದಾಗ ಅವುಗಳ ರಕ್ಷಣೆ ಭಾರವನ್ನು ತಾವೇ ಹೊತ್ತು ಆ ಕಾರ್ಯ ನಿರ್ವಹಿಸುತ್ತಿದ್ದರು. ಇದರಿಂದ ನಮ್ಮ ದೇವಾಲಯಗಳಲ್ಲಿ ಪುನಃ ಹಲವು ಭಾಗಗಳ ನಿರ್ಮಾಣ, ಪ್ರತಿಷ್ಠಾಪನೆ ನಡೆದಿರುವುದು ತಿಳಿದುಬರುತ್ತದೆ.

ಮುಳಗುಂದದ ಕ್ರಿ.ಶ.೯೭೭ರ ತ್ರುಟಿತ ಶಾಸನವು, "ಸ್ವಸ್ತಿ ಸಕನ್ರಿಪ ಕಾಳತೀತ ಸಂವಚ್ಛರಸಥಜ್ಗಳೆಣ್ಬುನೂರ(ತೂ)ಂಬತ್ತನೆಯ ಇಸ್ವರ ಸಂವತ್ಸರಂ ಪ್ರವರ್ತ್ತಿಸೆ ಜೇಷ್ಠಮಾಸದ ಪುಣ್ಣಮೆಯುಂ ಸೋಮವಾರವು ರೋಹಿಣಿ ನಕ್ಷತ್ರಮುಂ ಶೋಭನಮೆಂಬ ಯೋಗಮುಂ (ತ್ಯತಿಲ)ಮೆಂಬ ಕರಣ. . . ಎಂಬ . . . ಮುಂ. . .ಲಿಟ್ಟ. .(ಕೆ)ಜೆಯಮ್ಮ. . .ಮುನ್ದಣ ಮಾನಸ್ತಂಭಮೋಮಾಡಿಸಿಪ್ರತಿಷ್ಠಗೆಯ್ಸಿದ. . .. .ವಿಜ" ಎಂದು ಅಲ್ಲಿ ರೆಯಮ್ಮನೆಂಬುವನು ಮಾನ ಸ್ತಂಭವನ್ನು ಮಾಡಿಸಿ ಪ್ರತಿಷ್ಠೆಗೈದ ವಿಚಾರವನ್ನು ತಿಳಿಸುತ್ತದೆ.[೪೨]

ಕ್ರಿ.ಶ.೧೦ನೇ ಶತಮಾನದ ಇದೇ ಮುಳಗುಂದ ಗ್ರಾಮದ ಶಾಸನವೊಂದು ಬಹಳ ತ್ರುಟಿತವಾಗಿದ್ದು ಚಾವುಂಡನಿಂದ ಪ್ರತಿಷ್ಠಾಪನೆ ಎಂದು ಹೇಳಿ, ಮಿಯಣ್ನ ಬರಹ ಎನ್ನುತ್ತದೆ.[೪೩] ಆದರೆ ಯಾವುದರ ಪ್ರತಿಷ್ಠಾಪನೆ ಎಂಬುದು ನಿಗೂಢವಾಗಿಯೇ ಉಳಿಯುತ್ತದೆ.

ಕ್ರಿ.ಶ.೧೨ನೇ ಶತಮಾನದ ಒಂದು ಶಾಸನವು ಲಕ್ಕುಂಡಿಯ ನನ್ನೇಶ್ವರ ಗುಡಿ ಕಂಬದ ಮೇಲಿದ್ದು ಇದು ಹೆಬ್ಬಣವಂಶದ ದೇವಲಬ್ಬೆಯ ಆದೇಶದ ಮೇರೆಗೆ ನನ್ನೇಶ್ವರ ದೇವಾಲಯದ ಕಂಬಗಳನ್ನು ನಿರ್ಮಾಣ ಮಾಡಿದ ವಿಷಯವನ್ನು ತಿಳಿಸುತ್ತದೆ.[೪೪]

ಕ್ರಿ.ಶ.೧೩೫೬ರ ಸೊರಟೂರಿನ ಮಲ್ಲೇಶ್ವರಗುಡಿ ಕಂಬದಲ್ಲಿರುವ ಶಾಸನದಲ್ಲಿ "ಶ್ರೀಮಂನ್ಮಹಾನಾಯಕಾಚಾರ್ಯ ಭಾಸೆ ಪಾಲಕರಾದಂಥಾ ಶ್ರೀ ಹಂದಿಗನೂರ ಸಿದೆನಾಯಕರ ಮುತಾಲಿಕನು ಗಬ್ಬಿನಾಯಕನೂ ಸೂರಟೂರ ಹಾಳು ದೇವಾಲಯವನ್ನೂ ಜೀರ್ಣೋದ್ಧಾರ ಮಾಡಿ ಅಲ್ಲಿ ಬಸವೇಶ್ವರ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದ" ಎಂಬ ವಿಷಯವನ್ನು ತಿಳಿಸುತ್ತದೆ.[೪೫]

**೨.೩.೩. ನಿರ್ವಹಣೆಗಾಗಿ ದಾನ**

ದೇವಾಲಯಗಳನ್ನು ನಿರ್ಮಿಸಿದ ನಮ್ಮ ಜನರು ಅವುಗಳ ನಿರ್ವಹಣೆಗಾಗಿ ಹಲವಾರು ದಾನಗಳನ್ನು ನೀಡಿರುವುದು ನಮ್ಮ ಶಾಸನಗಳಲ್ಲಿ ತಿಳಿದುಬರುತ್ತದೆ.

ಕ್ರಿ.ಶ.೮೯೭ರ ರಾಷ್ಟ್ರಕೂಟರ ದೊರೆ ಎರಡನೇ ಕೃಷ್ಣನ ಕಾಲಕ್ಕೆ ಸೇರಿದ ಶಾಸನವು ಮುಂಡರಗಿ ತಾಲೂಕಿನ ಮೇವುಂಡಿಯಲ್ಲಿದ್ದು ಇದು ಕೋಯಿಗೇಶ್ವರ ದೇವಾಲಯಕ್ಕೆ ಕೋಗಳಿ ೫೦೦ ಮತ್ತು ಮಾಸವಾಡಿ ೧೪೦ನ್ನು ಆಳುತ್ತಿದ್ದ ಯಾದವ ವಂಶಜನಾದ ಕುಪ್ಪೆಯರಸನು "ಸ(ಕನ್ರಿ)ಪ ಕಾಳಾತೀತಸಂವತ್ಸರತಂಗ ೮೧೮ನೆಯ ಣಳಸಂವತ್ಸರದ ಕಾತ್ರ(ರ್ಗ)ಕ ಸುದ್ಧ ಪಂಚಮಿ ಸೋಮವಾರ(ದಂದು) (ಮ)ಹಾಜಣಂಗ(ನೂ)ರ್ವ್ವರಧ್ಯಕ್ಷದೊಳ್ ವೇದವಾ(ಹ)ನ ಭಟ್ಟಾರಕರ ಕಾಲಂಕರ್ಚ್ಚಿ (ಭೂ)ದಾನಕ್ಕೆ (ಸ). . . ರದಯೂಱುಮತ್ತರ್ಕ್ಕೆಯ್ಯು(ಮಂ)ತ್ತರ್ಕ್ಕೆಯ್ಯುಮಂ ಕೊಟ್ಟ(ರ)ಲ್ಲಿ"ಎಂದು ಕೊಯಿಗೇಶ್ವರ ದೇವಾಲಯವನ್ನು ಕಟ್ಟಿಸಿ, ಅದರ ನಿರ್ವಹಣೆಗಾಗಿ ವೇದವಾಹನ ಭಟ್ಟಾರಕರ ಕಾಲನ್ನು ತೊಳೆದು ಭೂದಾನವನ್ನು ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೪೬]

ಕ್ರಿ.ಶ.೯೨೫ರ ರಾಷ್ಟ್ರಕೂಟರ ದೊರೆ ನಿತ್ಯವರ್ಷನ ಕಾಲಕ್ಕೆ ಸೇರಿದ ಗದಗ ತಾಲೂಕಿನ ಅಸುಂಡಿಯಲ್ಲಿ ಇರುವ ಒಂದು ಶಾಸನವು ಬಂಕಾಪುರದ ಧೋರೆ ಜಿನಾಲಯದ ಚಂದ್ರಪ್ರಭಭಟ್ಟನು ಪಸುಉಂಡಿಯನ್ನು ಆಳುತ್ತಿದ್ದಾಗ "ಸಕನೃಪ ಕಾಲಾತೀತಸಂವತ್ಸರಶತಂಗಳೆಣ್ಬು(ನೂ)ಱಿನಾಲೌತ್ತೇಟನೆಯ ಪ್ರಾ(ರ್ತ್ಥಿ)ವ ಸ(ಂ)ವತ್ಸರಂ ಪ್ರವರ್ತ್ತಸ ಬ(ಙ್ಕ)ಪುರದಧೋರಜಿನಾಲಯದ ಚನ್ದ್ರಪ್ರಭಭಟಾರಾರ್ಪ್ಪಸುಣ್ಡಿಯ ನಭ್ಯನ್ತರಸಿದ್ಧಿಯಾಳುತ್ತಿರೆ ನಾಗಪುಲಿಗಾವುಣ್ಡಂ ಗಾವುಣ್ಡುಗೆಯ್ಯೆ ರಪ್ಪರ ನಾಗಯ್ಯಂ ತನ್ನ ಮಾಡಿಸಿದ ದೇಗುಲಕ್ಕೆನ್ದು ನಾಗಪುಲಿಗಾವುಣ್ಡನ ಕಯ್ಯೊಟಿಂ ಪನ್ನಿರ್ಮ್ಮತ್ತರ್ಕ್ಕೆಯ್ಯಂ ಮಾಱುಗೊನ್ಡು ಬಿಟ್ಟ ನಾ ಪನ್ನಿರ್ಮ್ಮತ್ತರ್ಕ್ಕೆಯ್ಗಂ ನಾಲ್ಕುಗೆಯ್ದು (ದೇವ)ಮನ್ಯ(ಗ್ಗಾ)ರ್ಗಿಗಿ ಬಾೞ್ವುದು" ಎಂದು ನಾಗಯ್ಯ ಎನ್ನುವವನು ತಾನು ಮಾಡಿಸಿದ ದೇವಾಲಯಕ್ಕೆ ಭೂದಾನವನ್ನು ಬಿಟ್ಟು ಅದನ್ನು

ಕಾದುಕೊಂಡು ಉಳಿಸುವವನಿಗೆ ಒಳ್ಳೆಯದಾಗುತ್ತದೆ. ಇದನ್ನು ಬರೆದವನು "ಲೋಕಯ್ಯಂ" [೪೭]ಎಂದು ಹೇಳಿದೆ.

ಮೂರನೇ ಕೃಷ್ಣನ ಕಾಲಕ್ಕೆ ಸೇರಿದ ಕ್ರಿ.ಶ.೯೪೬ರ ಕುರ್ತುಕೋಟಿಯಲ್ಲಿ ದೊರೆಯುವ ಶಾಸನವು ನನ್ನಿಯ ಗಂಗಂ, ಬೂತಯ್ಯಂ, ಪುಲಿಗೆರೆ-೩೦೦, ಬೆಳ್ವೊಲ ೩೦೦. ಆಳುತ್ತಿದ್ದಾಗ "ಶಕವರ್ಷ ಮೆಣ್ಬುನೂಱಱುವತ್ತೆಣ್ಟನೆಯ ಪರಾಭವ ಸಂವತ್ಸರ(ಂ)ತದ್ವರ್ಷಾಭ್ಯನ್ತರ ಕಾರ್ತಿಕ ಸುದ್ಧ ಪಞ್ಚಮಿಯುಮಾದಿತ್ಯವಾರದಂದು ಕುಱುತಕೂಣ್ಟೆಯ ಮೂಲಸ್ಥಾನ(ದ) ದೇವರ್ಗ್ಗೆ ಲೋಕಯ್ಯಂ ತನಗೆ ಘಾವುಣ್ಡು ಮಿ. . ಮೇಕಭೋಗಮಾಗಿ ಯಾಳುತ್ತುಬ್ದು. . ವನ ಭುಜಂಗಭಟಾರರ ಕಾಲಂಕಜ್ಚಿ(ಕೊಟ್ಟ) ಕೆಯ್ಮತ್ತರ್೧(೨) ಆದಿತ್ಯದೇವ(ರ್ಗ್ಗೆ)ಮತ್ತ(೧೨)ಮ(ನೆ)೨ಅನ್ತಿರ್ಪ್ಪತ್ತಿನಾಲ್ಕು ಮತ್ತರ್ಗ್ಗೆ . . . .ಮಂಗಳಂ" ಎಂದು ಸಕವರ್ಷ ೮೬೮ನೇ ಪರಾಭವ ಸಂವತ್ಸರದಲ್ಲಿ ಕುರ್ತುಕೋಟಿಯ ಮೂಲಸ್ಥಾನ ದೇವರಿಗೆ ಭುಜಂಗ ಭಟ್ಟಾರರ ಕಾಲನ್ನು ತೊಳೆದು ೧೨ ಮತ್ತರು ಭೂಮಿಯನ್ನು ಮತ್ತು ಆದಿತ್ಯ ದೇವರಿಗೆ ೧೨ ಮತ್ತರು ಭೂಮಿ ಮತ್ತು ಮನೆಗಳನ್ನು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೪೮]

ಸೊರಟೂರಿನ ಕ್ರಿ.ಶ.೯೫೧ರ ಶಾಸನವೊಂದು "ಸಕನ್ರಿಪ ಕಾಲಾಕರಾನಟಕ ಸಂವತ್ಸರ ಶತಂಗಳ್ ೮೭೩ ವಿರೋದಿಕೃತ ಸಂವತ್ಸರದ ಮಾರ್ಗಶೀರಮಾಸದ ಪುನ್ನಮಿಯುಮ್ ರೋಹಿನಿ ನಕ್ಷತ್ರಮುಮಂ ಸೋಮಗ್ರಹಣದಂದು ರುದ್ದಪಯ್ಯನ ಪೆರ್ಗ್ಗಡೆ ಆಚಪಯ್ಯನಂಮ ಗಾಮುಂಡ ಸಾಮಿ ಕಳ್ತಾಯಮ್ಮನುಂ ಭೀಮರಾಶಿಭಟ್ಟಾರರ ಕಾಲಂ ಕರ್ಚ್ಚಿಸಾಯಿರ ಬಲ್ಲಿಯ ತೋಂಟಮಂ ದೇವರ್ಗ್ಗೆಕೊಟ್ಟಾರ್" ಎಂದು ವೀರಭದ್ರದೇವರ ದೇವಾಲಯದ ಎದುರಿಗೆ ಇರುವ ರಾಷ್ಟ್ರಕೂಟರ ದೊರೆ ಮೂರನೇ ಕೃಷ್ಣನ ಕಾಲಕ್ಕೆ ಸೇರಿದ ಶಾಸನವು ದೇವಾಲಯಕ್ಕೆ ನೀಡಿದ ಹಲವಾರು ದಾನಗಳ ವಿಷಯವನ್ನು ತಿಳಿಸುತ್ತದೆ.[೪೯]

ಕ್ರಿ.ಶ.೯೯೪-೯೫ರ ಗದಗ ತಾಲೂಕಿನ ಹೊಸುರು ಗ್ರಾಮದಲ್ಲಿನ ಶಾಸನವೊಂದು ಕಲ್ಯಾಣ ಚಾಲುಕ್ಯರ ದೊರೆ ೨ನೇ ತೈಲ (ಶ್ರೀಮದಾಹವಮಲ್ಲದೇವರ) ತತ್ಪಾದದ್ಮೋಪಜೀವಿ "ಸ್ವಸ್ತಿ ಸಮಧಿಗತಪಞ್ಚಮಹಾಸಬ್ಧ ಮಹಾಸಾಮನ್ತಂ ಕನ್ನನ ಬಣ್ಟಂ ಕಟಕಪ್ರಾಕಾರಂ ನೆರೆವೊಡೆಬಣ್ಟಂ ಗಿರಿದುರ್ಗ್ಗಮಲ್ಲ ಕೊಂಕಣ ಭಯಂಕರಂ ನಾಮಾದಿಸಮಸ್ತ ಪ್ರಸಸ್ತಿ ಸಹಿತಂ ಶ್ರೀಮತ್ಸೋಭನರಸ ರೆರಡನೂಱುಮಂ ಸುಖಸಂಕಥಾವಿನೋದದಿಂ ರಾಜ್ಯ ಗೆಯುತ್ತಮಿರೆ ಸ್ವಸ್ತಿ ಶ್ರೀ ಸಿನ್ದಕುಳೋದ್ಭವಂ ಕುನ್ನಲವಂಶಪ್ರದೀಪಕಂ ಪನ್ನಗಧ್ವಜವಿರಾಜಮಾನಂ ವ್ಯಾಘ್ರಲಾಂಛನಂ ಪಗೆವರಭೀಮಂ(ಸು)ಭಂಟಕರಾಮಂ ಮುಳುಗುನ್ದಂವಿದ್ಯಾಧರಂ ನಾಮಾದಿಸಮಸ್ತಪ್ರಸಸ್ತಿಂ ಶ್ರೀ ಮನ್ಮುಳುಗುನ್ದ ಪ(ಂ)ನ್ನೆರಡಱ ಮನ್ನೆಯಂ ಕೊಱಲಗುನ್ದಂ ಸ್ವಸ್ತಿ ಸಕವರ್ಷ ೯೧೫ನೆಯ ಜಯಸಂವತ್ಸರಂ ಪ್ರವರ್ತಿಸೆ ತದ್ವರ್ಷಾಭ್ಯನ್ತರದೊಳುತ್ತರಾಯಣಸಂಕ್ರಾನ್ತಿಯುಂ ಸೂರ್ಯ್ಯಗ್ರಹಣದನ್ದು

ಮುಳಗುನ್ದ ಪನ್ನೆರಡಜೊಳಗೆ ವೆಲೆಯಪೊಸವೂರೊಳ್ನಾಳ್ಗಾವುಣ್ಡಂ ಕೊಜಲಗುನ್ದಂ ತನ್ನ ಕೊಡ(೦)ಗೆಯ್ಯೆರಡು ತೋಂಟಕಂ ದೃವ್ಯ (ಪೂ)ರ್ವ್ವಕಂ ಗೊಣ್ಡು ಮುಳಗುನ್ದ ಪನ್ನೆರಡಜಗಾವುಣ್ಡುಗಳು(೦) ಮಾಯ್ವಗಾವುಣ್ಡನುಂ ಪುರಸ್ಸರಮಾಗೆ ವಿದ್ಯಾಭರಪಣ್ಡಿತರ ಕಾಲಂಕರ್ಚ್ಚಿ ಮುಳುಗುನ್ದದ ದೇವೇಶ್ವರದೇವರ ಸನ್ನಿಧಾನದೊಳ್ ವೊಸವೂರ ಮೂಲಸ್ಥಾನದೇವರ್ಗ್ಗೆ ಬಿಟ್ಟ ಪಟ್ಟವರ್ದ್ಧನದ ತೋಣ್ಬವೊನ್ದು ತವರಾಜದ ತೋಣ್ಬವೊನ್ದು ಮೂಲಸ್ಥಾನದೇವರ್ಗ್ಗೆಜೆಯಮ್ಮಗಾವುಣ್ಡಂ ವಿದ್ಯಾದಾನಕ್ಕೆ ಬಿಟ್ಟ ಕಲ್ಲಬಾವಿಯ ತೋಣ್ಬ ವೊನ್ದನ್ತು ಮೂಜುತೋಂಟಕ್ಕ ಮೂಜುಮತ್ತರ್ಕ್ಕಿಸುಕಾಡಿಂಗ ಮರುವಣಮನಿತ್ತುಣ್ಬಪ್ನೆರಡು ತೋಂಟಕ್ಕ ಕೊಯ್ಲೊಳ್ ಪೋಂಗೆ (ಪತ್ತು) ವೀಸವನುಣ್ಬರೂರೊಳೆನಿತು ತೋಂಟವನಿತರ್ಕ್ಕೆ ಪೊಂಗೆ ಬೇಳೆಯುಂ ಕೊಯ್ಲೊಳಯ್ಯೂಜಿಲೆಯನುಣ್ಬರಿನ್ತೀ ಧರ್ಮ್ಮಮಂ ಕಾದು ನಡೆಯಿಸಿದಂಗೆ ವಾರಣಸಿ ಕುರುಕ್ಷೇತ್ರ ಪ್ರಯಾಗೆ ಯರ್ಘ್ಯತೀರ್ತ್ಥಗಂಗೆ ಗಂಗಾಸಾಗರದೊಳ್ ಸಾಸಿರ ಕವಿಲೆಯಂ ಕೋಡುಂಕೊಳಗುಮಂ ಪಞ್ಚರತ್ನದಿಂ ಕಟ್ಟಿಸಿ ಮಹಾರಿತ್ವಿಜರ್ಕ್ಕಳ್ಗೆಯುಭಯಮುಖಿ ಕೊಟ್ಟ ಫಲವಕ್ಕು"ಎಂದು ಶ್ರೀ ಮತ್ಸೋಬರಸನು ಸುಖದಿಂದ ರಾಜ್ಯವಾಳುತ್ತಿದ್ದಾಗ ಮುಳಗುಂದ-೧೨ರ ನಾಡುಗಾವುಂಡ, ವೆಲೆಯಪೊಸವೂರ ಗಾವುಣ್ಡ, ಮಾಯ್ವಗಾವುಣ್ಡನು ಸೇರಿ ವಿದ್ಯಾಭರಣಪಣ್ಡಿತರ ಕಾಲನ್ನು ತೊಳೆದು ಮುಳಗುಂದದ ದೇವೇಶ್ವರ ದೇವರ ಸನ್ನಿಧಿಯಲ್ಲಿ ಪೊಸವೊರ ಮೂಲ ಸ್ಥಾನದೇವರಿಗೆ ಭೂದಾನವನ್ನು ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೫೦]

ಮುಂಡರಗಿ ತಾಲೂಕಿನ ನಾಗರಹಳ್ಳಿ ಗ್ರಾಮದ ಹತ್ತಿರ ತುಂಗಭದ್ರಾನದಿ ದಡದಲ್ಲಿರುವ ಪಂಚಲಿಂಗೇಶ್ವರ ದೇವಾಲಯಕ್ಕೆ "ಸಮಧಿಗತಪಞ್ಚಮಹಾಶಬ್ದ ಮಹಾಸಾಮನ್ತಂ ಸಿಂಗನ ಗರುಡಂ ಶ್ರೀಜಗದೇಕಮಲ್ಲದೇವರ ಮಗಂ ಶ್ರಿಮದ್ದಸರಸರು ಮಾಸೆಯವಾಡಿ ನೂಜನಾಲ್ವತ್ತಮ ನಾಳುತ್ತುಮಿರೆ। ಸಕವರ್ಷ ೯೪೪ನೆಯ ದುಂದುಂಭಿ ಸಂವತ್ಸರದ ಚೈತ್ರಸುದ್ದ ಪಂಚಮಿ ಆದಿತ್ಯವಾರದನ್ದು ತುಂಗಭದ್ರೆಯ ತಟ ಯರಗಿಲ್ವಾಳ ನಾಗಮಗಾವುಣ್ಡನು ಮರಸುಮಿಟ್ಟುತ್ರಿಭುವನನಾರಾಯಣ ಧರ್ಮ್ಮ ಸೆಟ್ಟಿಯು ಮಾಡಿಸಿದ ಧರ್ಮ್ಮೇಸ್ವರಕ್ಕೆ ಬಿಟ್ಟ ಕೆಯ್ಯಿಮತ್ತ ೬॥ಬರೆದಂ ಈಸರಯ್ಯ॥ ಎಂದು ೬ ಮತ್ತರು ಭೂಮಿಯನ್ನು ದಾನ ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೫೧]

ಗದಗ ತಾಲೂಕಿನ ಅಸುಂಡಿ ಗ್ರಾಮದಲ್ಲಿ ಆಳುತ್ತಿದ್ದ (ಸೌ)ಚಯನಾಯಕನು ಅಣ್ಣೀಗೇರಿಯ ನರಕೇಶ್ವರದ ಮಲೆಯಾಳಪಣ್ಡಿತರ ಶಿಷ್ಯದೇವ-ಸಂಗಿಪಂಡಿತರ ಪಾದಗಳನ್ನು ತೊಳೆದು (ಹ)ಪಂದಿಗೊಳದ ದಾರಿಯಿಂದ ಪೂರ್ವದಿಕ್ಕಿನ ಕರಿಯಾಳದಲ್ಲಿ, ಭೋಗೇಶ್ವರ ದೇವರ ಅಂಗಭೋಗಕ್ಕೆ ಎಂದು ಭೂದಾನವನ್ನು ಮತ್ತು ಗದ್ಯಾಣ ೧ ಪಣ ೨ ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ.[೫೨]

ಮುಳುಗುಂದದ ಕ್ರಿ.ಶ.೧೦೨೪ರ ಶಾಸನವು ಇರಿವಬೆಡಂಗನ ತಮ್ಮ ಅಯ್ಯಣನ ಮಗನಾದ ಇಮ್ಮಡಿ ಜಯಸಿಂಹನ ಕಾಲದಲ್ಲಿ ಬೆಳ್ವೊಲ ಮುರಿಗೆರೆಯನ್ನು ಶ್ರೀಮದ್ವಾವಣರಸರ್ ಆಳುತ್ತಿದ್ದ

ಕಾಲದಲ್ಲಿ ಸಕವರ್ಷ ೯೪೦ನೆಯ ವಿಭವ ಸಂವತ್ಸರದ ಶ್ರಾವಣ ಬಹುಳ ಅಷ್ಟಮಿ ಬುಧವಾರದನ್ದು ಶ್ರೀಭಾವಶಿವದೇವರ್ತ್ತವಗೆ ಮುಕ್ತಿಕಾಲಮಪ್ಪುದ ನಱಿದು ಮುನ್ನಮೆಂಟೆನಯ ದಿವಸದ(ನ್ದು) ಪ್ರಜಾಪರಿವಾರಮಂ ನೆರಪಿ ಚಲ್ಲಪಯ್ಯಂಗಳ್ಗಂ ಶ್ರೀಭಾವಶಿವರ್ಗ್ಗೆ ಅನುಕ್ರಮದಿಂ ಸ್ಥಾನರಾಜ್ಯಭರಮಂ ಕೊಟ್ಟು ತಮಗೆ ಪರೋಕ್ಷವಿನಯಂ ಗಂಗಾಸ್ನಾನಮುಂ ಗಯೆಯೊಳ್ಪಿಣ್ಡಪ್ರದಾನಮುಂ ವಾರಣಾಸಿಯೊಳ್ದೇವಾಲಯ ಮಿನ್ತಿನಿತುಮಂ ಮಾರ್ಪ್ಪನ್ತು ನಾಗಸ್ವಾಮಿ ಬೇಡಿಕೊಣ್ಡು ಸಮರ್ಪ್ಪಣೆ ಮಾಡೆಯವರುಂ ಗುರುಗಳ ಬೆಸನುಮನನೇಕವ್ರತಂಗಳ್ನುಂ ಕೈಕೊಣ್ಡು ತೀರ್ತ್ಥಯಾತ್ರೆಗೆ ಪೋಗುತ್ತುಂ ಧರ್ಮ್ಮಮೇಕಂ ಪರಂಸಖಾ ಎಂಬುದನಱಿವುದಱಿಂದರ್ತ್ಥಮಂ ಸರ್ವ್ವಸ್ವನಿವೇದನಂ ಗೆಯ್ದು ವೃತ್ತಿಯೊಳ್ಕಿಱಿದಂ ಸನ್ತತಿನಿಮಿತಂಮಿರಿಸಿ ಮಿಕ್ಕುದೆಲ್ಲಮಂ ದೇವರ್ಗ್ಗೆ, ಮಠಕ್ಕಂ, ಸತ್ರಕ್ಕಂ, ವಿದ್ಯಾದಾನಾದಿಗಳ್ಗೆಲ್ಲಮಾಗಿ ಕೊಟ್ಟ ಪೊಂಗದ್ಯಾಣವಱು೬೦ ಕೆಯ್ಮತ್ತರ್ಪ್ಪನ್ನೆರಡು ೧೨ ಮನೆ ನಿವೇಸನ ವೊನ್ದು ೧ ಎಂದು ಪಲ್ಲಪಯ್ಯನು ಭಾವಶಿವದೇವರಿಗೆ ಭೂದಾನ ನೀಡಿದ ವಿಚಾರವನ್ನು ತಿಳಿಸುತ್ತದೆ.[೫೩]

ಬರದೂರಿನಲ್ಲಿ ಕ್ರಿ.ಶ.೧೦೩೨ರ ಶಾಸನವೊಂದಿದ್ದು ಇದು ಭರತೇಶ್ವರ ದೇವಸ್ಥಾನಕ್ಕೆ ಆ ಊರಿನ ಇನ್ನೂರು ಮಹಾಜನರು "ಶ್ರೀ ಸ್ವಸ್ತಿ ಸಕವರ್ಷ ೯೫೫ನೆಯ ಅಂಗಿರಸ ಸಂವತ್ಸರದ ಆಷಾಡ ಶುದ್ಧ ಪಾಡಿವ ಆದಿತ್ಯವಾರದನ್ದು ಶ್ರೀಮತ್ ಭರತಾಪುರದೂರೊಡೆಯ ಪ್ರಮುಖ ಮಹಾಜನಮಿನ್ನೂರ್ವರು ಕಯ್ಯೊಳು ಕ್ರಯ ಪೂರ್ವ್ವಕದಿನ್ದಲೆಕೊಣ್ಡ ಪೊಲದ ....ಮೂಡಣ (ಗಡಿ) ಯಲ್ ಎರಡು ಮತ್ತರ್ಕ್ಕಯ್ಯ....ಪ್ಪಡಿಕೊಣ್ಡು ಭರತೇಶ್ವರದೇವರ್ಗ್ಗೆ ಬಿಟ್ಟ....ಧರ್ಮ್ಮವನಿನ್ನೂರ್ವ್ವರುಂ ಪ್ರತಿಪಾಳಿಸುವರಿದೆನಳಿದ ಕವಿಲೆಯನಳಿದ ಪಾತಕನಕ್ಕುಂ" ಎಂದು ಭರತೇಶ್ವರ ದೇವಾಲಯಕ್ಕೆ ಭೂದಾನಬಿಟ್ಟ ವಿಚಾರವನ್ನು ಹೇಳುತ್ತದೆ.[೫೪]

ಅಸುಂಡಿಯ ಕ್ರಿ.ಶ.೧೦೫೩ರ ಶಾಸನವೊಂದು ಸೌಚಯನಾಯಕನು ದೇವಸಿಂಗಿ ಪಂಡಿತರ ಶಿಷ್ಯರಿಗೆ, ದೇವಾಲಯಕ್ಕೆ, ಸತ್ರಕ್ಕೆ, ಸರ್ವಬಾಧಾಪರಿಹಾರವಾಗಿ "ಶ್ರೀಮಾನ್ಮಹಸಾಹಣಾಧಿಪತಿ ಸೌಚಯ್ಯನಾಯಕ.. . . ಳಗಣ ಭತ್ತಗಾವೆ ಎಲೆಯ ಪಸುಣ್ಡಿಯಂ ದುಷ್ಟನಿರ್ಗ. . .ದಿನಾಳ್ದು ಸುಖದಿನಿರೆ ಸಕವರ್ಷ ೯೭೫ನೆಯ ವಿಜ . . . ಕದಮಾವಾಶ್ಯೆ ಆದಿತ್ಯವಾರ ಸೂರ್ಯ್ಯಗ್ರಹಣ . . .ರೇಶ್ವರದ ದೇವಸಿಂಗಿ ಪಣ್ಡಿತರ ಶಿಷ್ಯಂ ಯಮನಿಯ. . . ರಣ ಮೌನಾನುಷ್ಟಾಣಪಾರಾಯಣಪ್ಪ ಧರ್ಮ್ಮ". ಎಂದು ಭೂದಾನ ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೫೫]

ಮಲ್ಲಸಮುದ್ರದ ಕ್ರಿ.ಶ.೧೧೫೭ರ ತ್ರೈಲೋಕ್ಯಮಲ್ಲದೇವನ ಕಾಲದ ಶಾಸನವು ವಾಮಶಕ್ತಿಪಂಡಿತ ದೇವರ ಕಾಲನ್ನು ತೊಳೆದು, ಮೂಲಸ್ಥಾನದೇವರಿಗೆ ಅಂಗಭೋಗ, ಧೂಪ, ದೀಪ, ನಿವೇದ್ಯಕ್ಕೆಂದು ಅಂಣ್ಣಿಗೆಱೆಯ ಕೋಲೊಳು, ಲೊಕ್ಕಿಗೊಂದಿಯ ಮಲ್ಲಿಕಾರ್ಜುನದೇವರಿಗೆ ಭೂದಾನ ಮಾಡಿರುವ ವಿಷಯವನ್ನು ತಿಳಿಸುತ್ತದೆ.[೫೬]

ಗದುಗಿನ ಕ್ರಿ.ಶ.೧೦೬೪ರ ಒಂದನೇ ಸೋಮೇಶ್ವರನ ಕಾಲದ ಶಾಸನವು ಅತಿ ತ್ರುಟಿತವಾಗಿದ್ದು ಮಾರರಸರುಂ ಬೆಳ್ವಲ ಆಳುತ್ತಿದ್ದಾಗ ಶಕವರ್ಷ ೯೮೬ನೆಯ ಕ್ರೋದಿ ಸಂವತ್ಸರದಲ್ಲಿ ಲೊಕ್ಕಿಗುಂಡಿಯ ಸೋಮೇಶ್ವರದ ಸ್ಥಾನಾಚಾರ್ಯರಿಗೆ ಭೂದಾನದ ಜೊತೆ ಹಲವು ದಾನ ನೀಡಿದ ವಿಷಯವನ್ನು ಹೇಳುತ್ತದೆ.[೫೭]

ಡೋಣಿಯ ಕ್ರಿ.ಶ.೧೦೮೦ರ ಶಾಸನವು ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಲಕ್ಷ್ಮೀಮಹಾದೇವಿಯು ಈ ದ್ರೋಣಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಖದಿಂದ ರಾಜ್ಯವಾಳುತ್ತಿದ್ದಾಗ ದ್ರೋಣಪುರದ ಶೆಟ್ಟಿಯರು ಮತ್ತು ಅರವತ್ತು ಮಹಾಜನರು "ಶ್ರೀಮಚ್ಚಾಳುಕ್ಯ ವಿಕ್ರಮಕಾಲದ ೫ನೆಯ ರೌದ್ರ ಸಂವತ್ಸರದ ಪುಷ್ಯ ಸುದ್ಧಪಾಡಿವ ಸೋಮವಾರ ಶೂರ್ಯ್ಯಗ್ರಹಣ ಬ್ಯತೀಪಾತದಂದು ಸಿದ್ಧೇಶ್ವರದೇವರ್ಗೆ ಅಲ್ಲಿಯ ಆಚಾರ್ಯ್ಯ ಲಕ್ಷ್ಮೀಧರಪಣ್ಡಿತರ್ಗೆ ಧಾರಾಪೂರ್ಬ್ಬಕಂ ಮಾಡಿ ಗ್ರಾಮದ ಪೂರ್ಬ್ಬದಿಶಾಭಾಗದೋಳ್ ಕೊಟ್ಟ ತೋಂಟಂ ಮತ್ತರೊನ್ದು" ಎಂದು ಶಿದ್ದೇಶ್ವರ ದೇವಾಲಯಕ್ಕೆ ಅಲ್ಲಿಯ ಆಚಾರ್ಯರಾದ ಲಕ್ಷ್ಮೀಧರ ಪಂಡಿತರಿಗೆ ಧಾರಾಪೂರ್ವಕವಾಗಿ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೫೮]

೬ನೇ ವಿಕ್ರಮಾದಿತ್ಯನ ಕ್ರಿ.ಶ.೧೦೮೭ರ ಕುರ್ತಕೋಟಿ ಶಾಸನವು ಜರಗರ ದೋಣಿ ಸಾಸಿರ್ವ್ವರು ತೆಲ್ಲಿಗರಯ್ಯತೊಕ್ಕಲು ಎಲ್ಲಾ ಸೇರಿ ದಾಸೇಶ್ವರ ದೇವರ ಅಂಗಭೋಗ, ನಿವೇದ್ಯಕ್ಕಾಗಿ, ನನ್ದಾದೀವಿಗೆಗಾಗಿ, ಸರ್ವಬಾಧಾಪರಿಹಾರಮ್ಮಾಗಿ ಆಚಂದ್ರಾಕತಾರಂಬರಂ ಸಲ್ಲುವಂತೆ ಸಕವರ್ಷ ೧೦೧೦ನೆಯ ಪ್ರಭವ ಸಂವತ್ಸರದ ಶ್ರಾವಣದಮಾವಾಸ್ಯೆ ಆದಿತ್ಯವಾರಂ ಸೂರ್ಯಗ್ರಹಣದ ತಾತ್ಕಾಲಿಕದೊಳ್ ಶಮಕರ ಷಣಂಗಿಯರ ಪಡುವಣ ಮತ್ತರ್ವ್ವಸುಗೆಯೋಳ್ ಸರ್ಬ್ಬನಮಶ್ಯಂ ಸರ್ಬ್ಬ ಬಾಧಾಪರಿಹಾರಮಾಗಿಪ್ಪತ್ತನಾಲ್ಕುಗೇಣ ಕೋಲೊಳ್ಕೊಣ್ಡು ಬಿಟ್ಟ ಮತ್ತರಿಪ್ಪತ್ತನಾಲ್ಕು" ಎಂದು ಇಪ್ಪತ್ತನಾಲ್ಕು ಗೇಣ ಕೋಲಿನಲ್ಲಿ ಅಳೆದು ಭೂದಾನವನ್ನು ಕೊಟ್ಟ ವಿಚಾರವನ್ನು ಹೇಳುತ್ತದೆ.[೫೯]

ಕ್ರಿ.ಶ.೧೦೯೧ರ ಮುಂಡರಗಿ ತಾಲೂಕಿನ ಪೇಠಾಆಲೂರಿನ ವೀರಭದ್ರದೇವರ ಗುಡಿ ಗೋಡೆಯಲ್ಲಿರುವ ಶಾಸನವು ವಿಕ್ರಮಾದಿತ್ಯನ ಪಟ್ಟಾಭಿಷೇಕವಾದ ೧೬ನೇ ವರ್ಷದಲ್ಲಿ ಹಾಕಿಸಿದ್ದು ಇದು ಲೆಂಕಸುರಿಗೆಯ ಮಾದಿಯಣೇ(ನ) ಮಾಳದಾಲೂರು ಗ್ರಾಮದ ತ್ರೈಪುರುಷ ದೇವಾಲಯಕ್ಕೆ "ಚಾಳುಕ್ಯವಿಕ್ರಮವರ್ಷೇ ಷೋಡಶೇ ಪ್ರಜಾಪತಿ ಸಂವತ್ಸರ ಪ್ರವರ್ತಮಾನೆ ತದನ್ತರ್ಗ್ಗತ ಪುಷ್ಯ ಶುದ್ದ ದ್ವಾದಸ್ಯಾಂ ಬ್ರಿಹಸ್ಪತಿವಾರೆ ಉತ್ತರಾಯಣ ಸಂಕ್ರಮಣಪರ್ವ್ವಣೆ ಬಹೂನೀ ಮಹಾದಾನಾನಿ ದತ್ವಾ ತದ್ದಕ್ಷಿಣಕಾಲೆ ರಾಜಾಶ್ರಯ ಸಮವಾಸಿತ ವಿಜಯಸ್ಕನ್ಧಾನಾರೇ ಲೆಂಕಮಾದಿಯಣೇ[ನ] ಮಾಳದಾಲೂರುಗ್ರಾಮೇಕಾರಿತ ತ್ರಿಪುರ್ಷದೇವಾಯತನ ಖಣ್ಡಸ್ಫುಟಿತ ನವ. . . ಕರ್ಮ್ಮಾರ್ತ್ಥಂಪು(ಃ)ಷ್ಪಾರ್ಘ್ಯಾಗನ್ಧಧೂಪ ನಿವೇದ್ಯಾದ್ಯರ್ಚ್ಚನಾರ್ತ್ಥಂ ಗೀತವಾದ್ಯನ್ರಿತ್ಯಾರ್ತ್ಥಂಚ

ಮಾಸವಾಡಿ ಚತ್ವಾರಿಂಶದಧಿಕಶತಮಧ್ಯೇ ಅಗ್ರಹಾರಂಮ್ಮಾಳದಾಲೂರೂ ಗ್ರಾಮೇ". ಎಂದು ಆರ್ಘ್ಯಗಂಧ, ಧೂಪ, ನೈವೇದ್ಯ, ನಿತ್ಯ ಅರ್ಚನೆಗಾಗಿ ಆ ಊರಿನ ಉತ್ತರ ಭಾಗದಲ್ಲಿ ಭೂದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೬೦]

ಕ್ರಿ.ಶ.೧೧೯೮ರ ಡೋಣಿಯ ಶಾಸನವು ವಿಕ್ರಮಾದಿತ್ಯನ ವಿಕ್ರಮಕಾಲದ ೨೩ನೆಯ ಬಹುದಾನ್ಯ ಸಂವತ್ಸರದ ಪುಷ್ಯದ ಅಮವಾಸ್ಯೆ ಆದಿತ್ಯವಾರ ಉತ್ತರಾಯಣದಲ್ಲಿ ಹಾಕಿಸಿದ್ದು, ಇದು ದ್ರೋಣಪುರದ ಶೆಟ್ಟಿಯರು ಮತ್ತು ಅರವತ್ತು ಮಹಾಜನರು ಸೇರಿ ಸಿದ್ದೇಶ್ವರದೇವರಿಗೆ ಅಲ್ಲಿಯ ಆಚಾರ್ಯರಾದ ಶಕ್ತಿಶಿವರ್ಪಣ್ಡಿತರ್ಗ್ಗೆ ಧಾರಾಪೂರ್ವಕ ಮಾಡಿ ಆ ಗ್ರಾಮದ ಪೂರ್ವದಿಕ್ಕಿನಲ್ಲಿ ಭೂದಾನ ಮಾಡಿದ ವಿಚಾರವನ್ನು ಹೇಳುತ್ತದೆ.[೬೧]

ಗದಗ ತಾಲೂಕಿನ ಹೊಸೂರು ಗ್ರಾಮದ ಕ್ರಿ.ಶ.೧೧೦೩ರ ಶಾಸನವು ಸಹ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಹಾಕಿಸಿದ್ದು "ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮಕಾಲದ ೨೭ನೆಯ ಚಿತ್ರಭಾನುಸಮವತ್ಸರದ ಮಾಘ ಶುದ್ಧ ೧೧ ಬೃಹಸ್ಪತಿವಾರ ಸಂಕ್ರಮಣ ವ್ಯತಿಪಾತದಂದು ಸಕಳಪ್ರಕಾಶಭಟ್ಟಾರಕರ ಮೈದುನನಾದ ನರಸಿಂಹನಾಯಕನು, ಹೊಲ್ಲರಸನು, ಮಹಾಪ್ರಭು ನಾಕಿಗಾವ್ಯಣ್ಡಂ ಸೇರಿ ಮಹಾನುಭಾವರಾದ ಜ್ಞಾನಶಕ್ತಿದೇವರ ಕಾಲನ್ನು ತೊಳೆದು ಕೈದಾರೆಎರೆದು ಶ್ರೀಮೊರಕೇಶ್ವರದೇವರ ಅಂಗಭೋಗಕೆ ಮತ್ತು ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕಂ ಸರ್ವಸಮಸ್ಯೆಭಾದಾಪರಿಹಾರಕ್ಕಾಗಿ ಭೂದಾನ ಕೊಟ್ಟಿದ್ದನ್ನು ತಿಳಿಸುತ್ತದೆ.[೬೨]

ಕಣವಿಯ ಆರನೇ ವಿಕ್ರಮಾದಿತ್ಯನ ಕ್ರಿ.ಶ.೧೧೦೫ರ ಶಾಸನವು ಈಶ್ವರ ದೇವಾಲಯದ ಗೋಡೆಯಲ್ಲಿದ್ದು ಅದು ಕಣಿವೂರ ಅಜ್ಜಗಾವುಂಡನಿಂದ ಮೂಲಸ್ಥಾನದೇವರಿಗೆ "ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮಕಾಲದ ೩೦ನೆಯ ಪಾರ್ಥಿವಸಂವತ್ಸರದಂದು ಭೂದಾನ ಮಾಡಿದ ವಿಚಾರವನ್ನು, ಮೂಲಸ್ಥಾನ ದೇವರತೋಟದ ಪೆರ್ಜುಕ ಮತ್ತು ವಡ್ಡರಾವುಳಗಳ ದಾನ ಮತ್ತು ಕೇಣಿಕಾರ ಮಾರಸಾದಿಗಳಿಂದ ಸುಂಕದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೬೩]

ಎಲಿಶಿರೂರಿನ ಇದೇ ವಿಕ್ರಮನ ಕಾಲದ ಕ್ರಿ.ಶ.೧೧೧೯ರ ಶಾಸನವು ಎಲೆಯ ಶ್ರೀಪುರದ ಕಾಲಿಗಾವುಂಡನುಂ. ತಂಬರ ಶಾವಿಮಗಾವುಣ್ಡನುಂ, ಧವಳದ ಕೇತಗಾವುಣ್ಡನುಂ, ಹುಲುಗಲ ಸಿನ್ದಗಾವುಣ್ಡನುಂ, ಒಟ್ಟು ಎಂಟುಜನ ಗಾವುಂಡರು ಮತ್ತು ಅರವತ್ತೊಕ್ಕಲ ಸಮೂಹ ಮತ್ತು ದೋಣಿಸಾಸ್ಸಿರ್ವರು ಸೇರಿ ಅಲ್ಲದೆ ಇನ್ನು ಕೆಲವು ಜನ ಗಾವುಂಡರು ಶ್ರೀಭೋಗೇಶ್ವರ ದೇವಾಲಯಕ್ಕೆ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೬೪] ಅಲ್ಲದೆ, ಮಹಾಪ್ರಧಾನ ದಣ್ಡನಾಯಕ ಸಾಮಿಪಯಂಗಳುಂ ಮತ್ತು ಮಹಾಪ್ರಧಾನ ಕರಣದ ನಾಗವರ್ಮನಾಯಕರು ಭೋಗೇಶ್ವರದೇವರಿಗೆ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.

ಕಕ್ಕೂರಿನ ಕ್ರಿ.ಶ.೧೧೧೩ರ ಶಾಸನವೊಂದು ಆರನೇ ವಿಕ್ರಮನ ಕಾಲದ್ದೇ ಆಗಿದ್ದು "ಚಾಳುಕ್ಯವಿಕ್ರವ(ರಿ)ರ್ಷದ ೩[೮]ನೆಯ ವಿಜಯಸಂವತ್ಸರದ ಪೌಷ್ಯದ ಪೌರ್ಣ್ನಮಾಸ್ಯೆಉ ಉತ್ತರಾಯಣಸಂಕ್ರಾಂತಿ ವ್ಯತೀಪಾತದಂದು ದೇವರ ಅಂಗಭೋಗಕ್ಕಂ ಖಂಡಸ್ಫುಟಿತಜೀರ್ಣ್ಣೋದ್ಧಾರಕ್ಕಂ[ಸರ್ವ್ವಬಾ]ಧಾಪರಿಹಾರಮಾಗಿ ಬಿಟ್ಟ ಭೂಮಿ". ಎಂದು ಮಾಸವಾಡಿ ೧೪೦ನ್ನು ಪೆರ್ಮ್ಮಾಡಿಯರಸರು ಸುಖದಿಂದ ರಾಜ್ಯವಾಳುತ್ತಿದ್ದಾಗ ಅದರ ಒಳಗೆ ಬರುವ ಕಕ್ಕೂರ ಪೆರ್ಗ್ಗಡೆ ಜೋಗಿಸೆಟ್ಟಿ, ಮಲ್ಲಿಕಾರ್ಜುನ ದೇವರ ದೇವಾಲಯವನ್ನು ಮಾಡಿಸಿ ಆ ದೇವರಿಗೆ ತಕ್ಕ ಭೂಮಿ ವೇಕುಁವೆನಲು ಕಾಳಿಗಾವುಂಡ ಪೆಮ್ಮಾಡಿಯರಸರ್ಗ್ಗೆ ಬಿನ್ನವಿಸಿಕೊಂಡು ಆ ದೇವರ ಅಂಗಭೋಗಕ್ಕೆ ಜೀರ್ಣೋದ್ಧಾರಕ್ಕೆ ಮತ್ತು ಸರ್ವಬಾಧಾಪರಿಹಾರಮಾಗಿ ಬಿಟ್ಟ ಭೂದಾನದ ವಿಚಾರವನ್ನು ತಿಳಿಸುತ್ತದೆ.[೬೫]

ಗದಗಿನ ಕ್ರಿ.ಶ.೧೧೧೬ರ ಶಾಸನವು ಮಣಿಯರ ಮಹಾದೇವಂಯ್ಯ ನಾಯಕಂ ಶ್ರೀಮನ್ಬಟ್ಟಕೆರೆಯಿನ್ಸೂರ್ವ್ವರ್ಗ್ಗಂ ಪಾದಪೂಜಿಯಂ ಕೊಟ್ಟು ಮತ್ತು ಶ್ರೀಮಣಿಯರಮಲ್ಲಿಕಾರ್ಜುನ ದೇವರರಂಗಭೋಗಾಸ್ಪದಕ್ಕೆ ಬಿಟ್ಟ ಭೂದಾನದ ವಿಚಾರವನ್ನು ಹೇಳುತ್ತದೆ.[೬೬] ಇದು ಚಾಳುಕ್ಯ ವಿಕ್ರಮ ವರ್ಷದ ೪೧ನೇ ದುರ್ಮ್ಮುಖಿ ಸಂವತ್ಸರದ ಪುಷ್ಯ ಬಹುಳ ೩ಆಧಿತ್ಯವಾರಮುತ್ತರಾಯಣಸಂಕ್ರಮಣ ವ್ಯತಿಪಾತದಂದು ನೀಡಲಾಗಿದೆ.

ಎಲೆಶಿರೂರಿನ ಕ್ರಿ.ಶ.೧೧೧೮ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು ಮಹಾಪ್ರಧಾನ ಸೇನಾಧಿಪತಿ ಸಾಯಿಪಯ್ಯಂಗಳ ಮಹಾಪ್ರಧಾನ ದಂಡನಾಯಕ ನಾಗವರ್ಮ್ಮಯ್ಯನಾಯಕರು ಬೆಳ್ವಲ-೩೦೦, ಪುಲಿಗೆರೆ-೩೦೦ ಬಸನಾಸಿ ಪನ್ನಿಚ್ಚಾಸಿರಮುಮಂ ಆಳುತ್ತಿರುವಾಗ ಎಲೆಯಸಿರಿವುರದ ಕಡಬರ ಕಾರಿಗಾವುಣ್ಡನು, ಕಂಬರ ಸಾಯಿಮಗಾವುಣ್ಡನ, ಸೋಮಗಾವುಣ್ಡ, ಕೇತಗಾವುಣ್ಡ, ಹುಲಗಲ ಸಿನ್ದಗಾವುಣ್ಡ, ಅಲ್ಲದೆ ಎಂಟು ಗಾವುಣ್ಡರು ಅರುವತ್ತೊಕ್ಕಲು ಸೇರಿ ಶ್ರೀಬಾಗೇಶ್ವರ ದೇವರಿಗೆ ಬಿಟ್ಟ ಭೂದಾನವನ್ನು ಹೇಳುತ್ತದೆ.[೬೭]

ಶಿರೋಳದ ಕ್ರಿ.ಶ.೧೧೨೧ರ ಶಾಸನವು ಮೂಲಸ್ಥಾನದೇವರಿಗೆ ಹಲವಾರು ಜನ ಗಾವುಣ್ಡರು ಮತ್ತು ದೋಣಿಸಾಸಿರ್ವ್ವರು ಸೇರಿ ಬಿಟ್ಟ ಭೂದಾನವನ್ನು ತಿಳಿಸುತ್ತದೆ. ಅಲ್ಲದೆ ಭತ್ತ, ಎಳ್ಳು, ಉಪ್ಪು, ಗೋದುವೆ, ಕಡಲೆಗಳನ್ನು ನೀಡಿದ ವಿಚಾರವನ್ನು ತಿಳಿಸುತ್ತದೆ.[೬೮] ಇದನ್ನು ಚಾಳುಕ್ಯವಿಕ್ರಮವರ್ಷದ ೪೬ನೆಯ ಪ್ಲವಸಂಪತ್ಸರದ ಜೇಷ್ಠ ಸುದ್ಧ ಅಷ್ಟಮಿಬ್ರಿಹವಾರದಂದು ಹಾಕಿಸಲಾಗಿದೆ.

ಕ್ರಿ.ಶ.೧೧೨೨ರ ಲಕ್ಷ್ಮೇಶ್ವರದ ಶಾಸನವು ಬಹಳ ತೃಟಿತವಾಗಿದ್ದು, ಅದು ದಂಡನಾಯಕ ನಾಗವರ್ಮ್ಮಯ್ಯನು ಚಾಳುಕ್ಯವಿಕ್ರಮಕಾಲದ ೪೭ನೆಯ ಪ್ಲವಸಂವತ್ಸರದ ಫಾಲ್ಗುಣದಮವಾಸ್ಯೆ ಆದಿವಾರ

ಸಂಕ್ರಮಣವ್ಯತಿಪಾತ ಸೂರ್ಯಗ್ರಹಣದಂದು ಪುಲಿಗೆರೆಯ ನೂರಿಪ್ಪತ್ತು ಮಹಾಜನರಿಂದ ಭೂಮಿಯನ್ನು ಕೊಂಡು ಸೋಮೇಶ್ವರ ದೇವಾಲಯಕ್ಕೆ ದಾನ ಮಾಡಿದ ಉಲ್ಲೇಖವಿದೆ.[೧೯]

ಮುಳಗುಂದವ ಕ್ರಿ.ಶ.೧೧೨೪ರ ಶಾಸನವು "ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮಕಾಲದ ೪೯ನೆಯ ಕ್ರೋಧಿ ಸಂವತ್ಸರದ ಭಾದ್ರಪದಶುದ್ಧ ಪಂಚಮಿ ಸೋಮವಾರ ಸಂಕ್ರಾಂತಿ ಬ್ಯತೀಪಾತದಂದು ಹಲವಾರು ಜನ ಶೆಟ್ಟರು ಸೇರಿಕೊಂಡು ಶ್ರೀವಿದುರೇಶ್ವರದೇವರ ನಂದಾದೀವಿಗೆಗೆ ಮತ್ತು ಶ್ರೀವಿರೇಶ್ವರದೇವರ ನೈವೇದ್ಯಕ್ಕೆ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೨೦]

ಇದೇ ಕ್ರಿ.ಶ.೧೧೨೪ರ ಕಾಲಕ್ಕೆ ಸೇರಿದ ಪೇಟಾಲೂರಿನ ಶಾಸನವು ಅಗ್ರಹಾರ ಮಾಳದೂರನ್ನಾಳುವ ಮಹಾಮಾತ್ಯ ಸುರಿಗೆಯ ಪೆರ್ಮಾಡಿ ಅರಸನಿಂದ ಅಲ್ಲಿಯ ದೇವತೆಗೆ ಅಂಗಭೋಗ ನೈವೇದ್ಯಕ್ಕೆ ಬಿಟ್ಟ ಭೂದಾನದ ವಿಷಯವನ್ನು ಹೇಳುತ್ತದೆ.[೨೧]

ಕ್ರಿ.ಶ.೧೧೨೪ರ ಡಂಬಳದ ಶಾಸನವು ಮಹಾಮಂಡಳೇಶ್ವರ ಪೆರ್ಮ್ಮಭೂಪಾಲಕನು ಅಜ್ಜಮೇಶ್ವರ ದೇವಾಲಯಕ್ಕೆ ಶಿವಭವನವನ್ನು ಮಾಡಿಸಿ ದೇವರಿಗೆ ಬಿಟ್ಟ ಭೂದಾನದ ವಿಚಾರವನ್ನು ಹೇಳುತ್ತದೆ.[೨೨]

ಚಿಕ್ಕವಡ್ಡಟ್ಟಿಯ ಕ್ರಿ.ಶ.೧೧೨೭ರ ಕಲ್ಮೇಶ್ವರ ಗುಡಿಯಲ್ಲಿರುವ ಶಾಸನವು ಸುರಕ-೧೨ ಅವಗವಾಡಿ-೧೨ ಆಳುವ ಮಹಾಮಂಡಳೇಶ್ವರ ಕಕ್ಕರಸನ ರಾಜಧಾನಿ ಈ ವಡ್ಡವಟ್ಟಿಯಲ್ಲಿ ಶ್ರೀಕಲಿದೇವಸ್ವಾಮಿಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟ ಭೂದಾನದ ವಿಚಾರದ ಬಗ್ಗೆ ಹೇಳುತ್ತದೆ.[೨೩] ಅಲ್ಲದೆ ಈ ಊರನ್ನು ಬಹಳವಾಗಿ ವರ್ಣಿಸಲಾಗಿದೆ.

ಗದುಗಿನ ಶಾಸನವೊಂದು ೬ನೇ ವಿಕ್ರಮನ ಕಾಲಕ್ಕೆ ಸೇರಿದ್ದು, ತೃಟಿತವಾಗಿದ್ದು ಕಾಲವನ್ನು ಹೇಳುವುದು ಕಷ್ಟವಾಗಿರುತ್ತದೆ. ಇದು ಮಹಾಮಂಡಳೇಶ್ವರ ಇಂದ್ರಕೇಶಿಯಿಂದ ತ್ರಿಕೂಟೇಶ್ವರನಿಗೆ ನೀಡಿದ ಯಾವುದೋ ದಾನವನ್ನು ಹೇಳುತ್ತದೆ.[೨೪]

ಕ್ರಿ.ಶ.೧೧೨೮ರ ಲಕ್ಷ್ಮೇಶ್ವರದ ಶಾಸನವೊಂದು ೩ನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು, ಅದು ಮಹಾಮಂಡಳೇಶ್ವರ ಜಯಕೇಶಿ ದೇವನ ರಾಜಧಾನಿಪಟ್ಟಣಂ ಪುಲಗೆರಿಯ ಶ್ರೀ ಸ್ವಯಂಭು ದಕ್ಷಿಣ ಸೋಮನಾಥದೇವರ ಘಳಿಗೆಗೆ ಬಿಟ್ಟ ಭೂದಾನವನ್ನು ಹೇಳುತ್ತದೆ.[೨೫]

ಗದಗಿನ ಕ್ರಿ.ಶ.೧೧೩೭ರ ಶಾಸನವು ಕಾಳಿಮಯಗೇರಿಯ ಹೃಷೀಕೇಶ ದೇವರಂಗಭೋಗಕ್ಕೆಂದು, ನನ್ದಾದೀವಿಗೆಗೆಂದು ಮಾಹಣ್ಣನ ಮದವಳಿಗೆ ಮಾಳಿಯಕ್ಕನು ಮಾಡಿದ ಭೂದಾನ ವಿಷಯವನ್ನು ತಿಳಿಸುತ್ತದೆ.[೨೬]

ಕ್ರಿ.ಶ.೧೧೪೧ರ ಕಣವಿಯ ಶಾಸನವು ೨ನೇ ಜಗದೇಕಮಲ್ಲನ ಕಾಲಕ್ಕೆ ಸೇರಿದ್ದು, ಅವನ ಮಹಾಪ್ರಧಾನ ಕರಿತುರಗಿ ಪಟ್ಟಸಾಹಣಿ ಸೇನಾಧಿಪತಿ, ದಣ್ಡನಾಯಕ, ಮಹಾದೇವರಸರು ಆಳುತ್ತಿರೆ ಕೋಳಿವಾಡದ ಗೋವಿಂದಮಯ್ಯನು ಶ್ರೀಕಣೆಯ ಮೂಲಸ್ಥಾನದೇವರ ತೊಂಟವನ್ನು ಶ್ರೀಮುರಕೇಶ್ವರ

ದೇವರಾಚಾರ್ಯ್ಯರ್ಜ್ಞಾನಶಕ್ತಪಂಡಿತದೇವರ ಕಾಲಂಕರ್ಚ್ಚಿ ಧಾರಾಪೂರ್ವಕಂ ಮಾಡಿ ಕಣೆಯ ಮೂಲಸ್ಥಾನ ದೇವರಿಗೆ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೭೭]

ಚಿಕ್ಕವಡ್ಡಟ್ಟಿಯ ಕ್ರಿ.ಶ.೧೧೪೫ರ ಶಾಸನವು "ಶ್ರೀಪ್ರತಾಪಚಕ್ರವರ್ತಿ ಜಕದೇಕಮಲ್ಲ ಕ್ರೋಧನ ಸಂವತ್ಸರದ ವೈಸ(ಕಾ)ಲ ಸುದ್ಧ ೧[೫]ನೆ ಯಾದಿವಾರದಂದು ಶ್ರೀ ಮಹಾಮಂಡಳೇಸ್ವರ ಹೊಲ್ಲರಸರು ಸಮಸ್ತ ಪರಿಗ್ರಹಂ ಧರ್ಮ್ಮ ಪ್ರ. . . ಕಲಿದೇವರ್ಗ್ಗನ್ನ (ಸ್ನಾ)ನ ಭೋಗ ನಿವೇದ್ಯಕ್ಕೆ, ಹಿರಿಯ ಕೆಜಿಯ ಕೋಡಿಯಿಂ ತಂಕಲು ತಕ್ಲಿಲು ಮತ್ತರು ಒಂದು ೧॥" ಎಂದು ಬಿಟ್ಟ ಭೂದಾನದ ಬಗ್ಗೆ ಹೇಳುತ್ತದೆ.[೭೮]

ಕ್ರಿ.ಶ.೧೧೪೭ರ ಶಾಸನವು ಬೂದಿಹಾಳದಲ್ಲಿದ್ದು, ಬಹಳ ತೃಟಿತವಾಗಿದ್ದು ಕುಪ್ಪದೇವರಸನು ಮಾಸವಾಡಿ ೧೪೦ನ್ನು ಆಳುತ್ತಿದ್ದಾಗ ಬಮ್ಮಿಸೆಟ್ಟಿಯು ಕಲಿದೇವಸ್ವಾಮಿ ದೇವಾಲಯಕ್ಕೆ ದೇವರಂಗಭೋಗಕ್ಕೆ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೭೯]

ಲಕ್ಷ್ಮೇಶ್ವರದ ಕ್ರಿ.ಶ.೧೧೪೭ರ ಶಾಸನವು ದಂಡನಾಯಕರಾದ ಮೇಚರಸರು ಸೋಮನಾಥ ದೇವಾಲಯಕ್ಕೆ ದೇವರಂಗಭೋಗ ನೈವೇದ್ಯಕ್ಕಾಗಿ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೮೦]

ಕ್ರಿ.ಶ.೧೧೫೫ರ ಹೊಸೂರಿನ ಶಾಸನವು ಮೂರನೇ ತೈಲನ ಕಾಲಕ್ಕೆ ಸೇರಿದ್ದು, ಹೊಸವೂರ ಮಹಾಪ್ರಭು ವಲ್ಲಗಾವುಣ್ಡನು ಮಾರಕೇಶ್ವರ ದೇವರಾಚಾರ್ಯ್ಯರಪ್ಪ, ಜ್ಞಾನಶಕ್ತಿದೇವರ ಕಾಲನ್ನು ತೊಳೆದು ಭೂದಾವನ್ನು ಮಾಡಿದ ವಿಷಯವನ್ನು ತಿಳಿಸುತ್ತದೆ.[೮೧]

ಕ್ರಿ.ಶ.೧೧೬೭ರ ಬಿಜ್ಜಳನ ಕಾಲದ ಎಲೆಶಿರೂರಿನ ಶಾಸನವು ಭೋಗೇಶ್ವರದೇವರ ಅಂಗಭೋಗ ನೈವೇದ್ಯಕ್ಕೆ ಸೊರಟೂರ ಊರೊಡೆಯ ದಾಸಿರಾಜಯ್ಯಗಳು ಕೇದಾರಶಕ್ತಿಪಂಡಿತರಿಗೆ ಧಾರಾಪೂರ್ವಕವಾಗಿ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೮೨]

ಹರ್ತಿಯ ಕ್ರಿ.ಶ.೧೧೭೩ರ ರಾಯಮುರಾರಿ ಸೋವಿದೇವನ ಕಾಲದ ಶಾಸನವು ಹರ್ತಿಯ ಪನ್ನಿರ್ವರುಗಾವುಂಡ ಗೋವಿದೇಶ್ವರ ದೇವಾಲಯಕ್ಕೆ (ಅರವತ್ತೊಕ್ಕಲು ಉಗುರು ಮೂನ್ನೂರ್ವ್ವರು ಸಾಸಿರ್ವ್ವರು) ಬಿಟ್ಟ ಭೂದಾನ ಹೇಳುತ್ತದೆ.[೮೩]

ಕ್ರಿ.ಶ.೧೧೭೩ರ ಇದೇ ರಾಯಮುರಾರಿ ಸೋವಿದೇವನ ಕಾಲದ ಶಾಸನವು ಕಣವಿ ಗ್ರಾಮದಲ್ಲಿದ್ದು ಕಣಿಯಹಳ್ಳಿಗೌಂಡಿ ಅರವತ್ತೊಕ್ಕಲು ಮತ್ತು ಚೌಉಡನಾಯಕ ಮತ್ತು ಬಲದೇವನಾಯಕರು ಕಣಿಯ ಮೂಲಸ್ಥಾನದೇವರಿಗೆ ನೀಡಿದ ಭೂದಾನವನ್ನು ಹೇಳುತ್ತದೆ,[೮೪]

ಕ್ರಿ.ಶ.೧೧೭೮ರ ಸಂಕಮನ ಕಾಲದ ಶಾಸನವು ಮುಳಗುಂದದಲ್ಲಿದ್ದು, ಇದು ಅಲ್ಲಿಯ ಮಹಾಜನರು ವಿದಿರೇಶ್ವರದೇವರ ನೈವೇದ್ಯಕ್ಕಾಗಿ ಕೊಟ್ಟ ಭೂದಾನವನ್ನು ತಿಳಿಸುತ್ತದೆ.[೮೫]

ಕ್ರಿ.ಶ.೧೧೮೪ರ ೪ನೇ ಸೋಮೇಶ್ವರನ ಕಾಲದ ಶಾಸನವು ಡಂಬಳದಲ್ಲಿದ್ದು ಮಹಾಪ್ರದಾನ, ಸೇನಾಧಿಪತಿ ತೇಜಮಯ್ಯ ದಂಡನಾಯಕರು ಅವರ ಅಧಿಕಾರಿ ಬಾಕಣದಂಡನಾಯಕರು,

ರೇವರಸುಗಳು ಧರ್ಮವೊಳಲ ಶ್ರೀಮೈಳದೇಸ್ವರದೇವರ ತೋಟಗಳ ಆದಾಯಕ್ಕೆ ಸುಂಕ ವಿನಾಯ್ತಿಯಾಗಿ ದಾನ ಬಿಟ್ಟ ವಿಚಾರವನ್ನು ಹೇಳುತ್ತದೆ.[೮೬] ಅಲ್ಲದೆ ಭೂದಾನದ ವಿಷಯವನ್ನು ಹೇಳುತ್ತದೆ.

ಗದಗಿನ ಕ್ರಿ.ಶ.೧೧೮೪ರ ಸಂಕಮನ ಕಾಲದ ಶಾಸನವು ಶ್ರೀದಕ್ಷಿಣವಾರಣಾಸಿ ಶ್ರೀ ಸ್ವಯಂಭುಮಾಧವೇಶ್ವರದೇವರ ಮಾಟಕೂಟ, ಪ್ರಾಸಾದಾಕ್ಕಂ, ನಿತ್ಯನೈವೇದ್ಯ, ನನ್ದಾದೀವಿಗೆಗಾಗಿ ಯೋಗಿಸಹಜಾನಂದದೇವನು ಭೂದಾನ ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೮೭]

ಕ್ರಿ.ಶ.೧೧೮೫ರ ನಾಲ್ಕನೇ ಸೋಮೇಶ್ವರನ ಕಾಲದ ಶಾಸನವು ಚಿಂಚಲಿಯಲಿದ್ದು ಇದು ಗುಂಡಿಲಿಚೌಕಿಯಕ್ಕ ಸ್ವಯಂಭುತೀರ್ತ್ತದ ಮಲ್ಲಿಕಾರ್ಜುನದೇವರ್ಗ್ಗೆ ಚೈತ್ರಪವಿತ್ರಕ್ಕೆ ನಿತ್ಯಸ್ತುತಿನೈವೇದ್ಯಕ್ಕಾಗಿ ಬಿಟ್ಟ ಭೂದಾನವನ್ನು ಹೇಳುತ್ತದೆ.[೮೮]

ಎರಡನೇ ಜಗದೇಕಮಲ್ಲನ ಕಾಲಕ್ಕೆ ಸೇರಿದ ಮುಳಗುಂದದ ಶಾಸನವು ಮುಳಗುಂದದ ಭೀಮೇಶ್ವರ ದೇವರ ಸ್ನಾನ, ಪೂಜೆ, ನೈವೇದ್ಯ, ಯತಿ ಭೋಜನಾದಿಗಳ ಆಚಂದ್ರಾರ್ಕತಾರಂ ನಡೆಯಲು ಬೊಪ್ಪದೇವರಸರು ಬಿಟ್ಟ ಭೂದಾನ ವಿಷಯವನ್ನು ತಿಳಿಸುತ್ತದೆ,[೮೯] ಅಲ್ಲದೆ ನಾಯಕನ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

ಕ್ರಿ.ಶ.೧೧೮೬ರ ಹೊಸೂರಿನ ಶಾಸನವು ಚಾಳುಕ್ಯ ಚಕ್ರವರ್ತಿ ಸೋಮೇಶ್ವರದೇವರ ವರ್ಷದ ೨೩ನೇ ಪ್ಲವಂಗ ಸಂವತ್ಸರದಾಷಾಢ ಶುದ್ಧ ೫ರ ಸೋಮವಾರದಂದು ಬಡಗಿ ಕಲ್ಲೋಜ ಮೊರಕೇಶ್ವರ ದೇವರಿಗೆ ಬಿಟ್ಟ ತೋಟದ ದಾನವನ್ನು ತಿಳಿಸುತ್ತದೆ.[೯೦]

ಡಂಬಳದ ಕ್ರಿ.ಶ.೧೨ನೇ ಶತಮಾನದ ಶಾಸನವೊಂದು ಶ್ರೀಮಾಧವೀಶ್ವರ ದೇವರಿಗೆ ವೊಲದ ಗಡಿಂಬ ಬಿಟ್ಟದಾನದ ಬಗ್ಗೆ ತಿಳಿಸುತ್ತದೆ.[೯೧]

ಮೇವುಂಡಿಯ ಕ್ರಿ.ಶ.೧೨ನೇ ಶತಮಾನದ ಶಾಸನವು ಕುಪ್ಪೆದೇವರಸನಿಂದ ಕುಪ್ಪೇಶ್ವರ ದೇವಾಲಯಕ್ಕೆ ಬಿಟ್ಟ ಭೂದಾನವನ್ನು ಹೇಳುತ್ತದೆ.[೯೨]

ಕ್ರಿ.ಶ.೧೨ನೇ ಶತಮಾನದ ಹೊಸೂರಿನ ಶಾಸನವು ವೀರಚಾವುಣ್ಡರಸರು ಆಳುತ್ತಿದ್ದಾಗ ಬೀಚರಸಂ ಆತನ ಪೆರ್ಗ್ಗಡೆಗಳು ಮೂಲಸ್ತಾನದೇವರ ಅಂಗಬೋಗಕ್ಕೆಂದು ಭೂದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೯೩]

ಕ್ರಿ.ಶ.೧೨೦೭ರ ಹೊಸೂರಿನ ಹೊಯ್ಸಳದೊರೆ ಎರಡನೇ ವೀರಬಲ್ಲಾಳನ ಕಾಲದ ಶಾಸನವು ಚಕ್ರವರ್ತಿಯ ಎರಡನೇ ಮಗ ಚಿಕ್ಕನರಸಿಂಹಯ್ಯಂಗಳು ಮುಳಗುಂದ ೧೨ನ್ನು ಆಳುವಾಗ ಹೊಸವೂರ ಮಹಾಬಳಗಾವುಂಡ ಮುಖ್ಯವಾಗಿ ಯೇಳನೂರ್ವ್ವರು ಶ್ರೀಮೋರಕೇಶ್ವರ ದೇವರಿಗೆ ಕೊಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ.[೯೪]

ಕ್ರಿ.ಶ.೧೨೦೭ರ ಮುಳುಗುಂದ ಶಾಸನವು ಹೊಯ್ಸಳ ವೀರಬಲ್ಲಾಳನ ಕಾಲಕ್ಕೆ ಸೇರಿದ್ದು ತೆಲ್ಲಿಗೇಶ್ವರ ದೇವರ ಅಂಗಭೋಗ, ನೈವೇದ್ಯಕ್ಕೆ ನಗರ ಮಹಾಜನರು ನೀಡಿದ ಭೂದಾನ ವಿಷಯವನ್ನು ಹೇಳುತ್ತದೆ.[೯೫]

ಕ್ರಿ.ಶ.೧೨೧೧ರ ನಾಗಾವಿ ಶಾಸನವು ಮಹಾಬಲೇಶ್ವರ ದೇವರಿಗೆ ಧರ್ಮ್ಮರಾಸಿಪಂಡಿತನು ನೀಡಿದ ಭೂದಾನವನ್ನು ಹೇಳುತ್ತದೆ.[೯೬]

ಕ್ರಿ.ಶ.೧೨೨೭ರ ಯಾದವ ಸಿಂಘಣನ ಶಾಸನವು ಲಕ್ಷ್ಮೇಶ್ವರದಲ್ಲಿದ್ದು ತೃಟಿತವಾಗಿದ್ದು ಮೂರುಜಾವಿದೇವನಿಂದ ಕೇದಾರದೇವ ಮತ್ತು ಚಿಕ್ಕೇಶ್ವರ ದೇವಾಲಯಗಳಿಗೆ ನೀಡಿದ ಭೂದಾನ ತಿಳಿಸುತ್ತದೆ.[೯೭]

ಕ್ರಿ.ಶ.೧೨೪೪ರ ನಾಗಾವಿಯ ಸಿಂಘಣನ ಶಾಸನವು ಶ್ರೀಕೊಂಡಿಯ ಮಹಾಬಳದೇವರ್ಗ್ಗೆ ೧೦೪ ಮಹಾಜನರು ಬಿಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ.[೯೮]

ನೀಲಗುಂದದ ಕ್ರಿ.ಶ.೧೫೨೪ರ ಶಾಸನವೊಂದು ಬಾಗಿಲಮಲ್ಲಪ್ಪನಾಯಕರ ಮಕ್ಕಳು ವೆಂಗಳಪ್ಪನಾಯಕರೂ ಮುಳಗುಂದದ ಪುರದಸಿದ್ದೇಶ್ವರದೇವರಿಗೆ ಕೊಟ್ಟ ಭೂದಾನವನ್ನು ತಿಳಿಸುತ್ತದೆ.[೯೯]

ನಾಗಾವಿಯ ಕ್ರಿ.ಶ.೧೨೫೫ರ ಕನ್ನರನ ಶಾಸನವು ಮಹಾಬಳೇಶ್ವರದೇವರಿಗೆ ಉಪಹಾರ, ಹಾಲು, ಮಂಡೆಗೆಂದು ಲಾಳಪೌಸೆಟನಾಯಕರು ಭೂಮಿಯನ್ನು ಕ್ರಯಕ್ಕೆ ಕೊಂಡು ಭೂದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧೦೦]

ಕ್ರಿ.ಶ.೧೨೮೯ರ ಅಸುಂಡಿಯ ಶಾಸನವು ಯಾದವದೊರೆ ರಾಮಚಂದ್ರನ ಕಾಲಕ್ಕೆ ಸೇರಿದ್ದು ಊರದೇವತೆಗೆ ನೀಡಿದ ಭೂದಾನ ವಿಷಯದ ಬಗ್ಗೆ ಹೇಳುತ್ತದೆ. ಯಾರು ಎಂದು ತಿಳಿಯಲು ಇದು ತೃಟಿತವಾಗಿದೆ.[೧೦೧]

ಕ್ರಿ.ಶ.೧೨೯೧ರ ಯಾದವದೊರೆ ರಾಮಚಂದ್ರನ ಕಾಲದ ಶಿರೂರ ಶಾಸನವು ಯಾರೋ ಒಬ್ಬ ನಾಯಕ ಸ್ವಯಂಭೂಲಿಂಗ ದೇವಾಲಯಕ್ಕೆ ನೀಡಿದ ಭೂದಾನದ ಬಗ್ಗೆ ತಿಳಿಸುತ್ತದೆ.[೧೦೨]

ಕ್ರಿ.ಶ.೧೫ನೇ ಶತಮಾನದ ಶಾಸನವೊಂದು ಮುಳಗುಂದದಲ್ಲಿದ್ದು ಅದು ಸಿದ್ದಯ್ಯದೇವರ ಅಂಗರಂಗವೈಭೋಗಕ್ಕೆ ಸಿದ್ಧರಾಮಯ್ಯ ಒಡೆಯರಿಗೆ ಕೊಟ್ಟ ಭೂದಾನವನ್ನು ತಿಳಿಸುತ್ತದೆ.[೧೦೩]

**೨.೩.೪. ಗ್ರಾಮ ದಾನ**

ನಮ್ಮ ಜನರು ಬರಿ ಭೂದಾನ ಅಲ್ಲದೆ ಊರುಗಳನ್ನು ಕಟ್ಟಿಸಿ ಅವುಗಳನ್ನು ದಾನವಾಗಿ ಕೊಟ್ಟಿರುವುದು ನಮಗೆ ಅನೇಕ ಶಾಸನಗಳಿಂದ ತಿಳಿಯುತ್ತದೆ. ಅಂತಹ ಹಲವಾರು ಶಾಸನಗಳು ಗದಗ ದಕ್ಷಿಣ ಭಾಗದಲ್ಲಿ ಸಿಗುತ್ತವೆ. ಆ ಶಾಸನಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ.

ಕ್ರಿ.ಶ.೧೧೩೮ರ ಮೂರನೇ ಸೋಮೇಶ್ವರನ ಕಾಲದ ಲಕ್ಷ್ಮೇಶ್ವರದ ಶಾಸನವು "ಸ್ವಸ್ತಿ ಶ್ರೀಮಚ್ಚಾಳುಕ್ಯಸರ್ವ[ಜ್ಞ]ಭೂಲೋಕಮಲ್ಲವರ್ಷದ ಹದಿಮೂಱನೆಯ ಕಾಲಯುಕ್ತಸಂವತ್ಸರದ ಮಾರ್ಗ್ಗಶಿರ ಸುದ್ಧ ಪುಣ್ಣಮಿ ಸೋಮವಾರ ಸೋಮಗ್ರಹಣ ಬ್ಯತಿಪಾತ ಸಂಕ್ರಮಣದಂದು ಶ್ರೀಸ್ವಯಂಭು ದಕ್ಷಿಣಸೋಮನಾಥದೇವರಂಗಭೋಗಕ್ಕೆ ದೇವಭೋಗಂ ನಿಟ್ಟೂರಱೊರವಗೆನಡೆವಮನ್ನೆಯದ ಹೊನ್ನುಮಂ" ಪುರಿಕರನಗರದ ಮಹಾಮಂಡೇಶ್ವರ ಜಯಕೇಶಿಯಿಂದ ಶ್ರೀಸ್ವಯಂಭೂದಕ್ಷಿಣ ಸೋಮನಾಥ ದೇವರಂಗಭೋಗಕ್ಕೆ ದೇವಭೋಗಕ್ಕೆಂದು ನಿಟ್ಟೂರು ಗ್ರಾಮವನ್ನು ದಾನವಾಗಿ ಕೊಟ್ಟ ವಿಚಾರವನ್ನು ತಿಳಿಸುತ್ತದೆ.[೧೦೪]

ಕ್ರಿ.ಶ.೧೧೯೧ರ ಗದಗಿನ ಯಾದವದೊರೆ ಬಿಲ್ಲಮನ ಕಾಲದ ಶಾಸನವು "ಸಕನೃಪಕಾಲಾತೀತ ಸಂವತ್ಸರ ಸತೇಶುತ್ರಯೋದಶ ಆಧಿಕೇಶವ ಏಕದಾಸಸುವರ್ತ್ತಮಾನ ವಿರದಿಕ್ರತಸಂವತ್ಸರ ಆಮಂತರಗತ ಜೇಷ್ಠ ಅಮವಾಸ್ಯೆಂ ಆದಿತ್ಯವಾರೆ ಸೂರ್ಯಗ್ರಹಣೆ ಶ್ರೀಮತ್‌ಕೃತುಕ ಸ್ವಯಂಭುತ್ರಿಕೂಟೇಶ್ವರ ದೇವಾಸ್ಥಾನಾಚಾರ್ಯರಸ ಸೋಮೇಶ್ವರದೇವರ ಶಿಶ್ಯ ವಿದ್ಯಾಭರಣದೇವ ಶಿಶ್ಯಸ್ಯ ಸತ್ಯವಾಕ್ಯ ಅಪಾರನಾಮ ದೇವಸ್ಯ ಶ್ರೀಮತ್‌ಪರಮತಾಪಸಾಚಾರ್ಯ ಸಿದ್ಧಮಂತಿಚಾಮಂದ್ರಭೂಷಣಪದ್ಮಾದಿತದೇವಸ್ಯ ಪಾದಪ್ರಕ್ಷಾಲನಮ್ಮಂ ಕ್ರಿತ್ವ ಬೆಲುವಲತ್ರಿಷ್ಠ ಆಮ್ಮಂತರಗತ ಹಿರಿಯಹಂದಿಗೋಳ ನಾಮ ಗ್ರಾಮಃ" ಎಂದು ಹೇರೂರಿನಲ್ಲಿ ಬೀಡುಬಿಟ್ಟಾಗ ಅರಸನು ತ್ರಿಕೂಟೇಶ್ವರ ದೇವರಿಗೆ ಬೆಳ್ವಲ-೩೦೦ರಲ್ಲಿಯ ಹಿರಿಯಹಂದಿಗೋಳ ಗ್ರಾಮವನ್ನು ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೧೦೫]

ಹೊಯ್ಸಳ ದೊರೆ ೨ನೇವೀರಬಲ್ಲಾಳನ ಕ್ರಿ.ಶ.೧೧೯೨ರ ಶಾಸನವು ಗದುಗಿನ ತ್ರಿಕೂಟೇಶ್ವರ ದೇವಾಲಯದಲ್ಲಿದ್ದು ವೀರಬಲ್ಲಾಳದೇವನಿಂದ ಸ್ವಯಂಭೂತ್ರಿಕೋಟೇಶ್ವರ ದೇವಾಲಯಕ್ಕೆ "ಸಕನೃಪಕಾಲಾತೀತ ಸಂವತ್ಸರ ಸತೇಶುತ್ರಯೋದಶ ಆಧಿಕೇಶವ ಏಕಾದಶಿಯಂದು ಹೊಂಬಳಲು ಗ್ರಾಮವನ್ನು ದಾನವಾಗಿ ನೀಡಿದ ವಿಚಾರವನ್ನು ತಿಳಿಸುತ್ತದೆ.[೧೦೬] ಅಲ್ಲದೆ ವಾಮಶಕ್ತಿಪಂಡಿತದೇವರ ವಂಶವೃಕ್ಷವನ್ನು ತಿಳಿಸುತ್ತದೆ.



ಕ್ರಿ.ಶ.೧೫೭೬ರ ಲಕ್ಷ್ಮೇಶ್ವರದಲ್ಲಿ ಅಲಿಧವಲ ಪಾತಶಾಹಿವಡೆಯರು ಎಂಬುವನ ಕಾಲದಲ್ಲಿ "ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲಿವಾಹನಶಕ ೧೪೯೭ನೆಯ ಧಾತ[ತು] ಸಂವತ್ಸರದ ಮಾಘ ಬ ೩೦ ಸೋಮವಾರದಲು ಶ್ರೀ ಅಲಿಧವಲ ಪಾತಶಾಹಿವಡೆಯರು . . . ಲಕ್ಷ್ಮೇಶ್ವರ ಗ್ರಾಮದ ನೈರುತ್ಯದ ದಿಕ್ಕಿನಲ್ಲಿಹ ಮಲ್ಲಿಕಾರ್ಜುನದೇವರ ಅಮೃತಪಡಿಗೆ, ನಂದಾದೀಪ್ತಿಗೆ ಹುಲಿಗೆರೆಯನಾಡ ಲಕ್ಷ್ಮಣೇಶ್ವರದ ಸೀಮೆವೊಳಗಣ ಗೌಡಗೆರೆ ಗ್ರಾಮವನ್ನು ದಾನವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ.[೧೦೭]

**೨.೩.೫.ವ್ಯಕ್ತಿದಾನ**

ನಮ್ಮ ಜನರು ದೇವಾಲಯಗಳಿಗೆ ದಾನ ನೀಡಿದಂತೆ ಅಲ್ಲಿಯ ಅರ್ಚಕರು ಪಂಡಿತರಿಗೂ ದಾನ ನೀಡಿದ್ದಾರೆ. ಅಂತಹ ವಿಚಾರವನ್ನು ಹೇಳುವ ಹಲವು ಶಾಸನಗಳು ದೊರಕಿವೆ. ಅಂತಹವುಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಕ್ರಿ.ಶ.೧೦೦೨ರ ಗದಗಿನ ತ್ರಿಕೂಟೇಶ್ವರ ದೇವಾಲಯದ ಶಾಸನವು ಕಲ್ಯಾಣ ಚಾಲುಕ್ಯರ ದೊರೆ ಇರಿವಬೆಡಂಗನ ಕಾಲಕ್ಕೆ ಸೇರಿದ್ದು ಅದರಲ್ಲಿ "ಸಖಭೂಪಾಳ ಕಾಳಾಕ್ರಾಂತ ಸಂವತ್ಸರಸತಂಗ ೯೨೪ನೆಯ ಶುಭಕೃತ್ಸಂವತ್ಸರಂ ಪ್ರವರ್ತ್ತಿಸೆ ತರ್ದ್ವರ್ಷಾಭ್ಯನ್ತರದ ಚೈತ್ರ ಸುದ್ಧ ೫ ಆದಿತ್ಯವಾರದಂದು ಬೆಳ್ವೊಲನಾಡೊಳಗಣ ಅಗ್ರಹಾರಂ ಕರ್ದುಗಿನ ಸ್ವಯಂಭೂದೇವರ ದೇಗುಲದ ಪೂಲಿಯ ಪಣ್ಡಿತರ ವಿದ್ಯಾಶಿಷ್ಯಂರ್ಕ್ಕೊಪ್ಪಿನ ವಕ್ಖಾಣೆ ಜೀಯಾರ ಶಿಷ್ಯರಪ್ಪ ಕಾಳಗ್ಗಾನಿ ವಖ್ಯಾಣಿಜೇಮರ್ಗ್ಗೆ ಧಾರಾಪೂರ್ವಕಂ ವಿದ್ಯಾದಾನವಾಗಿ ಪುರಿಗೆಜೆ ನಾಡೊಳಗಣ ಮಟ್ಟೆಯವಾಡದೆ ತೆಂಕಣ ಪೊಲದೊಳಗೆ ಯಣ್ಣಿಗೆಜೆಯ ಗೋಲೊಳ್ಸರ್ವ್ವಬಾಧ ಪರಿಯರಂ ಸರ್ವ್ವನಮಶ್ಯಂ ಕೊಟ್ಟ ಮತ್ತರ್"[೧೦೮] ಎಂದು ಬೆಳ್ವೊಲ-೩೦೦ ಪುಲಿಗೆರೆ-೩೦೦, ಕುಕ್ಕನೂರ-೩೦ನ್ನು ಆಳುತ್ತಿದ್ದ ಶೋಭನರಸರು ಕೊಟ್ಟ ಭೂದಾನದ ವಿಚಾರವನ್ನು ಹೇಳುತ್ತದೆ.

ಕ್ರಿ.ಶ.೧೦೧೦ರ ಮುಂಡರಗಿ ತಾಲೂಕಿನ ಪೇಟಾಲೂರಿನ ಶಾಸನವು ೫ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು ಇದು "೯೩೩ನೆಯ ಸಾಧಾರಣ ಸಂವತ್ಸರ ವೈಶಾಕದ ಪುನ್ನಮೆ ಆದಿತ್ಯವಾರದಂದು" ಸಿರಿವೂರದ ಅಮರಾಚಾರಭಟ್ಟಾರಕರಿಗೆ ವೆಣ್ಣೆಯಭಟ್ಟರು ಆಲೂರಿನಲ್ಲಿ ಬಿಟ್ಟ ಭೂದಾನದ ವಿಷಯವನ್ನು ಹೇಳಲಾಗುತ್ತದೆ.[೧೦೯]

ಕ್ರಿ.ಶ.೧೦೪೮ರ ಶಿರೂರಿನ ಶಾಸನವು ಒಂದನೇ ಸೋಮೇಶ್ವರನ ಕಾಲದ್ದಾಗಿದ್ದು ಅವನ ಮಹಾಸಾಮನ್ತ ಮಾದಿಣಯ್ಯಂಗಳ್ ಮಾಸಿಯವಾಡಿ-೧೪೦ನ್ನು ಆಳುತ್ತಿರುವಾಗ ಸಖವರ್ಷ ೯೭೦ನೆಯ ಸರ್ವ್ವಧಾರಿ ಸಂವತ್ಸರದ ವೈಶಾಖ[ಶು] . . ವ್ವದನ್ದು ಆಯ್ಯಗಾವುಣ್ಡಂ ನಾಗದೇವಗಾವುಣ್ಡಂ . . . ತಾರಂ ಚಂದ್ರಸೋಮಭಟರರ ಚಂದ್ರಕೀರ್ತಿ . . .ಮಠಸ್ಥಾನದ ತಪೋಧನರ್ಕ್ಕಳ್ಗಂ" ಎಂದು ಸಿರಿವೂರನ್ನಾಳುತ್ತಿದ್ದ ದಾಸರಸರು ಹಲವಾರು ಜನ ಯತಿಗಳಿಗೆ ನೀಡಿದ ದಾನಗಳ ಬಗ್ಗೆ ತಿಳಿಸುತ್ತದೆ.[೧೧೦] ಯತಿಗಳ ಹೆಸರುಗಳು ತೃಟಿತವಾಗಿವೆ.

ಕ್ರಿ.ಶ.೧೦೫೦ರ ಕೊರಲಹಳ್ಳಿ ಶಾಸನವು "ಸ್ವಸ್ತಿ ಸಕನೃಪಕಾಲಾತೀತ ಸಂವತ್ಸರ ಸತಂಗಳು ೯೭[೨] . . ಗ್ಗಸಿರ ಸುದ್ಧ ಪಞ್ಚಮಿ ದ್ವಿತಿಪಾತ ಉತ್ತರಾಯಣ ಸಂಕ್ರಾ. . .ಏಯರ್ ಮನ್ನೆ ಯಜ್ಜರಸನಂ ತನ್ನ ಸನ್ನಿಧಾನಕ್ಕೆ ಬರಿಸಿ. . . ರಾಪೂರ್ವ್ವಕದಿಂ ಕಾಲ್ಗರ್ಚ್ಚಿ ಬಿಟ್ಟ ಕೆಯಿದ" ಎಂದು ಕಿಸುಕಾಡು-೭೦ ಬಾಗಡೆ-೭೦ ತೊರಗೆಲೆ ಮತ್ತು ಮಾಸವಾಡಿ-೧೪೦ನ್ನು ಆಳುತ್ತಿದ್ದ ಅಕ್ಕದೇವಿಯು ೭೭೫

ತಪೋಧನರಿಗೆ ನೀಡಿದ ದಾನದ ಬಗ್ಗೆ ತಿಳಿಸುತ್ತದೆ.[೧೧೧] ಇದು ತ್ರುಟಿತವಾಗಿರುವುದರಿಂದ ಬಹಳ ವಿಷಯ ತಿಳಿಯಲು ಅಸಾಧ್ಯವಾಗಿದೆ.

ಮುಳಗುಂದದ ಕ್ರಿ.ಶ.೧೧೬೨ರ ಶಾಸನವು ಮುಳಗುಂದ ೧೨ನ್ನು ಯಾಯ್ವರಸರು ಆಳುತ್ತಿದ್ದಾಗ ಮುಳಗುಂದ-೧೨ ಎಂದರೆ ೧)ಮುಳಗುಂದ ೨)ಹೊಸೂರು ೩)ಎಲೆಶಿರೂರು ೪)ವೆಂಕಟಾಪುರ ೫)ಎಳವತ್ತಿ ೬)ಹರ್ತಿ ೭)ಕುರ್ತುಕೋಟಿ ೮)ಕಣವಿ ೯)ಕಲ್ಲೂರು ೧೦)ಎಲೆಹೊಸೂರು ೧೧)ಶಿರೂರು ೧೨)ನೀಲಗುಂದ ಅಲ್ಲಿಯ ಬಲ್ಲವಸೆಟ್ಟಿ, ಧರ್ಮಸೆಟ್ಟಿ, ಕ್ರಿತಯುಗಸೆಟ್ಟಿ, ಕೊಳಗರಸೆಟ್ಟಿ ಮೊದಲಾದ ಮೂನ್ನೂರು ಜನ ಗಾವುಣ್ಡಗಳೂ "ಸಕವರ್ಷ ವೊಂಭಯಿನೂಱೆಂಭತ್ತನಾಲ್ಕನೆಯ ಶುಭಕ್ರಿತ್ಸಂವತ್ಸರದ ಪೌಷ್ಯ ಸುದ್ಧಪಂಚಮಿ ಸೋಮವಾರಮುತ್ತರಾಯಣ ಸಂಕ್ರಾತಿಯನ್ದು ನಗರ[ದಱೂ]ರೊಡೆಯಂ ಬೆಳ್ಳಾಳ ಸೋಯಿಮಯ್ಯನ ಮಾನ್ಯ ದಯ್ಯತ್ತುಮತ್ತರೊಳಗೆ ದ್ರವ್ಯಪೂರ್ವ್ವಕದಿಂ ಮಾಱೂಣ್ಡು ನಗರೇಶ್ವರದಲಿರ್ಪ್ಪ ತಪೋಧನರ್ಗ್ಗೆ ಯಶನಾಚ್ಛಾದನನಿಮಿತ್ತಮಾಗೆ ಯಮನಿಯಮ ಸ್ವಾಧ್ಯಾಯಧ್ಯಾನಧಾರಣ ಮೋನಾನುಷ್ಠಾಣ ಜಪಸಮಾಧಿಶೀಳಸಂಪನ್ನರಪ್ಪ ಶ್ರೀಮದ್ಗಂಗರಾಸಿಪಣ್ಡಿತದೇವರ ಪಾದಾರಾಧಕರಪ್ಪ ಧ್ರುವೇಶ್ವ[ರ]ಗಡಿಂಬದ ಕೋಲೊಳ್ ಕೊಣ್ಡುಕೊಟ್ಟ ಮತ್ತರೆರೆಪನ್ನೇಳು"ಎಂದು ತಿಳಿಸುತ್ತದೆ. ಅಲ್ಲದೆ ಎಲ್ಲರು ಸೇರಿ ಗಂಗರಾಸಿ ಪಂಡಿತರ ಪಾದತೊಳೆದು ದ್ರುವೇಶ್ವರಪಂಡಿತದೇವರಿಗೆ ಭೂದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೧೧೨]

ಕ್ರಿ.ಶ.೧೧೬೪ರ ಅಸುಂಡಿಯ ಶಾಸನವು ತೃಟಿತವಾಗಿದ್ದು ಇದರಲ್ಲಿ [೯೮೭]ನೆಯ ವಿಶ್ವಾವಸು ಸಂವತ್ಸರದ ಪೌಶ್ಯದ ಪುಣ್ಣಮೆ ಆದಿತ್ಯವಾರ ಮುತ್ತರಾಯಣಸಂಕ್ರಾನ್ತಿನಿಮಿತ್ತ. . . . ಮೇಸ್ವರಪಣ್ಡಿತರ ಶಿಷ್ಯ ಯಮನಿಯಮಮ ಸ್ವಾಧ್ಯಾಯಧ್ಯಾನಧಾರಣ ಮೋನಾನುಷ್ಟಾಣ ಪರಾಯಣರಪ್ಪ ಸಾನ್ತರಾಶಿಪಣ್ಡಿತರಿಗೆ ಪದಪ್ರಕ್ಷಾಳನ. . . . ಧನಂಗೆಯ್ದು ದೇಗುಲದ ಭೂಮಿಯ ತೆಂಕ ಸರ್ವ್ವ ನಮುಸ್ಯಮಾಗೆ. . . ದೇವರಿಗೆ . . . ದೀಪನಿವೇದ್ಯಕ್ಕೆ ಮೂವತ್ತುಮೂಱುಗೇಣ ಗಳೆಯೊಳು ಬಿಟ್ಟ . . . ನೈಷ್ಟಿಕ ತಪೋಧನರ್ಗ್ಗೆ ಬಿಟ್ಟ ಮತ್ತರ್‌ಳ ಸತ್ರಕ್ಕೆ ಬಿಟ್ಟ. . .ರ್ವ್ವಬಾಧಾಪರಿಹಾರಮಾಗೆ ಬಿಟ್ಟರ್." ಎಂದು ಸಾನ್ತರಾಸಿಪಣ್ಡೇತರಿಗೆ ಅವರ ಕಾಲನ್ನು ತೊಳೆದು ತಪೋದನರ್ಗೆ, ಸತ್ರಕ್ಕೆ, ನೈವೇದ್ಯಕ್ಕೆ, ಸರ್ವಭಾದಾಪರಿಹಾರಮಾಗಿ ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೧೧೩]

ಕ್ರಿ.ಶ.೧೧೬೮ರ ಪೇಠಾಆಲೂರಿನ ಶಾಸನವು ಮಾಸವಾಡಿ-೧೪೦ನ್ನು ಶೌಚರಸನು ಆಳುತ್ತಿದ್ದಾಗ "ಸಕವರ್ಷ ೯೮೯ನ. . .ತ್ಸರದ ಮಾಘದ ಅಮವಾಸ್ಯೆ ಸೋಮವಾರ ಸೂರ್ಯ್ಯಗ್ರಹ. . ಲ್ಲಿಣಿಯತಿರ್ತ್ಥಸ್ಥಾನದಲ್ ಶ್ರೀಬಲ್ಲವರಸರ್ಕ್ಕೂಡೆ ಸರ್ವ್ವಬಾಧಾ. .ರಮಾಗೆ ಪಡೆದು ಮಾಸಿಯವಾಡಿ ನೂಱನಾಲ್ವತ್ತಱಬಳಿ . . . ಮಾಲದಾಲೂರಲ್ ಕೊಡಂಗೆಯ್ಯ ತೆವರಲೆರಡುಂ ಸ್ಥಳಮಾ. . . ಬಿಟ್ಟ

ಮತ್ತರ್." ಎಂದು ಮಾಳದಾಲೂರಲ್ಲಿ ಬಿಟ್ಟ ಭೂದಾನದ ಬಗ್ಗೆ ಹೇಳುತ್ತದೆ.[೧೧೪] ಆದರೆ ಇದು ಬಹಳ ತೃಟಿತವಾಗಿದೆ.

ಕ್ರಿ.ಶ.೧೧೦೪ರ ಲಕ್ಕುಂಡಿಯ ಶಾಸನವೊಂದು ಸ್ವಸ್ತಿ ಶ್ರೀಮಚಾಳುಕ್ಯವಿಕ್ರಮವರ್ಷದ ೨೮ನೆಯ ಸುಭಾನುಸಂವತ್ಸರದ ಮಾಘ ಬಹುಳ ಅಷ್ಟಮಿ ಬೃಹಸ್ಪತಿವಾರದಂದು। ಸಂಕಿಮಯ್ಯ ನಾಯಕರುಂ ಮಹಾದೇವಭಟ್ಟರುಂ ತಮ್ಮ ಅಕಸಾಲದಲು ತಮಗೆ ದೀಪಾವಳಿಯ ಪರ್ವ್ವದಲುಢಲುಕುಡುವವಹಮಾನಮಂ ಸವಕಟ್ಟುವ ಪನ್ನಿರ್ವ್ವರಿಗೆ ಬಿಟ್ಟರವರ ಪುತ್ರಮಿತ್ರಕಳತ್ರಾದಿಗಳೆಲ್ಲಂ ಬದ್ಧ ಪುಣ್ಯನಾಯಕರ್ಗ್ಗೆ ಭಟ್ರ್ಗೆ." ಎಂದು ಹನ್ನೆರಡು ಜನರಿಗೆ ವಸ್ತ್ರದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೧೧೫]

ಕ್ರಿ.ಶ.೧೧೧೮ರ ಲಕ್ಷ್ಮೇಶ್ವರದ ವಿಕ್ರಮಾದಿತ್ಯನ ಕಾಲದ ಶಾಸನವು ತೃಟಿತವಾಗಿದ್ದು, ಅದರಲ್ಲಿ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೩ನೆಯ ವಿ[ಳಂಬಿ] ಸಂವತ್ಸರದ ಪುಶ್ಯ ಸು೧೧ ಆದಿವಾರದಂದುತ್ತರಾಯ[ಣಸಂ]ಕ್ರಮಣ ವ್ಯತೀಪಾತ[ಂ] ಕೂಡಿದ ಪುಣ್ಯತಿಥಿಯೊಳ್ [ಸಮಸ್ತ] ಪ್ರಶಸ್ತಿ ಸಹಿತ[ಂ] ಶ್ರೀಮನ್ಮಹಾಪ್ರಧಾನಂ ದಣ್ಡನಾಯಕ . . .ಚರಸರು ಪುಲಿಗೆಱೆಮೂನೂಱುಮಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನೆಯಿನಾಳುತ್ತವಿರ್ದ್ದು ರಾಜಧಾನಿ ಪುಲಗೆಱೆಯ ರಾಮೇಶ್ವರದೇವರ್ಗ್ಗಾಪುರದ [ಸಾ]ದದೆ[ಱೆ] ಹಂದರುವಣವೆಂಬಿವಂ ಸರ್ವ್ವನಮಶ್ಯವಾಗಿ ಬಿಡೆಂದು ಬೇವುದುಂ ಮಹಾಪ್ರಸಾದವೆನ್ದು ತತ್ಪಾದಪದ್ಮೋಪಜೀವಿ"ಯಾದ ಸೋವರಸನು ರಾಮೇಶ್ವರ ದೇವಾಲಯದ ಸಾಮವೇದಿಪಂಡಿತನಿಗೆ ಕೊಟ್ಟ ದಾನದ ವಿಚಾರವನ್ನು ಹೇಳುತ್ತದೆ.[೧೧೬]

ಕ್ರಿ.ಶ.೧೧೨೩ರ ಶಾಸನವೊಂದು ರಾಮೇಶ್ವರದೇವಾಲಯದ ಮಠದಲ್ಲಿ ಕೌಮಾರವ್ಯಾಕರಣವನ್ನು ಹೇಳುವ ಉಪಾಧ್ಯಾಯರ ಜೀವನಕ್ಕಾಗಿ "ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪[೭]ನೆಯ ಪ್ಲವ ಸಂವತ್ಸರದ ಫಾಲ್ಗುಣಮಾಸದಮವಾಸ್ಯೆ ಆದಿವಾರಸಂಕ್ರಮಣ ವ್ಯತೀಪಾತ ಸೂರ್ಯ್ಯಗ್ರಹಣದನ್ದು." ಬಿಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೧೧೭]

ಕ್ರಿ.ಶ.೧೧೨೪ರ ಪೇಟಾಲೂರಿನ ಶಾಸನವು "ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೮ನೆಯ ಶೋಭಕೃತ್ಸಂವತ್ಸರದ ಮಾಘದಪುಣ್ಣಮಿಸುಕ್ರವಾರದನ್ದು ಸೋಮಗ್ರಹಣಮುಂ ವ್ಯತೀಪಾತದನ್ದು ." ದಂಡನಾಯಕ ಪಸಾಯಿತ ಸುರಿಗೆಯ ನಾಗರಸರ ಕಾಲಂ ತೊಳೆದು ಪ್ರಮುಖ ಮಹಾಜನವಿನ್ನೂರ್ವ್ವರುಂ ೧೧೦ಮತ್ತರು ಭೂಮಿಯನ್ನು ಮತ್ತು ಮನೆಯನ್ನು ಪೊನ್ನಖಣ್ಡೆಕದ ಉಪಾಧ್ಯಾಯರಿಗೆ ಕೊಟ್ಟ ಭೂದಾನದ ವಿಷಯವನ್ನು ತಿಳಿಸುತ್ತದೆ.[೧೧೮]

ಕ್ರಿ.ಶ.೧೧೩೮ರ ಎಲೆಶಿರೂರಿನ ಶಾಸನವು "ಸಕನ್ರಿಪಕಾಳಾತೀತ ಸಂವತ್ಸರಸತಂಗ ೯೨೬ನೆಯ ಕ್ರೋಧಿ ಸಂವತ್ಸರಂ ಪ್ರವರ್ತ್ತಿಸೆ ತದ್ವರ್ಶ್ಯಾಭ್ಯಂತರ ಪೌಷ್ಯದಮಮಾವಾಸ್ಯೆಯಾದಿತ್ಯವಾರ

ಸೂರ್ಯ್ಯಗ್ರಹಣದಂದು ಸಿರಿವುರದೆಂಬಗ್ರ್ಗಾವುಂಡಗಳು ವಱುವತ್ತೊಕ್ಕಲು ಬಿಂನಪಂಗೆಯ್ಯೆ। ಶ್ರೀಸೋಭನರಸರು ಮೂಲಸ್ಥಾನದ ರೇವಬ್ಬೆಗೊರವಿಗೆ ಧಾರಾಪೂರ್ವ್ವಕ್ಕಂ ಮುದ್ದಿಗೆಱಿಯೊಳಗಣದೊಂದು ತೋಂಟಕ್ಕಂ। ಸಿರಿಗಾ(ಂ)ವುಂಡನ ಹೊಲದೊಳಗೊಂದು ತೋಂಟಕ್ಕಂ। ಹೊಲಗೇರಿಯ ಪಡುವಣ ಕರುವಗೆಯ್ಯಿಂದಂ ತೆಂಕಲಾಱುಮತ್ತರು ಕೆಯಿಂಗ ಮಱುವಣಮಯ್ದು ಗದ್ಯಾಣಮಂತಿಱುವರು। ಗಾವುಂಡುಗಳು ವಱುವತ್ತೊಕ್ಕಲುಂ ತೋಂಟದಲೊಂದು ಬಳ್ಳಿಯಂ ನಡೆಯಿಸುವರು. ಆ ಶಾಸನಂ ಸ್ಫುಟಿತವಾಗಲು ಶ್ರೀಮತ್ಸರ್ವ್ವಜ್ಞಚಕ್ರವರ್ತ್ತಿ ಭುವಲ್ಲೋಕಮಲ್ಲದೇವ ವರ್ಶದ ೧೩ನೆಯ ಕಾಳಯುಕ್ತ ಸಂವತ್ಸರದ ಪುಶ್ಯ ಬಹುಳ ೭। ಆದಿತ್ಯವಾರ । ವ್ಯತಿಪಾತಮುತ್ತರಾಯಣ ಸಂಕ್ರಮಣದಂದು। ಪುನಃ ಮಹಾಪ್ರಧಾನ ಮಹಾದೇವಯ್ಯನು ಅವನ ಮಯ್ದುನ ಶ್ರೀಪುರದ ಹೆರ್ಗ್ಗಡೆ ಪ್ರಧಾನ ಕಂನಡ ಸಂಧಿವಿಗ್ರಹ ಬಿಂನ್ನವತ್ತಳೆಯ ಪದ್ಮರಸನು ಅಲ್ಲದೆ, ಹಲವು ಜನಗಾಂವುಂಡರು ಅರವತ್ತೊಕ್ಕಲು ಮೂಲಸ್ಥಾನದೇವರ ನೈವೇದ್ಯಕ್ಕೆ ಮತ್ತು ತಪೋಧನರ ಆಹಾರಕ್ಕಾಗಿ ಬಿಟ್ಟ ಭೂದಾನದ ವಿಚಾರವನ್ನು ತಿಳಿಸುತ್ತದೆ.[೧೧೯]

ಕ್ರಿ.ಶ.೧೨೮೩ರ ಡಂಬಳದ ಶಾಸನವು ಜೋಗದೇವದೇವಾಲಯದ ಆಚಾರ್ಯ್ಯರಿಗೆ "ಶ್ರೀ ವೀರರಾಮದೇವರಾಜ್ಯೋದಯ[ದ] ೧೪ನೆಯ ಸ್ವಭಾನು ಸಂವತ್ಸರದ॥ ಭಾದ್ರಪದ ಸು ೧೫[ಪು.]ಣುಮಿ ಭೋಗದೇ[ವ]ರಾ[ಚಾ]ರ್ಯ್ಯರು. . . ಹದಿನಱುವರ ಕೋ[ಲಲು] ಮ[ತ್ತ೬೦]ಕ್ಕ".ಎಂದು ಕೊಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ.[೧೨೦]

ಕ್ರಿ.ಶ.೧೫೩೯ರ ವಿಜಯನಗರ ದೊರೆ ಅಚ್ಯುತರಾಯನ ಕಾಲದ ಗದುಗಿನ ವೀರನಾರಾಯಣ ಗುಡಿಯ ಶಾಸನವು "ಶ್ರೀಅಚ್ಯುತರಾಯ[ರು] ವಿಜಯನಗರಿಯ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿ್ರರಲು ಶಕವರ್ಷ ೧೪೬೧ನೆಯ ವಿಕಾರಿ ಸಂವತ್ಸರದ ಭಾದ್ರಪದ ಶುದ್ಧ ಶ್ರಾವಣ [೧೨] ಮಂಗಳವಾರ ಪುಣ್ಯಕಾಲದೊಳು ಭಾಸ್ಕರಕ್ಷೇತ್ರ ತುಂಗಭದ್ರಾತೀರ ವಿಠ್ಠಲೇಶ್ವರನ ಸಂನಿಧಿಯಲಿ ಮಾಧವಪ್ರೀತ್ಯರ್ಥವಾಗಿ ಆನಂದನಿಧಿಯೆಂಬ ದಾನವನ್ನು ಕೊಟ್ಟು ಸಮಸ್ತ ಭೂಸುರರನು ಸಂತೋಷಂಬಡಿಸಿದ ಪ್ರಶಸ್ತಿಯನ್ನು ಸಂಸ್ಕೃತಭಾಷಾಕವಿತ್ವದಲ್ಲಿ ಶಾರ್ದೂಲವಿಕ್ರೀಡಿತವೆಂಬ ವೃತ್ತಂಗಳನು। ಕವಿಕುಮಾರವ್ಯಾಸಂಗೆ ಪ್ರಸಂನನಾದ ಗದುಗಿನ [ಶ್ರೀವೀರ]ನಾರಾಯಣನ ಸಂನಿಧಿಯಲ್ಲಿ ಶಿಲಾಶಾಸನಕ್ಕೆ ಬರೆಸಿದ ಧರ್ಮ್ಮಕೀರ್ತ್ತಿಪ್ರಶಸ್ತಿಯ"[೧೨೧] ಎಂದು ಆನಂದನಿಧಿಯೆಂಬ ದಾನವನ್ನು ಕೊಟ್ಟ ವಿಚಾರದ ಬಗ್ಗೆ ತಿಳಿಸುತ್ತದೆ.

ಲಕ್ಷ್ಮೇಶ್ವರದ ಕ್ರಿ.ಶ.೧೫೪೭ರ ಶಾಸನವೊಂದು ವಿಜಯನಗರದ ದೊರೆ ಸದಾಶಿವರಾಯನ ಕಾಲಕ್ಕೆ ಸೇರಿದ್ದು, ಅದು ಕಂದನವಳಲ ನಾವಿಲತಿಂಮೋಜನ ಮಕ್ಕಳು ತಿಂಮೋಜ-ರಂಗೋಜ ಭದ್ರೋಜರು

ರಾಮರಾಯರಿಗೆ ಬಿಂನಹ ಮಾಡಲಾಗಿ ರಾಮರಾಯರು ಸದಾಶಿವರಾಯರಿಗೆ ಬಿನ್ನಪಂ ಮಾಡಿಕೊಂಡು ತಿಮ್ಮೋಜ ನಾವಿಂದನಿಗೆ ಸುಂಕದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೧೨೨]

ಬ್ಯಾಲವಡಿಗೆಯ ಕ್ರಿ.ಶ.೧೬ನೇ ಶತಮಾನದ ಶಾಸನವೊಂದು ಬಹಳ ತ್ರುಟಿತವಾಗಿದ್ದು, ಟಿಕವೀರಣಗೆ ಚಿನ್ನದ ಕಾಣಿಕೆ ನೀಡಿದ ಬಗ್ಗೆ ತಿಳಿಸುತ್ತದೆ.[೧೨೩]

ರಾಷ್ಟ್ರಕೂಟರ ದೊರೆ ಒಂದನೇ ಅಮೋಘವರ್ಷನ ಕಾಲದ ಚಿಂಚಲಿಯ ಶಾಸನವು ಚಿಂಚಲದ ಐವತ್ತಾರು ಮಹಾಜನರ ಪಾದಪ್ರಕ್ಷಾಲನಗೈಯ್ದು ನೀಡಿದ ಗೋಸಹಸ್ರದಾನದ ಬಗ್ಗೆ ತಿಳಿಸುತ್ತದೆ.[೧೨೪]

ರಾಷ್ಟ್ರಕೂಟರ ೨ನೇ ಕೃಷ್ಣನ ಕ್ರಿ.ಶ.೮೮೩ರ ಶಾಸನವು "ಸ್ವಸ್ತಿ ಶ್ರೀಅಕಾಲವರಿಷಾ ಪೃಥುವೀವಲ್ಲಭ ಮಹಾರಾಜಾದಿ[ರಾಜ] ಪರಮೇಶ್ವರಾ ಶ್ರೀಮತ್ಕನ್ನರ ಭಟರರ ರಾಜ್ಯಾಭೀವ್ರಿದ್ಧಿ ಸಲುತ್ತುಮಿರೆ ಶಕ ನೃಪಕಾಲಾತೀತ ಸಂಬಾತ್ಸರಂಗಳೆಣ್ಬುನೂಜಾಯ್ದಾನೆ ಸೋಭಕೃತ್ ಎಂಭ ಸಂವತ್ಸರಂ ಪ್ರ[ವ]ರ್ತ್ತಿಸೆ ಇನ್ದಾಪಾಯ್ಯಾ ನಾಡಾನಾಳುತ್ತಿರೆ ಪುರಿಗೆಜಿನಾಡಸರಟವುರ ದಾಯ್ಯದಿಂ[ಬ]ರುಮಿಬ್ಬುನಾಡಯಿಸೆ ಮಾಸಿಗರ ಚಿದಾಣ್ಣ ಗೋಸಾಸ[ಂ]ಮಿಟ್ಟೋಂ ಸ್ಥಾನಾಭಿವೃದ್ಧಿ ನಮ" ಎಂದು ಸೊರಟೂರ ಐವತ್ತು ಮಹಾಜನರ ಸನ್ನಿಧಿಯಲ್ಲಿ ಚಿದಣ್ಣನ್ನುಂ ಗೋಸಹಸ್ರದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೧೨೫]

**೨.೩.೬. ಇತರೆ ದಾನ**

ನಮ್ಮ ಜನರು ದೇವಾಲಯಗಳಿಗೆ ಅವುಗಳ ಅಭಿವೃದ್ಧಿಗೆ ಹಲವು ರೀತಿಯ ದಾನಗಳನ್ನು ನೀಡಿದ್ದಾರೆ. ಅವುಗಳನ್ನು ಈ ಭಾಗದಲ್ಲಿ ತಿಳಿಯೋಣ.

ಕ್ರಿ.ಶ.೯೦೪ರ ಚಿಂಚಲಿ ಶಾಸನವು ವತ್ಸಯ್ಯ ಎಂಬುವನು ಬೆಳ್ವೊಲ-೩೦೦ನ್ನು ಆಳುತ್ತಿದ್ದಾಗ "[ಶ್ವಸ್ತಿ] ಶ್ರೀ ಕನ್ನರ ರಾ[ಜ್ಯಂ]ಸಲುತ್ತಿರೆ ಸಕನೃಪಕಾಲಾತೀತಸಂವಸ್ವರಶತಂಗಳೆಂಣ್ಬುನೂಋ[ಪ್ಪತ್ತೆ]ಯ್ದನೆಯ ರಕ್ತಾಕ್ಷಿಂಬ ಸಂವಸ್ವರಂ ಪ್ರವರ್ತ್ತಿಸೆ ಶ್ರೀಮತ್ವತ್ಸಯ್ಯಂ ಬೆಳ್ವಲಮೂನೂಱಱಸೂಂ[ಖ]ಮನಾಳುತ್ತುನ್ದು ಕೊಂ[ಡಿಟ್ಟು] ಸೂರ್ಯ್ಯಗ್ರಹಣ ಚಿಂಚಿಲದ. . .ನ ಸೊಂಖಖ. . .[ನಾ]ಡಯ್ವತ್ತಱುವೋರು. . .ಮ್ಮಯ್ಯನ ದೇಗುಲಕ್ಕಂ ಬಿಟ್ಟೋಮ್" ಎಂದು ಸುಂಕದಾನವನ್ನು ದೇವಾಲಯಕ್ಕೆ ಕೊಟ್ಟಿದ್ದನ್ನು ತಿಳಿಸುತ್ತದೆ.[೧೨೬]

ಶಿರೂರಿನ ಕ್ರಿ.ಶ.೧೦೪೦ರ ಶಾಸನವು ಆಯ್ಚಗಾವುಂಡಾದಿಗಳು ಸತ್ರಕ್ಕೆ ನೀಡಿದ ಭೂದಾನದ ಬಗ್ಗೆ ತಿಳಿಸುತ್ತದೆ.[೧೨೭]

ತಾಮ್ರಗುಂಡಿಯ ಒಂದನೇ ಸೋಮೇಶ್ವರನ ಕಾಲದ ಕ್ರಿ.ಶ.೧೦೫೪ಕ್ಕೆ ಸೇರಿದ ಶಾಸನವು ಊರೊಡೆಯರು ಪ್ರಮುಖ ಮಹಾಜನರು ಮೂಲಸ್ಥಾನದೇವರಿಗೆ ವಿಷ್ಣುದೇವರಿಗೆ ಸಕನೃಪಕಾಳಾತೀತ ಸಂವತ್ಸರ ಶತಂಗಳ್ ೯೭೬ನೆಯ ಜಯ ಸಂವತ್ಸರದ ಬಾದುಬ್ಬೆಯಮಾವಸ್ಯೆ ಸೂರ್ಯ್ಯಗ್ರಹಣದನ್ದು ಊರೊಡೆಯ ಪ್ರಮುಖ ಮಹಾಜನಮಯ್ವದಿಂವರುಮ ನೆರಪಿ ಊ[ರ] ಮೇಲೆ ಕರ್ವ್ವಣಿ ವೃದ್ಧಿಯಲ್

ಮೂಲಸ್ಥಾನಕಲಿದೇವಸ್ವಾಮಿಗೆ ವಿಷ್ಣುದೇವರ್ಗ್ಗೆ ನನ್ದಾದೀವಿಗೆಗಂ। ನಿವೇದೆಯಕ್ಕಂ। ಶ್ರಿಖಣ್ಡಕ್ಕಂ। ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಮಿರ್ಪ್ಪತ್ತಯ್ದು ಸತ್ರದಡುಗೆಯ ಸವಿಧೆಗೆ ಮೊದಲ್ಗೊಟ್ಟ ಗದ್ಯಾಣಮೆರಡು। ಇನ್ತಿಧರ್ಮ್ಮಮನೂರೊಡೆಯನು ಮೂರುಂ ನಡೆಯಿಸುವರ್."ಎಂದು ನಂದಾದೀವಿಗೆಗೆ, ನೈವೇದ್ಯಕ್ಕೆ, ಶ್ರೀಖಣ್ಡಕೆ, ದೂಪಕ್ಕೆ ಕೊಟ್ಟ ಗದ್ಯಾಣಗಳ ವಿವರವನ್ನು ತಿಳಿಸುತ್ತದೆ.[೧೨೮ಸ]

ಕ್ರಿ.ಶ.೧೦೬೯ರ ಚಿಂಚಲಿ ಶಾಸನವು ಚಿಂಚಲಿಯ ಮಹಾಜನ ಮಯ್ವತ್ತರುವರು "ಸ್ವಸ್ತಿ ಸಕವರ್ಷ ವೊಂಭಯ್ನೂಱತೊಂಭತ್ತೊಂದನೆಯ ಸೌಮ್ಯಸಂವತ್ಸರದ ಶ್ರಾವಣಸುದ್ಧ ಪಾಡಿವಂ ಸೂರ್ಯ್ಯಗ್ರಹಣದಂದು ಸಮಸ್ತಗುಣಸಂಪನ್ನರಪ್ಪ ಶ್ರೀಮಚ್ಚಿಂಚಿಲದ ಮಹಾಜನಮಯ್ವತ್ಱ್ವರ ಕಯ್ಯೊಳು ಮಣಸಂದರ ದೇವಣ್ಣಂ ಸರ್ವ್ವಬಾಧಾಪ[ರಿ]ಹಾರಮಾಗಿ" ನಾಗೇಶ್ವರದೇವರಿಗೆ ಬಿಟ್ಟ ಹೂದೋಟದ ದಾನದ ಬಗ್ಗೆ ತಿಳಿಸುತ್ತದೆ.[೧೨೯]

ಕ್ರಿ.ಶ.೧೦೭೬ರ ಲಕ್ಕುಂಡಿ ಶಾಸನವೊಂದು ದೇವೇಂದ್ರಪಂಡಿತರ ಶಿಷ್ಯರಾದ ಸಂಕಕೋಟಿಕಲಿದೇವ ಸ್ವಾಮಿಗೆ ಶ್ರೀಸಕವರಿಷ ೯೯೮ ನಳ ಸಂವತ್ಸರದ ಸಂಕ್ರಾಂತಿ ಆದಿವಾರದಂದು ದೇವೇಂದ್ರಪಂಡಿತರ ಸಿಶ್ಯರಪ್ಪ ಸಂಕರಕೋಟಿಕಲಿದೇವಸ್ವಾಮಿಗೆ ಕೊರುವರಿಯಪತ್ತು ಕಂಬ[ಂ]ಕ್ಕ ಎರಡು ದರವಂದೆಕ್ಕಂ ಕೊಟ್ಟ ಗದ್ಯಾಣಮೂವತ್ತುರುವರಿ ಕೇತೋಜನ ಬೆಸ" ಎಂದು ಕಂಬಕ್ಕೆ ಎರಡು ದರವಂಧಕ್ಕಂ ಗದ್ಯಾಣಗಳ ಕೊಟ್ಟು ಕಂಬಗಳನ್ನು ಖರೀದಿಸಿ ದಾನಮಾಡಿದ ಬಗ್ಗೆ ಹೇಳುತ್ತದೆ.[೧೩೦]

ಕ್ರಿ.ಶ.೧೦೯೪ರ ಡೋಣಿಯ ಶಾಸನ ದಂಡನಾಯಕ ಮಹಾದೇವಭಟ್ಟರ ಆದೇಶದ ಮೇರೆಗೆ "ಶ್ರೀ ಚಾಳುಕ್ಯವಿಕ್ರಮವರ್ಷ ೧೬ನೆಯ ಭಾವಸಂವತ್ಸರದ ಪುಷ್ಯ ಸುದ್ಧ ಪಂಚಮಿ ಆದಿತ್ಯವಾರ ಉತ್ತರಾಯಣಸಂಕ್ರಾನ್ತಿ ಬ್ಯತೀಪಾತದಂದು ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀಮತ್ಸರ್ಬ್ಬಾಧಿಕಾರಿ ಮನೆವೆರ್ಗ್ಗಡೆ ಮಹಾಪ್ರಚಣ್ಡನಾಯಕಂ ಮಹಾದೇವಭಟ್ಟರ ಬೆಸದಿಂ ಸಮಸ್ತಗುಣ ವಿಶೇಷೋನ್ನತರಪ್ಪ ಶ್ರೀಮತ್ಪನ್ನಾಯದ ಸುಂಕವೆರ್ಗ್ಗಡೆ ವಿಟ್ಟರಸಂ ದ್ರೋಣಾಪುರದೂರೊಡೆಯ ಪ್ರಮುಖ ಮಹಾಜನಮ[ರ್ವ]ದಿಂರ್ಬರುಂ ಸಮಸ್ತ ಸೆಟ್ಟಿಯರ ಸನ್ನಿಧಾನದೊಳ್ ಸಿದ್ಧೇಶ್ವರದೇವರಂಗಭೋಗಕ್ಕಂ ನನ್ದಾದೀವಿಗೆಗೆ ಮಲ್ಲಿಯಾಚಾರ್ಯ್ಯರು ಶಿವಶಕ್ತಿ ಪಣ್ಡಿತರ್ಗ್ಗೆ ಧಾರಾಪೂರ್ಬ್ಬಕಂ ಮಾಡಿ ದೋಣಿಯ ಕುಳಿಯ ಪನ್ನಾಯದೆ ಸುಂದೊಂದು ವರ್ಷಸ್ಥಿತಿಯಿನಾಚಂದ್ರಾರ್ಕತಾರಂ ನಡೆವಂತು ಮಾಡಿಕೊಟ್ಟ ಗದ್ಯಾಣಂ ೬ ಪಣ ೭ ಅನ್ತಾ ಪೊಂಗಳನಾಸ್ಥಳದೊಳು ನಡೆವ ಮಾನಸೆ[ರೇ] ತಿಂಗಳಿಗ ಅಯ್ದು ಪಣ ವಡ್ಡಮಂ ಕುಡುತುಂ ವರಿಷಕ್ಕಯ್ದುಸುತ್ತಂ ಬರ್ಪ್ಪರು." ಮತ್ತು ಸುಂಕಪೆರ್ಗಡೆ ವಿಟ್ಟರಸನಿಂದ ಸಿದ್ಧೇಶ್ವರ ದೇವಾಲಯಕ್ಕೆ ಕುಳಿಯಪನ್ನಾಯದ ಸುಂಕವನ್ನು ದಾನವಾಗಿ ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೧೩೧]

ಕ್ರಿ.ಶ.೧೯೮೮ರ ಸೊರಟೂರಿನ ಶಾಸನ ಕೇದಾರಶಕ್ತಿಪಂಡಿತರ ಕಾಲನ್ನು ತೊಳೆದು ಗ್ರಾಮೇಶ್ವರದೇವರಿಗೆ ಕುಳಿಯಸುಂಕದಾನ, ಎಣ್ಣೆದಾನ, ಮತ್ತು ಗದ್ಯಾಣಗಳನ್ನು ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೧೩೨]

ಇದೆ ಸೊರಟೂರಿನ ಕ್ರಿ.ಶ.೧೧ನೇ ಶತಮಾನದ ಶಾಸನವೊಂದು ಮಾರ್ಪ್ಪಡೆ ಬಾಯಿಕಬ್ಬೆಗಳು ಮಾಡಿದ ಹೊನ್ನು ದಾನದ ಬಗ್ಗೆ ತಿಳಿಸುತ್ತದೆ.[೧೩೩]

ಗದಗಿನ ಕ್ರಿ.ಶ.೧೧೦೧ರ ಶಾಸನವು ಹೊನ್ನವರ ಮದ್ದಿಮಯ್ಯ ನಾಯಕ ತಮ್ಮ ಶಂಕರನಾರಾಯಣ, "[]ಚ್ಚಾಳುಕ್ಯವಿಕ್ರಮಕಾಲದ ೨೫ನೆಯ ವಿಕ್ರಮಸಂವತ್ಸರದ ಮಾಘ ಸುದ್ಧ ೫ ಆದಿವಾರ ಉತ್ತರಾಯಣಸಂಕ್ರಮಣಂ ವ್ಯತೀಪಾತ . . . [ಮ]ಹಾತಿಥಿಯೊಳ್ ಹೊನ್ನವರ ಮದ್ದಿಮಯ್ಯನಾಯ [ಕಂ ತ]ಮ್ಮ ಶಂಕರನಾರಾಯಣದೇವರಂಗಭೋಗಕ್ಕೆ ಕೊಟ್ಟ ಗದ್ಯಾಣಂ ಆದೇ. . . .ಳೆ ಗನ್ಧಪಿಜ್ಜಿ ಧೂಪ ನನ್ದಾದೀವಿಗೆ ನಿವೇದ್ಯಂ ಚೈತ್ರಪವಿತ್ರಾರೋಪಣಂ ಪಾರಾಯಣದ ಪನ್ನಿರ್ವ್ವಬ್ರಾಹ್ಮಣರ ದಕ್ಷಿಣೆಗಂ ದೇವರ ಪೂ. . . .ಣೆಯ ಜೀವಿತ[ವಾದಿ] ಯಾಗಿ ನ. . . ಅಲ್ಲಿಯಱವಂಟಗೆಗೆ ಕೊಟ್ಟ ಗದ್ಯಾಣಂ ೧೦ ಆ ಪೂನ್ನ ವೃದ್ಧಿಯಿಮದದಂ ನಡಯಿಸುವರು। ಮತ್ತಮಲ್ಲಿ ಸತ್ರಕ್ಕೆ ಕೊಟ್ಟ ಗದ್ಯಾಣ ೨[೪]೦ ಆ ಪೂನ್ನವೃದ್ಧಿಯಿಂ ಪನ್ನಿವಬ್ರಾಹ್ಮಣರ್ಗ್ಗೆ. . . .ನಡೆಯಿಸುವರು ಬಟ್ಟಕೆಱೆಯ ಬ . . . [ಟ್ಟೆ]ಯ ತಮ್ಮಕೆ[ಱೆ]ಗೆ ಆ ಕೆಱೆಯ . . . .[ಮೆಯ್ಯ] ಬಟ್ಟಕೆಱೆಯ ಪೊಲದೊಳ [ಗೆ ಕಾಲ್ಗಚ್ಚು] ಗೊಟ್ಟು ಬಿಟ್ಟ ಕೆಯಿಮತ್ತರು ೧೬ ಮತ್ತಮಾ ಕೆಱೆಯ ಕೊಟ್ಟ ಗದ್ಯಾಣ ೩೦ ಆ ಪೊನ್ನವೃದ್ಧಿಯಿಂದ [ವಾ] . . . .ಕೆರೆಯಂ ಪಡಿಸಲಿಸ್ತುವರು [।] ಆ ಕರನ್ದಿಗೆಯ ಹಳ್ಳದ ಬಾವಿಯ ಧರ್ಮ್ಮತಕ್ಕೆ ಕೊಟ್ಟ ಗದ್ಯಾಣ ೧೦ ಆ ಪೊನ್ನ ವೃದ್ಧಿಯಿಂದ ನಡಯಿಸು[ವರು] ಅಲ್ಲಿಯಱವಂಟಗೆಗೆ[ಕೊಟ್ಟ] ಗದ್ಯಾಣಂ ೧೦ ಆ ಪೊನ್ನ ವೃದ್ಧಿಯಿಂದದಂ ನಡಯಿಸುವರು। . . .ಅಲ್ಲಿ ಪಥಶ್ರಾನ್ತರಾಗಿ ಬಬ್ಬಬಲಿಯುಣ್ಬವರ ಗ್ರಾಸಕ್ಕೆ ಕೊಟ್ಟ ಗದ್ಯಾಣ[೧]೦ ಆ ಹಿನ್ನ ವೃದ್ಧಿಯಿಮದದಂ ನಡಯಿಸುವರು। ಅನ್ತೆ ಸತ್ರಂ. . . .ಗದ್ಯಾಣಂ ೪೧೦ ಈ ಮೊದಲ ಪೊನ್ನಂ ಕಿಡಲೀಯದೆ. . . ದೊಳ್ ಹೊನ್ನವರಕುಳ ಕಮಳದಿವಾಕರಂ ಚಾಮಯಫೈಸಾಸರುಂ [ಪೊನ್ನವರ] ಕುಳತಿಳಕಂ[ಮದ್ದಿ]. . . .ಗಳ್ ಪ್ರಮುಖಮಾಗೆ . . .ರೆಲ್ಲಂ ತಮ್ಮ ಧರ್ಮ್ಮಂಗಳಂ ಕಿಎಲೀಯದೆ ಪ್ರತಿಪಾಳಿಸಿ ನಡೆಯಿಸುವರು." ಎಂದು ದೇವರ ಅಂಗಭೋಗಕ್ಕೆ, ಅರವಟಿಗೆಗೆ ಕೊಟ್ಟ ಗದ್ಯಾಣ ಮತ್ತು ಭೂದಾನವನ್ನು ತಿಳಿಸುತ್ತದೆ.[೧೩೪]

ಕ್ರಿ.ಶ.೧೧೦೨ರ ಲಕ್ಷ್ಮೇಶ್ವರದ ಶಾಸನವು ಪುಲಿಗೇರೆಯ ದಂಡನಾಯಕನಾದ ಮಾಧವಭಟ್ಟರು ಸೋಮೇಶ್ವರದೇವರಿಗೆ ಪನ್ನಾಯದ ಸುಂಕವನ್ನು ದಾನಬಿಟ್ಟ ಬಗ್ಗೆ ತಿಳಿಸುತ್ತದೆ.[೧೩೫]

ಕ್ರಿ.ಶ.೧೧೦೨ರ ಗದುಗಿನ ಶಾಸನವು ದಂಡನಾಯಕ ಮಾಧವಭಟ್ಟರು ಬೆಳ್ವಲ ನಾಡೊಳಗಿರುಂಗಮಿಳಿಗಿನ ಶ್ರೀಸ್ವಯಂಭುತ್ರಿಕೊಟೇಶ್ವರ ಸೋಮನಾಥದೇವರಿಗೆ ಕುಳಿಯ ಸುಂಕವನ್ನು ದಾನಬಿಟ್ಟ ವಿಚಾರವನ್ನು ತಿಳಿಸುತ್ತದೆ.[೧೩೬]

ಕ್ರಿ.ಶ.೧೧೦೭ರ ಲಕ್ಷ್ಮೇಶ್ವರದ ಶಾಸನವು ಮಹಾಮಂಡಳೇಶ್ವರ ತೈಲದೇವನು ಸೋಮನಾಥದೇವರಿಗೆ ಹಣವನ್ನು ದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೧೩೭]

ಕ್ರಿ.ಶ.೧೧೧೮ರ ಲಕ್ಕುಂಡಿಯ ಶಾಸನವು "ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮವರಿಶದ ೪೩ನೆಯ ವಿಳಂಭಿಸಂವತ್ಸರದ ಭಾದ್ರಪದ ಪುಣ್ಣಮೆಆದಿತ್ಯವಾರದ(ಂ)ನ್ದು । ಭರತೇಸ್ವರದೇವರ ಕ್ಮಾಜೆಕೆಯ ದಸವನ್ದವ ಗಂಗಯನ ಕೇತೋಜನು ಗಂಗನುಂ ದೇವರ್ಗ್ಗೆ ಕಾಲಗಚ್ಚಿ ಕೊಟ್ಟರು." ಭರತೇಶ್ವರ ದೇವಾಲಯದ ಕಮ್ಮೂರೇಕೆಯ ದಸವನ್ದವ ಗಂಗಯ್ಯನ ಕೇತೋಜನು ಗಂಗನು ದೇವರಿಗೆ ಕೊಟ್ಟ ಸುವರ್ಣದಾನದ ಬಗ್ಗೆ ತಿಳಿಸುತ್ತದೆ.[೧೩೮]

ಕ್ರಿ.ಶ.೧೧೨೬ರ ಕುರ್ತುಕೊಟಿಯ ಶಾಸನವು ದಾಸೇಶ್ವರದೇವರ ಅಂಗಭೋಗಕ್ಕೆ ತರೆಯ ಸರ್ವ್ವಾಧಿಕಾರಿ ದಂಡನಾಯಕ ಸಲ್ಲಂಪಯ್ಯಂಗಳು ಸಂಧಿವಿಗ್ರಹಿ ಕೇಶಿರಾಜನು ಡೋಣಿಯ ಗುಂಜಗದಾಸಿಯಣ್ಣ ಬಲ್ಲಿಸೆಟ್ಟಿಯು, ವೈಜಯಬಮ್ಮಣ್ಣ, ಹಡವಳಮಾಚಣ್ಣ, ಅಣುವನಾಗಸೋವಯ್ಯನಾಯಕ ಬಳಗಾವಿದೇವಣ್ಣ, ಊಂದುಗಮಬಣ್ಣ ಇವರೆಲ್ಲರು ಮುಖ್ಯವಾಗಿ ದೇವರಿಗೆ ಪಡೆದ ಸುಂಕದಾನವನ್ನು ಈ ದೇವರಿಗೆ ಪ್ರತಿಪಾಲಿಸುವುದು'[೧೩೯] ಎಂದು ಹೇಳಿದರು ಎಂಬುದಾಗಿ ತಿಳಿದುಬರುತ್ತದೆ.

ಕ್ರಿ.ಶ.೧೧೩೮ರ ಶಾಸನವು ಮೂರನೇ ಸೋಮೇಶ್ವರನ ಕಾಲದ್ದಾಗಿದ್ದು ಇದು ತೃಟಿತವಾಗಿದೆ. ಬೊಪ್ಪಯ್ಯ ನಾಯಕನು ಶ್ರೀಮನ್ನಾರಸಿಂಹದೇವರ ಸನ್ತತ ನಂದಾದೀವಿಗೆ ನಡೆಸಲು ನೀಡಿದ ಯಾವುದೋ ದಾನದ ಬಗ್ಗೆ ತಿಳಿಸುತ್ತದೆ.[೧೪೦]

ಕ್ರಿ.ಶ.೧೧೪೦ರ ಲಕ್ಕುಂಡಿ ಶಾಸನವು ಅರ್ಧಭಾಗ ತೃಟಿತವಾಗಿದ್ದು ಅದರಲ್ಲಿ ಗ್ರಾಮದ ಯಾರೋ ಒಬ್ಬ ಹೆಗ್ಗಡೆ ಸುವರ್ಣದಾನ ಮಾಡಿದ ವಿಷಯದ ಬಗ್ಗೆ ತಿಳಿಸುತ್ತದೆ.[೧೪೧]

ಜಗದೇಕಮಲ್ಲನ ಕಾಲದ ಕ್ರಿ.ಶ.೧೧೪೨ರ ಕಣಿವೆಯ ಶಾಸನವು "ಶ್ರೀಮದಚ್ಚುಪನ್ನಾಯದಧಿಷ್ಠಾಯಕಂ ದಣ್ಡನಾಯಕ ಲಕ್ಷ್ಮೀಧರದೇವರ ಹೆಗ್ಗಡೆ ಎಂ[ಟೂ]ರದ ಕೇಣಿಕಾಱ ಮಾರಮರಸರು ಶ್ರೀಮೂಲಸ್ಥಾನದೇವರ್ಗ್ಗೆ ನಂದಾದೀವಿಗೆಗೆ ನಡೆವನ್ತಾಗಿ ಆ ದೇವರ ತೋಂಟದ ಕೋಲಲು ಪನ್ನಾಯದೊಳಗೆ ಹೇಱುಂಗೆ ಒಂದು ಪಣಮಂ ದೇವರ್ಗ್ಗೆ ನಡವಂತಾಗಿ ಜ್ಞಾನಸಕ್ತಿಪಂಡಿತದೇವರ ಕಾಲಂಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಶ್ರೀಮೂಲಸ್ಥಾನದೇವರಿಗೆ ಆ[ಚಂ]ದ್ರಾರ್ಕ್ಕಸ್ಥಾಯಿವರಂ ಸಲುವಂತಾಗಿ ಬಿಟ್ಟರು." ಎಂದು ದಂಡನಾಯಕ ಲಕ್ಷ್ಮೀಧರ ಹೆಗ್ಗಡೆ

ಎಂಟೂರದ ಕೇಣಿಕಾರ ಮಾರಮರಸರು ಶ್ರೀಮೂಲಸ್ಥಾನದೇವರಿಗೆ ನಂದಾದೀವಿಗೆಗೆ ಒಂದು ಪಣವನ್ನು ಕೊಟ್ಟಿದ್ದನ್ನು ಹೇಳುತ್ತದೆ.[೧೪೧]

ಕ್ರಿ.ಶ.೧೧೪೪ರ ಎಲೆಶಿರೂರ ಶಾಸನವು "ಶ್ರೀಮತು ಭೋಗೇಶ್ವರದೇವರ ನಂದಾದೀವಿಗೆಗೆಂದು ಆಸ್ಥಾನದಾಚಾರ್ಯರಪ್ಪ ಅಘೋರಪಂಡಿತದೇವರ ಕಾಲಂಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ತನಗೆ ನಡೆನ ಬೀರವಣವಣವಂ ದೇವರ ತೋಂಟದೆಲೆಯೆನಿತು ಹೇಱಾದಂಡಂ ವನಿತಕ್ಕೆ ಹೇಱಿಗೊಂದು ಪಣವಿನ ಬೀರವಣಮನಾಚಂದ್ರಾರ್ಕ್ಕತಾರಂಬರಂ ಬಿಟ್ಟರು॥". ಪೆರ್ಗ್ಗಡೆಸಾಮಿಯಣ್ಣ ಭೋಗೇಶ್ವರದೇವರ ನಂದಾದೀಪಕ್ಕೆ ಮತ್ತು ಸನ್ತಗಾಉಣ್ಡಂ ಪಣಗಳನ್ನು ಕೊಟ್ಟ ವಿಷಯದ ಬಗ್ಗೆ ತಿಳಿಸುತ್ತದೆ.[೧೪೨] ಹೊಸೂರಿನ ಶಾಸನವು ಭೋಗೇಶ್ವರದೇವರ ನಂದಾದೀಪಕ್ಕೆ ಪಣಗಳನ್ನು ಕೊಟ್ಟ ವಿಚಾರ ಹೇಳುತ್ತದೆ.

ಕ್ರಿ.ಶ.೧೧೪೮ರ ಹೊಸೂರು ಶಾಸನವು "ಹೊಲ್ಲಗಾವುಣ್ಡ ತಮ್ಮ ಹಿರಿಯಅಣ್ಣ ಬೊಪ್ಪಗಾವುಣ್ಡ ತಮ್ಮಯ್ಯಂ ಮಹಾಪ್ರಭುನಾಕಿಗಾವುಣ್ಡಂಗಂ ಪರೋಕ್ಷನಿಯಮಾಗಿ ತಂದೆಯ ಧರ್ಮವುಂ ಪುನರ್ಬ್ಭರಣ ಮಾಡಿ ಮೂಲಸ್ಥಾನದೇವರಿಗೆ ಹೂದೋಟವನ್ನು ದಾನವಾಗಿ ಬಿಟ್ಟ" ಬಗ್ಗೆ ತಿಳಿಸುತ್ತದೆ.[೧೪೩]

ಕ್ರಿ.ಶ.೧೧೫೨ರ ಲಕ್ಕುಂಡಿಯ ಶಾಸನವು ಮೂರನೇ ತೈಲನ ಕಾಲಕ್ಕೆ ಸೇರಿದ್ದು ಇದರಲ್ಲಿ ಪೆರ್ಗ್ಗಡೆಯರ ಶ್ರೀತ್ರಿಭುವನಕೇಶದೇವನ ಶ್ರೀಮತ್ಸೋಮೇಶ್ವರಪಂಡಿತರ ಪಾದಗಳನ್ನು ತೊಳೆದು ದೇವರ ನೈವೇದ್ಯಕ್ಕಾಗಿ ೧೨೦ ಗದ್ಯಾಣ ಹೊನ್ನು, ಚಿನ್ನದ ವಟ್ಟ ಮೂರು ಹೊನ್ನನ್ನು ದಾನಗೊಟ್ಟ ವಿಚಾರ ತಿಳಿಸುತ್ತದೆ.[೧೪೪] ಇದೇ ಶಾಸನವು ತ್ರಿಭುವನ ಕೇಶವಾದಿಗಳು ಚಂದ್ರಮೌಳೇಶ್ವರ ದೇವರಿಗೆ ಪ್ರತಿವರ್ಷ ನೂರಇಪ್ಪತ್ತು ಗದ್ಯಾಣ ಹೊನ್ನು ಚಿನ್ನದ ವಟ್ಟ ಮೂರು ಹೊನ್ನನ್ನು ಕೊಟ್ಟ ವಿಷಯವನ್ನು ತಿಳಿಸುತ್ತದೆ.[೧೪೫]

ಕ್ರಿ.ಶ.೧೧೫೩ರ ಲಕ್ಷ್ಮೇಶ್ವರದ ಶಾಸನವು ಮಹಾಮಂಡಳೇಶ್ವರ ಜಯಕೇಸಿದೇವರು ಮಹಾಮಣ್ಡಳೇಶ್ವರ ವೀರಪಾಣ್ಡ್ಯದೇವರು ತಮಗೆ-ಪುಣ್ಯ ನಿಮಿತ್ತವಾಗಿ "ಶ್ರೀಮದ್ರಾಜಧಾನಿಪಟ್ಟಣಂ ಪುಲಗೆಱೆಯ ಶ್ರೀಸ್ವಯಂಭುದಕ್ಷಿಣಸೋಮನಾಥದೇವರ ಅಂಗಭೋಗ[ಕ್ಕಂ]ಶ್ರೀಗಂಧಕ್ಕೆ ತಳವ್ರಿತಿಯ ಸೊಳೆವೊಲದ ದಸವನ್ಧದ ತಮಗೆ ನಡೆವ ಎಂಟ್ಟು ಗದ್ಯಾಣ ಹೊನ್ನಮಂ ಅಲ್ಲಿಯ ಸ್ಥಾನಾಚಾರ್ಯ್ಯಜ್ಞಾನಸೋಮಪಣ್ಡಿತದೇವರ ಕಾಲಂಕರ್ಚ್ಚಿ ಧಾರಾಪೂರ್ವಕಂ ಮಾಡಿ ಸರ್ವ್ವನಮಸ್ಯ ಸರ್ವ್ವಬಾಧಾಪರಿಹಾರಮಾಗಿ ಬಿಟ್ಟರು". ಪುಲಿಗೆರೆಯ ಶ್ರೀಸ್ವಯಂಭೂ ದಕ್ಷಿಣಸೋಮನಾಥದೇವರ ಅಂಗಬೋಗಕ್ಕಂ, ಶ್ರೀಗಂಧಕ್ಕೆ ಎಂಟು ಗದ್ಯಾಣ ಹೊನ್ನನ್ನು ಅಲ್ಲಿಯ ಸ್ಥಾನಾಚಾರ್ಯ್ಯ ಜ್ಞಾನಸೋಮಪಂಡಿತ ದೇವರ ಕಾಲಂಕರ್ಚ್ಚಿ ಧಾರಾಪೂರ್ವಕವಾಗಿ ಕೊಟ್ಟ ಬಗ್ಗೆ ತಿಳಿಸುತ್ತದೆ.[೧೪೬]

ಕ್ರಿ.ಶ.೧೧೬೨ರ ಬಿಜ್ಜಳನ ಶಾಸನವು ಭೋಗೇಶ್ವರದೇವರಿಗೆ ಮಹಾದೇವ ನಾಯಕನು ವರ್ಷ ಐದು ಪಣಗಳನ್ನೆ ಕೇರಿಯ ಹಿರಿಯ ಸೇನಭೋಗ ಮಲ್ಲಿಮಯ್ಯನಾಯಕ ಪ್ರತಿವರ್ಷ ನಡೆಯುವಂತೆ ಹೇಳಿಬಿಟ್ಟ ವಿಚಾರದ ಬಗ್ಗೆ ಹೇಳುತ್ತದೆ.[೧೪೭]

ಕ್ರಿ.ಶ.೧೧೭೩ರ ವೀರಬಿಜ್ಜಳನ ಶಾಸನವು ಹರ್ತಿಯಲ್ಲಿದ್ದು ಅದು "ಹರತಿಯ ಹನ್ನಿರ್ಬ್ಬರ್ಗ್ಗಾವುಂಡಗಳು. ಅರವತೋಕ್ಕಲುಂ, ಉಗುರಮೂನೂರ್ವ್ವರುಂ, ಸಾಸಿರ್ವ್ವರುಂ ಮುಖ್ಯವಾಗಿ ಬಳೇಸ್ವರದೇವನುಂ ಪಂನಾಯದ ಹೆಗ್ಗಡೆ ಕಾಡಿಲೀರಚೌಡಮಯ್ಯನಾಯಕರು ಶ್ರೀ ಯೀಗೊಯ್ದೇಸ್ವರದೇವರಾಚಾರ್ಯ್ಯರ್ಜ್ಜಾತವೇದಪಣ್ಡಿತರ ಕಾಲಂಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ದೇವರ ತೋಟದ ಸನ್ನಾಯಮಂ ಸರ್ವ್ವನಮಶ್ಯವಾಗಿ ದೇವರ ನಿವೇದ್ಯಕ್ಕೆ ಬಿಟ್ಟರು. ಹಚ್ಚಿಗೌಣ್ಡ ಬೀರವಣದ ಹೆಗ್ಗಡೆ ರೇಮರಸ.[೧೪೮] ಗೋಯಿದೇಶ್ವರ ದೇವಾಲಯಕ್ಕೆ ನೀಡಿದ ದಾನವನ್ನು ಹೇಳುತ್ತದೆ.

ಕ್ರಿ.ಶ.೧೧೭೯ರ ಸಂಕಮ ದೊರೆಯ ಕಾಲದ ಶಾಸನವು ಲಕ್ಕುಂಡಿಯಲ್ಲಿದ್ದು ಮಾಳಯಗೇರಿಯ ನಾಯಕ ರುದ್ರದೇವ ಪ್ರಮುಖ ೧೦೦ಜನ ವೈಶ್ಯರು ಬಿಟ್ಟ ಹಲವಾರು ದಾನಗಳ ಬಗ್ಗೆ ತಿಳಿಸುತ್ತದೆ.[೧೪೯]

ಕ್ರಿ.ಶ.೧೧೮೪ರ ಲಕ್ಕುಂಡಿಯ ಮತ್ತೊಂದು ಶಾಸನವು ನಾಲ್ಕನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು, ಇದು "ಇಂತು ಸಕಳಗುಣಕ್ಕೆ ನೆಲೆಯಾದ[ತ]ಳಬೋಗದ ಕೇಣಿಕಾಜಿಬಸವರಸ ಸಿದ್ಧಯ್ಯಂಗಳು ಶ್ರೀಮತ್ರಿಭುವನಮಲ್ಲದೇವವರ್ಷದ ೩ನೆಯ ಕ್ರೋಧಿ ಸಂವತ್ಸರದ ಪುಷ್ಯ ಸುದ್ಧ ಪಂಚಮಿ ಸೋಮವಾರ ಉತ್ತರಾಯಣ ಸಂಕ್ರಮಣ ಬ್ಯತಿಪಾತದಂದಯಿಸ್ತರ ಕೇಷವಾದಿತ್ಯದೇವರ ನಂದಾದೀವಿ[ಗೆ]ಗಾಚಂದ್ರಾರ್ಕ್ಕಾತಾರಂಬರಂ ಸಲುವಂತಾಗಿ ತಂಮ ತಳಭೋಗದ ಸ್ಥಳದಲು ಬಿಟ್ಟ ಪಣ." ಎಂದು ಬಸವರಸ ಸಿದ್ದಯ್ಯಂಗಳು ಕೇಶವಾದಿತ್ಯದೇವರ ನಂದಾದೀವಿಗೆಗೆ ಅಲ್ಲದೆ ಹಲವಾರು ಜನ ಶೆಟ್ಟರು ಸೇರಿ ಬಿಟ್ಟ ಹಣದಾನವನ್ನು ಹೇಳುತ್ತದೆ.[೧೫೦]

ಕ್ರಿ.ಶ.೧೧೮೪ರ ಗದುಗಿನ ಶಾಸನವೊಂದು ತ್ರಿಕೂಟೇಶ್ವರ ದೇವರಿಗೆ ಕೊಟ್ಟ ಹಲವು ದಾನಗಳನ್ನು ತಿಳಿಸುತ್ತದೆ.[೧೫೧] ಈ ಶಾಸನವು ಬಹಳ ತೃಟಿತವಾಗಿರುವುದರಿಂದ ಹೆಚ್ಚಿನ ವಿಷಯಗಳನ್ನು ತಿಳಿಯಲು ಅಸಾಧ್ಯವಾಗಿದೆ.

ಲಕ್ಕುಂಡಿಯ ಕ್ರಿ.ಶ.೧೧೮೪ರ ಶಾಸನವು ಆಚಿಸೆಟ್ಟಿಯರು ಶ್ರೀಮಧುಸೂಧನದೇವರೊಳಗಣ ಮಲ್ಲಿಕಾರ್ಜುನದೇವರ "ನೈವೇದ್ಯಕ್ಕೆ ಬಿಟ್ಟ ಗ ೧ ಸಂಕ್ರಾಂತಿಯಲು ಅಂಗಭೋಗಕ್ಕೆ ಬಿಟ್ಟ ಗ ೧ ಅನ್ತು ಗ ೨ ಆಣಿಕಾರ ಮಹದೇವಸೆಟ್ಟಿ ಹ ೨ ಆವನಾಗಿಯುಂ ಹಿರಿಕಮ್ಮ. . ದೆ. . ಣಿಯಂ ಕಾದಲು ತಂತಮ್ಮ ಧರ್ಮ್ಮವಾಗಿ ಪ್ರತಿಪಾಳಿಸುವರು" ಎಂದು ಕೊಟ್ಟ ಹಣದಾನದ ಬಗ್ಗೆ ತಿಳಿಸುತ್ತದೆ.[೧೫೨]

ಕ್ರಿ.ಶ.೧೧೮೫ರ ಗದುಗಿನ ಶಾಸನವು "ಶಂಕರನಾರಾಯಣದೇವ ಪಾದಾರಾಧಕರಾದ ವಿಷ್ಣುವರ್ಧನ ಬೀಚಿಸೆಟ್ಟಿಯ. .ರ್ತ್ತಂಮಚ್ಚಿನ . .. . . .ಯವೇಶವರದ. . ವರಂಗಭೋಗಕ್ಕೆ ಬಿಟ್ಟ ಹಣ

೫" ಎಂದು ಗದುಗಿನ ಯಾವುದೊ ದೇವಾಲಯಕ್ಕೆ ಬಿಟ್ಟ ಹಣದ ದಾನವನ್ನು ತಿಳಿಸುತ್ತದೆ. ಇದೇ ಕಾಲದ ಲಕ್ಕುಂಡಿಯ ಶಾಸನವು ಪ್ರಸನ್ನಕೇಶವದೇವರಿಗೆ ನೀಡಿದ ಹಣದಾನವನ್ನು ತಿಳಿಸುತ್ತದೆ. ಅಲ್ಲದೆ ಕ್ರಿ.ಶ.೧೧೮೬ರ ಶಾಸನವೊಂದು ಶ್ರೀಮಂನನ್ನೇಶ್ವರ ದೇವರಿಗೆ ಬಂಡಿಯ ಬಸದಿಶೆಟ್ಟಿಯರ ಮಗ ಶಂಕರಸೆಟ್ಟಿ ಬಿಟ್ಟ ಹಣದಾನದ ವಿಚಾರವನ್ನು ತಿಳಿಸುತ್ತದೆ.[೧೫೩]

ಕ್ರಿ.ಶ.೧೧೮೭ರ ಲಕ್ಷ್ಮೇಶ್ವರದ ಶಾಸನವು ಮೆಳವೀಡಿನ "ಶ್ರೀಕತ್ತಮೇಶ್ವರದೇವರ್ಗ್ಗೆ ಅಯ್ವತ್ತೊಕ್ಕಲು ನೆರದಿರ್ದ್ದು ನಂದಾದೀವಿಗೆ ನಡೆವಂತಾಗಿ [ಸೌ]ಟಗೆಣ್ಣೆಯಂ [ಪಂಚಠ]–ಸ್ಥಾನವಶೇ[ಸ]ದೇವಪುತ್ರಕರಧ್ಯಕ್ಷದೊಳು ಅಖಂಡಿತ ತಪಶ್ಚರಣನಿರತ ನಿಯಮೋಕ್ತರಪ್ಪ ಶ್ರೀಮದಘೋರಶಕ್ತಿದೇವರ [ಪಾದಪ್ರಕ್ಷಾಳನಂ] ಮಾಡಿ ಧಾರಾಪೂರ್ವ್ವಕಂ ಕೊಟ್ಟರು ದೇವರ ವೀಳಯಕ್ಕೆಲೆಯ[ಹೇಱಿಂಗ]ಯ್ವತ್ತೆಲೆಯಂ ಆಯಿನೂರ್ವ್ವರು ಕೊಟ್ಟರು." ಎಂದು ನಡೆವಂತಾಗಿ ನಂದಾದೀಪಕ್ಕೆ ಹಲವಾರು ಜನ ಶೆಟ್ಟರು ಮತ್ತು ಐವತ್ತೊಕ್ಕಲು ನೀಡಿದ ಹಲವಾರು ದಾನಗಳ ಬಗ್ಗೆ ತಿಳಿಸುತ್ತದೆ.[೧೫೪]

ಗದಗಿನ ಕ್ರಿ.ಶ.೧೧೯೯ರ ವೀರಬಿಜ್ಜಳನ ಕಾಲದ ಶಾಸನವು ಶ್ರೀಮಸ್ಸಿದ್ಧಾಂತಿಚಂದ್ರಭೂಷಣಪಂಡಿತರಿಗೆ ನೀಡಿದ ದಾನಗಳ ಬಗ್ಗೆ ತಿಳಿಸುತ್ತದೆ.[೧೫೫]

ಕ್ರಿ.ಶ.೧೧೯೯–೧೨೦೦ರ ಬೆಂತೂರಿನ ಶಾಸನ, ಹೊಯ್ಸಳ ದೊರೆ ವೀರಬಲ್ಲಾಳನ ಕಾಲದಲ್ಲಿ ಬೆನತೂರಿನ ಸ್ವಯಂಭೂದೇವರ ನೈವೇದ್ಯಕ್ಕೆಂದು ಅಣ್ಣಿಗೆರೆಯ ಜಂಗುಳಿಯ ಬಾಗಣ, ತೆಲ್ಲಿಗ ಕಸಪಣ, ಕೋಳಿವಾಡದ ಇನ್ನೊರ್ವ್ವರು, ಆಮಕ್ಕನ ಮಕ್ಕಳು, ಗೌಳಿಯ ಮಾರಣ್ಣ, ದೋಚಣ್ಣ, ಕೇಸಿಯಣ್ಣ, ಅಮಿತ್ರಯ್ಯ, ಮಲ್ಲಣ, ಅಣ್ಣೀಗೆರಿಯ ಐವತ್ತೊಕ್ಕಲು, ಹೆಡಗಿಯ ಕೇಮೆಯನಾಯಕ, ಕಬ್ಬಳಗೇತ ಹೊಲ್ಲಣ, ಎರಗುಪ್ಪಿಯ ಬೊಲ್ಲೆಯಮ್ಯೆಲೆಯನಾಯಕ, ಮುಂತಾದವರು ದೇವರ ವಿವಿಧ ಕೆಲಸಗಳಿಗೆ ಕೊಟ್ಟ ಹಣದಾನದ ಬಗ್ಗೆ ತಿಳಿಸುತ್ತದೆ.[೧೫೬]

ಕ್ರಿ.ಶ.೧೨ನೇ ಶತಮಾನದ ಲಕ್ಕುಂಡಿಯ ಶಾಸನವೊಂದು ನನ್ನೇಶ್ವರದೇವರಿಗೆ ಸಾಸಿರ್ವ್ವರು ಸರ್ವಭಾದಾ ಪರಿಹಾರಕ್ಕಾಗಿ ಎರಡು ಅಂಗಡಿಗಳನ್ನು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ. ಮತ್ತೊಂದು ಶಾಸನ ಮೂಲಸಂಘದ ದೇವಗಣ ಶ್ರೀಸಂಕದೇವರ ಪ್ರತಿಮೆಯನ್ನು ದಾನಮಾಡಿದ ಬಗ್ಗೆ ತಿಳಿಸುತ್ತದೆ.[೧೫೭] ಮತ್ತೊಂದು ಶಾಸನ ಎರಡನೇ ಜಗದೇಕಮಲ್ಲನ ಕಾಲಕ್ಕೆ ಸೇರಿದ್ದು, ಇದು ಬಹಳ ತ್ರುಟಿತಗೊಂಡಿದ್ದು, ಪುಲಿಗೆರಿಯ ದೇವಸ್ಥಾನ ಮತ್ತು ಸೇವಕರಿಗೆ ವೃತ್ತಿಗಳನ್ನು ದಾನಮಾಡಿದ ಬಗ್ಗೆ ತಿಳಿಸುತ್ತದೆ.[೧೫೮]

ಕ್ರಿ.ಶ.೧೨೦೫ರ ಬೆಂತೂರಿನ ಎರಡನೇ ವೀರಬಲ್ಲಾಳನ ಶಾಸನವು ಸ್ವಯಂಭೂದೇವರಿಗೆ ದೇವರಾಳು ಸೋಮಯ್ಯ ಕೊಟ್ಟ ಹಣದಾನವನ್ನು ಮತ್ತು ಇದನ್ನು ಬೇಳವಡ್ಡಿಯವರು ಉಪಹಾರವಂ ನಡೆಸುವರು[೧೫೯] ಎಂಬುದಾಗಿ ಹೇಳಿದೆ.

ಕ್ರಿ.ಶ.೧೨೧೩ರ ಗದುಗಿನ ಯಾದವ ದೊರೆ ಸಿಂಘಣನ ಕಾಲಕ್ಕೆ ಸೇರಿದ ಶಾಸನವು "ಶ್ರೀಸ್ವಯಂಭೂ ತ್ರಿಕೂಟೇಶ್ವರದೇವರಿಗೆ ಆಸ್ಥಾನದಾಚಾರ್ಯ್ಯ ಶ್ರೀಮತ್ಸಿದ್ಧಾಂತಕ್ರಿಯಾಶಕ್ತಿಪಂಡಿತದೇವರ ಕಯ್ಯಲು ಐನೂಱ ಇಪ್ಪತ್ತೆಂಟು ಗದ್ಯಾಣ ಹೊನ್ನ ಸುವರ್ಣಪೂಜೆಯಾಗಿ [ಕೊಂ]ಡು ಪಾದಪ್ರಕ್ಷಾಳನೆ" ಮಾಡಿ ಸುವರ್ಣದಾನವನ್ನು ಕೊಟ್ಟ ವಿಚಾರವನ್ನು ಹೇಳುತ್ತದೆ. ಅಲ್ಲದೆ ಒಂದು ಮನೆಯನ್ನು ಹೂದೋಟವನ್ನು ವೀಳಯಕ್ಕೆ ಎಲೆಯಡಿಕೆಯ ತೋಟವನ್ನು ದಾನವಾಗಿ ಬಿಟ್ಟ ವಿಷಯವನ್ನು[೧೬೦] ಹೇಳುತ್ತದೆ.

ಕ್ರಿ.ಶ.೧೨೧೫ರ ಲಕ್ಷ್ಮೇಶ್ವರದ ಶಾಸನವು ಯಾದವ ದೊರೆ ಸಿಂಘಣನ ಕಾಲಕ್ಕೆ ಸೇರಿದ್ದು, ಈ ಶಾಸನವು ಶ್ರೀಮತ್ತ್ಯೇದಾರದೇವರ ನಂದಾದೀವಿಗೆಗೆ, ನಿತ್ಯನೈಮಿತ್ತಿಕಕ್ಕೆ ಆ ಊರಿನ ತೆಲ್ಲಿಗರಯ್ಯತೊಕ್ಕಲುಗಳು ನಿರ್ಬ್ಬರ ಭಕ್ತಿಯಿಂದ ಆ ಪುರಂಗಳ ಗಾಣಂಗಳೊಳೊಂದು ಸೊಟಿಗೆಯೆಣ್ಣೆಯಂ ಪ್ರತಿದಿನಮಾಚಂದ್ರಾರ್ಕತಾರಂ ಕೊಟ್ಟ ಬಗ್ಗೆ ತಿಳಿಸುತ್ತದೆ.[೧೬೧]

ನಾಗಾವಿಯ ಕ್ರಿ.ಶ.೧೨೧೫ರ ಶಾಸನವು ಮಹಾಬಳದೇವರಿಗೆ ಆ ಊರಿನ ಕಮ್ಮಾರ, ಬೊಂಮ್ಮೋಜ, ಮಹಾಬಳದೇವರ ಕಮಟಕ್ಕೆ ಕೆಲಸ ಮಾಡಿದ ಹೊಜೆಹುಂಜ ಆದಾಯವನ್ನು ಬಿಟ್ಟಂತದ್ದನ್ನು ತಿಳಿಸುತ್ತದೆ.[೧೬೨] ಅಲ್ಲದೆ ಯಾದವ ಸಿಂಘಣನ ಕಾಲದಲ್ಲಿ ಮಲ್ಲಿಸೆಟ್ಟಿಯು ದೇವಾಲಯಕ್ಕೆ ನೀಡಿದ ಯಾವುದೊ ಒಂದು ದಾನವನ್ನು ಹೇಳುತ್ತದೆ.

ಕ್ರಿ.ಶ.೧೨೨೪ರ ಮುಳಗುಂದ ಶಾಸನವು ಸ್ವಯಂಭೂದೇವರ ನಂದಾದೀವಿಗೆಯಾ ಚಂದ್ರಾರ್ಕತಾರಂಬರಂ ನಡೆಸಲು ನಾಗರಸರು[೧೬೩] ನೀಡಿದ ದಾನದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೧೨೨೫ರ ಗದುಗಿನ ಶಾಸನವು "ಶ್ರೀಮನ್ಮಹಾಮಂಡಲೇಶ್ವರ ಕಾದಂಬಕುಳಕಮಳಮಾರ್ತ್ತಂಡ ಬನವಾಸಿ ಪುರವರಾಧೀಶ್ವರ ಜಯಂತಿ ಮಧುಕೇಶ್ವರ ದೇವಲಬ್ದವರ ಪ್ರಸಾದನುಮಪ್ಪ ಮಲ್ಲಿದೇವರಸರ ಪ್ರಧಾನ ಘೋಡೆಯರಾಯ ಪಟ್ಟಸಾಹಣಿಮಲ್ಲಯ್ಯನ ಹೆಂಡತಿ ಶ್ರೀಮತ್ಸಿದ್ಧಾಂತಿಕ್ರಿಯಾಶಕ್ತಿ ಪಂಡಿತದೇವರ ಮಗಳು ಪಾತ್ರ ಚೂಡಾಮಣಿ ಚಂಡವ್ವೆ ಶ್ರೀ ಸ್ವಯಂಭು ತ್ರಿಕೂಟೇಶ್ವರದೇವರಿಗೆ ಧರ್ಮಕೀರ್ತ್ತಿಂಗಳನ್ನು ಎರಡು ಸುವರ್ಣಧ್ವಜವ ಮಾಡಿಸಿ[೧೬೪]" ಕೊಟ್ಟವಿಚಾರವನ್ನು ಹೇಳುತ್ತದೆ.

ಕ್ರಿ.ಶ.೧೨೩೬ರ ಹರ್ತಿಯ ಶಾಸನವು ಸಿಂಘಣನ ಕಾಲಕ್ಕೆ ಸೇರಿದ್ದು ಹರತಿಯ ಹಂನಿರ್ಬ್ಬಗಾವುಂಡುಗಳೂ, ಅರವತ್ತೊಕ್ಕಲು, ಪುಗುರಮೂನೂರ್ವ್ವರು, ದೋಣಿಸಾಸಿರ್ವ್ವರಂ, ಮೊತ್ತಕಾವಿ ಚಾವುಂಡಯ್ಯ ಮೂಲಸ್ಥಾನ ದೇವರಾಚಾರ್ಯ್ಯ ಸೋಮೇಶ್ವರಪಂಡಿತ ಪದಪ್ರಕ್ಷಾಳನಂ

ಮಾಡಿ ದೇವರ ಪವಿತ್ರರೋಪಣಕೆ ಯೇಣೆಗೆ ಹಗ(ಕಣಜ)ವನ್ನು ಸರ್ವಸಮಸ್ಯವಾಗಿ[೧೬೫] ಬಿಟ್ಟರು ಎಂದು ತಿಳಿಸುತ್ತದೆ.

ಕ್ರಿ.ಶ.೧೨೪೬ರಲ್ಲಿನ ನಾಗಾವಿಯ ಶಾಸನವು ಬಹಳ ತೃಟಿತಗೊಂಡಿದ್ದು ಅದು ಮಹಾಬಲದೇವರಿಗೆ ಸುಂಕದಾನ[೧೬೬] ಕೊಟ್ಟಿದ್ದನ್ನು ಹೇಳುತ್ತದೆ.

ಕ್ರಿ.ಶ.೧೩ನೇ ಶತಮಾನದ ಗದುಗಿನ ಶಾಸನವೊಂದು ಹಲವಾರು ಜನ ಸೆಟ್ಟಿಯರು ಭೂಮಿಯನ್ನು ಮತ್ತು ಹಣವನ್ನು ದಾನ ಕೊಟ್ಟಿದ್ದಲ್ಲದೆ ಅರವಟ್ಟಿಗೆಗಾಗೆ ದಾನ ಕೊಟ್ಟ[೧೬೭] ವಿಚಾರವನ್ನು ತಿಳಿಸುತ್ತದೆ. ಸಂಕಣ, ಗೋಪಣ್ಣ ಮಾದಿಯಣ್ಣ, ಮೂವರು ಸೇರಿ ಅರವಂಟಗೆಗೆ ಮತ್ತು ಜೀ ಘಂಟೆಯನ್ನು ತ್ರೈಪುರುಷದೇವರಿಗೆ[೧೬೮] ಕೊಟ್ಟ ಬಗ್ಗೆ ತಿಳಿಸುತ್ತದೆ. ಮತ್ತೊಂದು ಶಾಸನವು ತ್ರೈಪುರುಷದೇವರಿಗೆ ಗಗ್ಗರ ನಾಣಮಯ್ಯ, ಪಾಂಡವರ ಮಾದಿಯಂಣನಿಂತುರ್ಬ್ಬರುಂ, ಮನೆಯನ್ನು ಮತ್ತು ಬಣವೆವೊಟ್ಟನ್ನು ಬಿಟ್ಟ ವಿಷಯವನ್ನು ಮತ್ತು ಪಾಂಡವರ ಕಾಯಂಣ ಮಕ್ಕಳು ಸಂಕಣ, ಗೋಪಣ, ಮಾದಿಯಂಣ, ಮೂವರು ಸೇರಿ ಅರವಂಟಿಗೆಗೆ ಮತ್ತು ಬೆಳ್ಳಿ ಘಂಟೆಯನ್ನು ತ್ರೈಪುರುಷ ದೇವರಿಗ[೧೬೯] ಕೊಟ್ಟ ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೧೪೩೨ರ ಲಕ್ಷ್ಮೇಶ್ವರ ಶಾಸನವು ಸೋಮನಾಥ ದೇವರ ನೈವೇದ್ಯಕ್ಕೆ ವಿಠರಸ ಎಂಬುವನು ಕಳಸಾಪುರಕ್ಕೆ ಹೋಹ ಅಡಿಕೆಯ ಹೇರು ಯೆರಡನ[೧೭೦] ದಾನಗೊಟ್ಟದ್ದನ್ನು ತಿಳಿಸುತ್ತದೆ.

ಕ್ರಿ.ಶ.೧೫ನೇ ಶತಮಾನದ ಶಾಸನವೊಂದು ಮಲ್ಲಿಕಾರ್ಜುನದೇವರಿಗೆ ಚಉಡಿ ಕದಂಬ ನಾಯಕರು ದಾನಕೊಟ್ಟ ವಿಚಾರವನ್ನು ತಿಳಿಸುತ್ತದೆ.

ಕ್ರಿ.ಶ.೧೫೧೩ರ ಶಾಸನವೊಂದು ಸಿದ್ದೇಶ್ವರ ದೇವರಿಗೆ ಹೂದೋಟವನ್ನು ದಾನಕೊಟ್ಟ ಬಗ್ಗೆ ತಿಳಿಸುತ್ತದೆ.[೧೭೧]

ಕ್ರಿ.ಶ.೧೫೩೯ರ ಗದುಗಿನ ಶಾಸನವು ಅಚ್ಯುತರಾಯಮಹಾರಾಯರು ಆನಂದನಿಧಿ ಎಂಬ ದಾನವನ್ನು ಭೂಸುರರಿಗ[೧೭೨] ಕೊಟ್ಟು ತೃಪ್ತಿಪಡಿಸಿದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೧೬ನೇ ಶತಮಾನದ ಮುಂಡರಗಿಯ ಶಾಸನವೊಂದು ಗವುಡ, ಬಣಜಿಗ, ಕುಂಬಾರಾದಿಗಳು[೧೭೩] ನೀಡಿದ ದಾನ ಎಂದು ಹೇಳುತ್ತದೆ.

ಈ ಮೇಲ್ಕಂಡ ಎಲ್ಲಾ ಶಾಸನಗಳ ಉದಾಹರಣೆಗಳಿಂದ ತಿಳಿದುಬರುವ ವಿಷಯಗಳೆಂದರೆ ಉಳ್ಳವರು ಭೂಮಿ, ಹಣವನ್ನು ದಾನವಾಗಿ ನೀಡಿದರೆ, ಮಧ್ಯಮ ವರ್ಗದ ಜನರು, ಕುಲಕಸುಬಿನ ಜನರು ತಮ್ಮ ಕುಲದ ಕಸುಬಿನ ಉತ್ಪನ್ನಗಳನ್ನು ದಾನವಾಗಿ ನೀಡಿರುವರು. ಉದಾಹರಣೆಗೆ ತೆಲ್ಲಿಗರು ಎಣ್ಣೆಗಾಣವನ್ನು, ಎಣ್ಣೆಯನ್ನು ತಿಗುಳರು ಅಡಕೆಯನ್ನು ದಾನನೀಡಿದ ವಿಷಯ ತಿಳಿದುಬರುತ್ತದೆ. ಪಾತ್ರಚೂಡಾಮಣಿಯೆಂದು ಪ್ರಸಿದ್ಧಳಾದ ಚಂಡವ್ವೆಯು ಸುವರ್ಣ ಧ್ವಜಸ್ತಂಭಗಳನ್ನು ಮಾಡಿಸಿದ

ವಿಷಯವಿದೆ. ಹೀಗೆ ತಮ್ಮ ಕೈಲಾದ ವಸ್ತುಗಳನ್ನು ದೇವಾಲಯಕ್ಕೆ, ದೇವರಸೇವೆಗೆ ದಾನ ನೀಡುತ್ತಿದ್ದರು. ಇದು ಪುಣ್ಯದ ಕೆಲಸವೆಂದು ನಮ್ಮ ಪೂರ್ವಜರು ಭಾವಿಸಿದ್ದರು.

### ೨.೪. ವೈಷ್ಣವ ದಾನ ಶಾಸನಗಳು

ವೈಷ್ಣವ ದೇವಾಲಯ ಕಟ್ಟಿಸಿದ ವಿಷಯವನ್ನು ತಿಳಿಸುವ ಶಾಸನಗಳು ಈ ಭಾಗದಲ್ಲಿ ಕಂಡುಬರುವುದಿಲ್ಲ. ಅದರ ಬದಲಿಗೆ ಜೀರ್ಣೋದ್ಧಾರ ಇತರ ವಿಚಾರಗಳ ಬಗ್ಗೆ ಶಾಸನಗಳಿವೆ. ಕ್ರಿ.ಶ.೧೦೩೭ರ ಒಂದು ಶಾಸನವು ದೋಯಿಯಪ್ಪಪೆರ್ಗಡೆ ಎಂಬ ಅಧಿಕಾರಿ ಬಾರನಾರಾಯಣ ದೇವಾಲಯ ನಿರ್ಮಿಸಿದ್ದರ ಬಗ್ಗೆ ತಿಳಿಸುತ್ತದೆಯಾದರೂ[೧೭೪] ಅದರ ಕುರುಹುಗಳು ತಿಳಿಯುವುದಿಲ್ಲ. ಕ್ರಿ.ಶ.೧೧೧೭ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನ ಶ್ರೀರಾಮಾನುಜಾಚಾರ್ಯರ ಆಜ್ಞೆಯ ಪ್ರಕಾರ ವೀರನಾರಾಯಣ ಗುಡಿಯನ್ನು ಕಟ್ಟಿಸಿದನು. ಈ ದೇವಾಲಯದ ಮೂರ್ತಿಯು ರಾಜಕೀಯ ದಾಳಿಯಿಂದಾಗಿ ಭಗ್ನವಾದಾಗ ಸ್ಥಾನಿಕ ಆಚಾರ್ಯನಾದ ಕಾಳಾಮುಖ ಶೈವಪಂಥದ ಕ್ರಿಯಾಶಕ್ತಿ ಹಾಗೂ ವಿಶ್ವಕರ್ಮ ಸಮಾಜದ ವಾಮದೇವ ಎನ್ನುವವರು ಈ ಮೂರ್ತಿಯನ್ನು ಪುನರ್‌ಪ್ರತಿಷ್ಠಾಪನೆ ಮಾಡಿರುವ ಬಗ್ಗೆ ಐತಿಹ್ಯವಿದೆಯಾದರೂ ಅದನ್ನು ಪುಷ್ಟೀಕರಿಸುವ ಯಾವುದೇ ಅಧಾರಗಳು ಇರುವುದಿಲ್ಲ. ಆದ್ದರಿಂದ ದೋಯಿಯಪ್ಪಪೆರ್ಗ್ಗಡೆ ನಿರ್ಮಿಸಿದ ಬಾರನಾರಾಯಣ ದೇವಾಲಯವೇ ಮುಂದೆ ವೀರನಾರಾಯಣ ದೇವಾಲಯವಾಗಿರಬಹುದು ಎಂದು ಊಹಿಸಬಹುದು.

### ೨.೪.೧. ಜೀರ್ಣೋದ್ಧಾರಕ್ಕಾಗಿ ದಾನ

ಲಕ್ಷ್ಮೇಶ್ವರದ ಕ್ರಿ.ಶ.೧೧೭೯ರ ಶಾಸನವೊಂದು ಕಲಚುರಿಯ ವಂಶದ ದೊರೆ ಸಂಕಮನ ಕಾಲದ್ದಾಗಿದ್ದು ಇದು ಬಹಳ ತೃಟಿತವಾಗಿರುತ್ತದೆ. ಇದರಲ್ಲಿ ಲಕ್ಷ್ಮೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ತ್ರಿಲೋಚನ ಪಂಡಿತದೇವರಿಗೆ[೧೭೫] ಏನನ್ನೋ ದಾನ ನೀಡಿದ ಬಗ್ಗೆ ತಿಳಿಸುತ್ತದೆ.

ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಸೊರಟೂರಿನ ಶಾಸನವೊಂದು ಬಹಳ ತೃಟಿತವಾಗಿದ್ದು, ಇದರಲ್ಲಿ ವಿಷ್ಣುದೇವರ ಸ್ಥಾಪನ[೧೭೬] ಮಾಡಿದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೧೨ನೇ ಶತಮಾನದ ಶಾಸನವೊಂದು ಲಕ್ಷ್ಮೀನಾರಾಯಣದೇವರ ವಿಗ್ರಹವನ್ನು ಚಾವುಂಡರಾಯ ಎಂಬ ದಂಡನಾಯಕನು ಪ್ರತಿಷ್ಠಾಪಿಸಿದ[೧೭೭] ಬಗ್ಗೆ ಲಕ್ಷ್ಮೇಶ್ವರದ ಶಾಸನವು ತಿಳಿಸುತ್ತದೆ.

ಕ್ರಿ.ಶ.೧೬-೧೭ನೇ ಶತಮಾನಕ್ಕೆ ಸೇರಿದ ಲಕ್ಷ್ಮೇಶ್ವರದ ಶಾಸನವೊಂದು ತಿಮ್ಮಣ್ಣ ಎಂಬುವನಿಂದ ಶ್ರೀರಾಮಚಂದ್ರದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿದ[೧೭೮] ಬಗ್ಗೆ ತಿಳಿಸುತ್ತದೆ.

### ೨.೪.೨. ನಿರ್ವಹಣೆಗಾಗಿ ಭೂ ದಾನ

ಕ್ರಿ.ಶ.೧೦೩೭ರ ಶಾಸನ ಜಗದೇಕಮಲ್ಲನ ಕಾಲದ್ದಾಗಿದ್ದು ಇದು ದಾಮೋದರ ಶೆಟ್ಟಿಯಿಂದ ತ್ರೈಪುರುಷ ದೇವರಿಗೆ ಭೂದಾನ[೧೭೯] ಮಾಡಿದ ಬಗ್ಗೆ ತಿಳಿಸುತ್ತದೆ. ಹೆಚ್ಚಿನ ವಿಷಯ ತಿಳಿಯಲು ಇದು ಬಹಳ ತ್ರುಟಿತವಾಗಿದೆ.

ಕುರ್ತಕೋಟಿಯ ಕ್ರಿ.ಶ.೧೦೮೨ರ ಶಾಸನವು ೬ನೇ ವಿಕ್ರಮಾದಿತ್ಯನ ಕಾಲದ ಶಾಸನವಾಗಿದ್ದು, ಇದರಲ್ಲಿ "ಶ್ರೀಮಚ್ಚಾಳುಕ್ಯವಿಕ್ರಮಕಾಲಂ ೭ನೆಯ ದುನ್ದುಭಿ ಸಂವತ್ಸರದ ಪುಷ್ಯ ಸು ೩ ಆದಿತ್ಯವಾರ ಮುತ್ತರಾಯ[ಣ*]ಸಂಕ್ರಾನ್ತಿವ್ಯತೀಪಾತದನ್ದು ಶ್ರೀಮನ್ಮಹಾಪ್ರಧಾನಂ ಮನವೆರ್ಗ್ಗಡೆ ದಣ್ಡನಾಯಕಂ ವಾಮದೇವಯ್ಯಂ ಪಾದಪ್ರಕ್ಷಾಳನಂಗೆಯ್ದು ಧಾರಾಪೂರ್ವ್ವಕಂ ಮಾಡಿ ಪುನರ್ದತ್ತಿ ಬಿಟ್ಟ" ಎಂದು ಬಳಿಯ ಎರೆಯಮಯ್ಯಂ ಶ್ರೀಮದೆರೆಯ ವಿಷ್ಣುಕೇಶವದೇವರಿಗೆ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಗೆ ಅಂಗಭೋಗಕ್ಕೆ[೧೮೦] ಬಿಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ.

ಲಕ್ಷ್ಮೇಶ್ವರದ ಕ್ರಿ.ಶ.೧೧೬೧ರ ದೊರೆ ಬಿಜ್ಜಳನ ಕಾಲದ ಶಾಸನವು ದೇವರಾಶಿಪಂಡಿತ ಕಾಳಾಮುಖಸಮಶಿಖಾಮಣಿ ಎನಿಸಿದ ಮುತ್ತಿನಕೆಯ್ಯಇಂದ್ರೇಶ್ವರದೇವರಿಗೆ, ರಾಮದೇವರಿಗೆ, ರಂಗಭೋಗಕ್ಕೆ, ನೈವೇದ್ಯಕ್ಕೆ ನಂದಾದೀವಿಗೆಗೆ[೧೮೧] ಬಿಟ್ಟ ಭೂದಾನದ ವಿಚಾರವನ್ನು ತಿಳಿಸುತ್ತದೆ.

ಕ್ರಿ.ಶ.೧೫ನೇ ಶತಮಾನದ ಡೋಣಿಯ ಶಾಸನವೊಂದು ಶ್ರೀಧರಾಚಾರ್ಯರ ಮಗ ಕುಮಾರಶ್ರೀಪತಿದೇವರಿಗೆ[೧೮೨] ಬಿಟ್ಟ ೧ ಮತ್ತರು ಭೂಮಿಯ ಬಗ್ಗೆ ತಿಳಿಸುತ್ತದೆ.

### ೨.೪.೩. ಗ್ರಾಮದಾನ

ಕ್ರಿ.ಶ.೧೧೬೬ರ ಲಕ್ಷ್ಮೇಶ್ವರದ ಬಿಜ್ಜಳನ ಕಾಲದ ಶಾಸನವು ಬ್ರಾಹ್ಮಣರಿಗೆ ಕರಳವಾಡ[೧೮೩] ಗ್ರಾಮವನ್ನು ದಾನಬಿಟ್ಟ ಬಗ್ಗೆ ಹೇಳುತ್ತದೆ.

### ೨.೪.೪. ವ್ಯಕ್ತಿದಾನ

ಕ್ರಿ.ಶ.೯೦೭ರ ವೆಂಕಟೇಶ್ವರ ದೇವಾಲಯದ ಅರ್ಚಕರಾದ ಚಂದ್ರತೇಜಭಟ್ಟಾರಕರಿಗೆ "ಬೆಳ್ವಲ ಮುನ್ನೂರ್ವರ್ಮಂ ಮಹಾಶ್ರೀಮಂತ ಆಲಿಮಲಗಾವುಂಡ ಪನ್ನೆರಡಮಂ ಮಾಯೀರಮಂ ಆಲಿ ಸಿರಿವೂರಕೆ ಬಾಗಿಗೆ ಪರಿಗಾವುಂಡಗಳು ಭೂದಾನ[೧೮೪] ಕೊಟ್ಟದ್ದನ್ನು ತಿಳಿಸುತ್ತದೆ.

### ೨.೪.೫. ಇತರೆ ದಾನ

ಕ್ರಿ.ಶ.೯೮೨ರ ಕಲ್ಯಾಣ ಚಾಲುಕ್ಯರ ದೊರೆ ೨ನೇ ತೈಲನ ಕಾಲದಲ್ಲಿ ಶೋಭರಸನು ವಿಷ್ಣುಭಟ್ಟರಿಗೆ ಅನ್ನ ಸತ್ರಕ್ಕಾಗಿ ನೀಲಗುಂದ ಗ್ರಾಮದಲ್ಲಿ ನೀಡಿದ[೧೮೫] ಭೂದಾನದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೧೦೯೨ರ ಸೂರಟೂರಿನ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು "ಶ್ರೀಮಚ್ಚಾಳುಕ್ಯವಿಕ್ರಮಕಾಲದ ೧೬ನೆಯ ಪ್ರಜಾಪತಿ ಸಂವತ್ಸರದ ಪುಷ್ಯ ಸುದ್ಧ ದ್ವಾದಸಿ ಬೃಹಸ್ಪತಿವಾರ ಮುತ್ತರಾಯಣ ಸಂಕ್ರಾಂತಿ ವ್ಯತೀಪಾತದಂದು ಊರಿಂ ಮೂಡ ತಂಬುಲಿಗ ಚಟ್ಟಯ್ಯನ ಸತ್ರದ ಪನ್ನೆರಡು ಮತ್ತರ್ಭೂರ್ಇಯಿಂನ್ದಂ ಪಡುವಲು ಸರ್ಬ್ಬನಮಶ್ಯಂ ಸರ್ಬ್ಬಬಾಧಾಪರಿಹಾರಮಾಗೆ ಬಿಟ್ಟ ಮತ್ತರಾಱು" ಎಂದು ತೆಲ್ಲಿಗ ಜಕ್ಕಿಯಬ್ಬೆಯು ತಾನು ಕಟ್ಟಿಸಿದ ಸತ್ರಕ್ಕೆ[೧೮೬] ಬಿಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ.

ಮುಳಗುಂದದ ನಾರಾಯಣದೇವರ ದೇವಾಲಯದಲ್ಲಿರುವ ಶಾಸನವೊಂದು ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು. ಇದರಲ್ಲಿ ಮುಳಗುಂದ ೧೨ನ್ನು ಶ್ರೀಮತ್ಸಕಲಪ್ರಕಾಶಭಟ್ಟಾರಕರು ಆಳುತ್ತಿರುವಾಗ ಜಾತನರಸಿಂಹಭಟ್ಟರು ಪೊನಯೂರಲ್ಲಿ ನಾರಾಯಣದೇವರಿಗೆ ಸರ್ವಸಮಸ್ಯೆಗೆ ದೇವರಂಗಭೋಗಕ್ಕೆ ಬಿಟ್ಟ, ಮೂರು ಜಲಪಾತ್ರೆಗಳ[೧೮೭] ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೧೧೭೪ರ ಲಕ್ಕುಂಡಿಯ ಶಾಸನವು ಕಲಚುರಿ ವಂಶದ ದೊರೆ ರಾಯಮುರಾರಿಸೋವಿದೇವನ ಕಾಲಕ್ಕೆ ಸೇರಿದ್ದು, ಅಸಿತರ ಶ್ರೀಕೇಶವಾದಿತ್ಯದೇವರ ನಂದಾದೀವಿಗೆಗಾಗಿ ಆ ಚಂದ್ರಾರ್ಕತಾರಂಬರಂ ಸಲುವಂತಾಗಿ ಗುಣನಿಧಿಕೇಶವದೇವನಿಂದ ಬಿಟ್ಟ ಹಣದಾನದ ಬಗ್ಗೆ ತಿಳಿಸುತ್ತದೆ.[೧೮೮]

ಕ್ರಿ.ಶ.೧೧೮೫ರ ಶಾಸನವು ಗದುಗಿನ ವೀರನಾರಾಯಣ ಗುಡಿಯ ಪ್ರಾಕಾರದಲ್ಲಿದ್ದು ಇದು ವಿಷ್ಣುವರ್ಧನ ಬೀಚಿಶೆಟ್ಟಿಯು. . . ಯಮೇಶ್ವರ ದೇವರಂಗಭೋಗಕ್ಕೆ ಬಿಟ್ಟ ಹಣ ೫ ದಾನದ ಬಗ್ಗೆ ತಿಳಿಸುತ್ತದೆ.[೧೮೯]

ಕ್ರಿ.ಶ.೧೨ನೇ ಶತಮಾನದ ಶಾಸನವೊಂದು ಲಕ್ಕುಂಡಿಯ ಚಂದ್ರಮೌಳೇಶ್ವರ ಗುಡಿಯ ತೊಲೆಯಲ್ಲಿ ಇದ್ದು, ಆ ಶಾಸನವು ಲೊಕ್ಕಿಗುಂಡಿಯ ಕೇಣಿಕಾರ ವಿನಯಸಿಂಹನಪ್ಪ. ಮೇಚಿಶೆಟ್ಟಿ ತಂನಕ್ಕಸಾಲದ ಕೇಣಿಯಲ್ಲಿ ದೀಪಾವಳಿಯ ಪರ್ವ್ವದಲು ದೇವರ ವೀಳಯಕ್ಕೆ ಬಿಟ್ಟ ೪೦೦ ಅಡಿಕೆದಾನದ ಬಗ್ಗೆ ತಿಳಿಸುತ್ತದೆ.[೧೯೦]

ಕ್ರಿ.ಶ.೧೨೦೨ರ ಕಾಲದ ಹೊಯ್ಸಳ ವೀರಬಲ್ಲಾಳನ ಶಾಸನವೊಂದು ಲಕ್ಕುಂಡಿಯಲ್ಲಿದ್ದು ಇದು ಲೊಕ್ಕಿಗುಂಡಿಯ ಊರೊಡೆಯರು, ಪ್ರಮುಖ ಅಶೇಷ ಮಹಾಜನರು, ಸಾಸಿರ್ವ್ವರು ಸಂವಿಧಾನದಲು ಶ್ರೀಮಧುಸೂಧನದೇವರ್ಗ್ಗೆ ಬಿಟ್ಟ ಗದ್ಯಾಣ ೫ ಪಣ[೧] ದಾನದ ಬಗ್ಗೆ ತಿಳಿಸುತ್ತದೆ.[೧೯೧] ಈ ಶಾಸನ ತೃಟಿತವಾಗಿದೆ.

ಕ್ರಿ.ಶ.೧೨೨೩ರ ಸಿಂಘಣ ದೊರೆಯ ಕಾಲದ ಲಕ್ಕುಂಡಿಯ ಶಾಸನವು ಶ್ರೀಮಧುಸೂದನದೇವರಿಗೆ ಲೊಕ್ಕಿಗುಂಡಿಯ ಪ್ರತಿಷ್ಠಿತ ವ್ಯಾಪಾರಿಗಳು ಸುವರ್ಣದಾನ ನೀಡಿದ ಬಗ್ಗೆ ತಿಳಿಸುತ್ತದೆ.[೧೯೨]

ಕ್ರಿ.ಶ.೧೫ನೇ ಶತಮಾನದ ಲಕ್ಷ್ಮೇಶ್ವರದ ಶಾಸನವೊಂದು ತೃಟಿತಗೊಂಡಿದ್ದು, ಇದು ಸಾರ್ವಜನಿಕರಿಗೆ ಏತದ ಬಾವಿಯನ್ನು ದಾನವಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೧೯೩] ಇದರಲ್ಲಿ ಪ್ರಮುಖ ವಿಷಯಕ್ಕಿಂತ ಶಾಪಾಶಯವೆ ಹೆಚ್ಚಾಗಿ ಇರುತ್ತದೆ.

ಕ್ರಿ.ಶ.೧೫೧೯ರ ಶಾಸನವು ಕೃಷ್ಣದೇವರಾಯನ ಕಾಲದ್ದಾಗಿದ್ದು, ಶ್ರೀಮತುಬಾಗಿನನಾಗೀನಾಯಕರ ಮಗ ನಯನಪ್ಪನಾಯಕರು ಪರುವ[ತ್ತೊ]ಡೆಯರಿಗೆ ಕೊಟ್ಟ ಅಜಿವಟಿಗೆಯ ಹೊಲನ ಧರ್ಮ್ಮಶಾಸನವಾಗಿದೆ.[೧೯೪]

ಕ್ರಿ.ಶ.೧೫೩೯ರ ಗದುಗಿನ ಶಾಸನವು ವಿಜಯನಗರದ ಅರಸು ಅಚ್ಯುತರಾಯನ ಕಾಲದ್ದಾಗಿದ್ದು, ಇದು ಮಾಧವ ಪ್ರೀತ್ಯರ್ಥವಾಗಿ ಆನಂದನಿಧಿಯೆಂಬ ದಾನವನ್ನು ಭೂಸುರರಿಗೆ ಕೊಟ್ಟು, ಅವರನ್ನು ಸಂತೋಷ ಪಡಿಸಿದ ಬಗ್ಗೆ ತಿಳಿಸುತ್ತದೆ.[೧೯೫]

## ೨.೫. ಸಾಮಾಜಿಕ ದಾನ ಕಾರ್ಯಗಳು

ನಮ್ಮ ಜನರು ಸಾಮಾಜಿಕ ಕಾರ್ಯಗಳಲ್ಲಿ ಎಂದೂ ಹಿಂದೆ ಬಿದ್ದವರಲ್ಲ. ಅಲ್ಲದೆ ಎಲ್ಲವನ್ನು ಅರಸರು ಹಾಗೂ ಅಧಿಕಾರಿಗಳಿಂದಲೇ ಬರಲಿ ಎಂದು ಆಶಿಸಿ ಕುಳಿತವರಲ್ಲ. ರಾಜರು, ಸಾಮಂತರು ಮತ್ತು ಅಧಿಕಾರಿಗಳ ಜೊತೆಯಲ್ಲಿ ಸಾಮಾನ್ಯ ಜನರೂ ಕೂಡ ಸ್ವಪ್ರೇರಣೆಯಿಂದ ಕೆರೆಗಳನ್ನು, ಬಾವಿಗಳನ್ನು, ನಿರ್ಮಿಸಿಕೊಡುವುದು, ಗ್ರಾಮಗಳನ್ನು ಕಟ್ಟುವುದು, ಅರವಟ್ಟಿಗೆ ಇಡುವುದು, ಸಿರಿವಾಗಿಲ ನಿಲ್ಲಿಸಿದ್ದು, ಕೆರೆ ತೂಬುಗಳನ್ನು ಕಟ್ಟಿಸಿದ್ದು. ಮುಂತಾದ ಹತ್ತು ಹಲವು ವಿಷಯಗಳ ಬಗ್ಗೆ ನಮಗೆ ಈ ಭಾಗದ ಶಾಸನಗಳು ತಿಳಿಸುತ್ತವೆ.

### ೨.೫.೧. ಗ್ರಾಮ ನಿರ್ಮಾಣ

ಕ್ರಿ.ಶ.೧೦೭೪ರ ರಾಷ್ಟ್ರಕೂಟರ ದೊರೆ ಮೂರನೇ ಇಂದ್ರನ ಕಾಲದ ಲಕ್ಷ್ಮೇಶ್ವರದ ನಾರಾಯಣಸ್ವಾಮಿ ದೇವಾಲಯದ ಎದುರು ಇರುವ ಶಾಸನವು "ಸ್ಮರರೂಪಂ ಪೆರ್ಮ್ಮಾಡಿಯ ಪುರವರದೊಳ್ ನಡೆವ ಮನ್ನೆಯದ ಕಿಱುದೆಱೆಯಂ ಉರದಾನಿಕೆಯುಳ್ವದೀಪಂ ಪರಿಹಾರಂಬಿಟ್ಟು ಮಾಡಿದಂ ತತ್ಪುರಮಂ ॥ ಅಲ್ಲಿ ಮನ್ನೆಯ ನಿಬನ್ದದ ಕಿಱುದೆಱೆಗಳವಾವುವೆನ್ದಡೆ ಮನೆವಣಂ ಪಿರಿಯರವಣಂ ಧನಬಳಂ ಕಾಳಗೊಲ್ಲು ಮೇಂಟಿಗಣ್ಡುಗವಂಗಡಿಯ ತಿಗಳಿನ ಬೇಳೆಯನ್ದಿನ್ತೀನಡೆ ತೆಱೆಗಳ್ಮಂ ಪೊಳಲಮನ್ನೆಯದಾನಿಕೆಯುಳ್ವ [ದೀಪು]ಮಂ ದಾಯದ್ರಮ್ಮದ ಕಿಱುದೆಱೆಗಳುಮಂ ಸರ್ವ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ" ಎಂಬುದನ್ನು ಕಿಮಣಲ ವಂಶದ ಜಯಕೇಶಿ ಪೆರ್ಮಾಡಿಯು ಬಸದಿಗೆ ಒಂದು ಪುರವನ್ನು ರಚಿಸಿಕೊಟ್ಟ ವಿಷಯವನ್ನು ತಿಳಿಸುತ್ತದೆ.[೧೯೬]

## ೨.೫.೨. ಕೆರೆ ನಿರ್ಮಾಣ

ಕ್ರಿ.ಶ.೯ನೇ ಶತಮಾನದ ಹೈತಾಪುರದ ಒಂದು ಶಾಸನವು ಕೋವುರುರ ಮತ್ತು ಮೇರೆವಳುಗಳ ಮಧ್ಯದಲ್ಲಿ ಮಹಾಸಾಮಂತ ಬಿಜ್ಜನ ಹೆಂಡತಿ ಕೆರೆಯನ್ನು ಕಟ್ಟಿಸಿದ ಬಗ್ಗೆ ತಿಳಿಸುತ್ತದೆ. ಅಲ್ಲದೆ ಬಿಜ್ಜನ ವಂಶಾವಳಿಯ ಬಗ್ಗೆ ತಿಳಿಸುತ್ತದೆ.[೧೯೭] ಅದೆಂದರೆ

ಬದ್ದಿಯಮ್ಮ

।

ಮಡಿದಾರ

।

ಗೋಕಣ್ಣ

।

ಕತ್ತಿಯರ

।

ಗೊವಣ್ಣಂ

।

ರಾಜ ಶ್ರೀಮತ್ ಬಿಜ್ಜ ಈತನ ಪತ್ನಿ ಕಟ್ಟಿಸಿದಳು.

ಕುರ್ತುಕೋಟಿಯ ಕ್ರಿ.ಶ.೧೦೮೨ರ ಶಾಸನವು ೬ನೇ ವಿಕ್ರಮಾದಿತ್ಯನ ಕಾಲದ್ದಾಗಿದ್ದು ಇದು ದಂಡನಾಯಕನಾದ ವಾಮದೇವಯ್ಯನು ಕೆರೆಯನ್ನು ಕಟ್ಟಲು ನೀಡಿದ ಭೂದಾನದ ಬಗ್ಗೆ ಮತ್ತು ಕೆರೆನಿರ್ಮಾಣದ ಬಗ್ಗೆ ತಿಳಿಸುತ್ತದೆ.[೧೯೮]

ಗದುಗಿನ ಕ್ರಿ.ಶ.೧೧೦೧ರ ಶಾಸನವು ಹೊನ್ನವರ ಮದ್ದಿಮಯ್ಯನಾಯಕನು "ಬಟ್ಟಕೆಱೆಯ ಬ. . . .[ಟ್ಟೆ]ಯ ತಮ್ಮ ಕೆ[ಱೆ]ಗೆ ಆ ಕೆಱೆಯ. . . .[ಮೆಯ್ಯ] ಬಟ್ಟಕೆಱೆಯ ಪೊಲದೊಳ [ಗೆ ಕಾಲ್ಗಚ್ಚು]ಗೊಟ್ಟು ಬಿಟ್ಟಕೆಯಿಮತ್ತರು ೧೬ ಮತ್ತಮಾ ಕೆಱೆಗೆ ಕಟ್ಟಲು ಕೊಟ್ಟ ಗದ್ಯಾಣ-೩೦ರ" ಬಗ್ಗೆ ತಿಳಿಸುತ್ತದೆ.[೧೯೯]

ಲಕ್ಕುಂಡಿಯ ಕ್ರಿ.ಶ.೧೧೨೧ರ ಶಾಸನವು "ಮತ್ತಂ ಕಂದರ್ಪನಾಲದಿಂ ತೆಂಕಣ ಮೆಯ್ಯ ಕಂಮಲಯನಾಯಕರ ಸತ್ರದೊಳಗಣ ತಮ್ಮಯ್ಯಂ ತೀಕಿಮಯ್ಯನಾಯಕಂಗಂ ತಮ್ಮಬ್ಬೆ ರನ್ನಿಕಬ್ಬೆಗಂ ಅಕ್ಷಯಮಾಗಿ ತಾನಗಳಿಸಿದ ಕೆಜೆಗೆ ಬಿಟ್ಟ ಗದ್ಯಾಣ[೫] ಈ ಪೊನ್ನ ವೃದ್ಧಿಯಲು ಕೆಜೆಯ ಬಂಡಂ ಕಳಸುವರು॥" ಎಂದು ನಾಣಿಮಯ್ಯನಾಯಕನು ಕೆರೆ ಅಭಿವೃದ್ಧಿಗಾಗಿ ಬಿಟ್ಟ ಗದ್ಯಾಣ ಐದು ಎಂದು ಹೇಳುತ್ತದೆ. ಅಂದರೆ ಕೆರೆಯ ಅಭಿವೃದ್ದಿಗಾಗಿ ಬಿಟ್ಟ ದಾನವಾಗಿದೆ.[೨೦೦]

ಬೆಂತೂರಿನ ಕ್ರಿ.ಶ.೧೨೧೪ರ ಶಾಸನವು ಯಾದವ ದೊರೆ ಸಿಂಘಣನ ಕಾಲದ್ದಾಗಿದ್ದು ಇದರಲ್ಲಿ ಹೀರೆಕೆರೆಗೆ ಬೆನತೂರ ಆಱುವತ್ತನಾಲುವರು, ಮಹಾಜನಂಗಳ ಕಯೊಳು ದೇಮರಾಳು ಸೋಮನು ಆರವತ್ತರು [ಕೆಯ್ಯ]ನು ತಂಮ ತೆಂಕಣ ಪ್ರಥಮದ ಹಸುಗೆಯಿಂ, ಬಡಗಲು ಹಿಯ್ರ್ಯಾಕೆಜೆಯಿಂ, ತೆಂಕಲು ಅಕ್ಷೋಹಿಣಿ ಸಹಿರಣ್ಯಮಂ, ಕೊಟ್ಟುಕೊಂಡು ಕೆಜೆ ಧರ್ಮ್ಮಕ್ಕೆ ಬಿಟ್ಟನು" ಎಂದು ಹೇಳುತ್ತದೆ.[೨೦೧]

ಮುಂಡರಗಿ ತಾಲೂಕಿನ ಚ್ಯಾಗನಕೆರೆಯ ಶಾಸನವು ತಾರಣ ಸಂವಛರದ ವಯಿಶಾಕ ಸುದ್ಧ ಪಂಚಮಿ ಸೋಮವಾರದಲು ತೂಬು ಪ್ರತಿಷ್ಠಯ ಮಾಡಿದವರು ಮಾಸವೆರ್ಗ್ಗಡೆಯ ಚಿಕ್ಕಂಣುಪಾದ್ಯರ ಮಕ್ಕಳು [ಗೋ]ಪಂಣಗಳು ಆ ತೂಬಿಂಗೆ ಹತ್ತಿದ [ವರ]ಮುವತ್ತು ಪ್ರತಾಪ ಅಕ್ಷರಲು ಮು[ವ]ತ್ತು ಪ್ರತಾಪ ಶ್ರೀ ತ್ರಿಂಬಕ। ಸೇನಬೋವೆ ವರದೆಪೈಯನು। ತುಂಬು ಮಾಡಿದನು ತಿಪ್ಪೋಜಯಿಂತು ಮಾಡಿದ[ಉ]। ಶ್ರೀ ಬಮ್ಮದೇವರು ಪ್ರತಿ[ಷೆತು] ಎಂಬುದಾಗಿ ಕೆರೆಗೆ ತೂಬುಕಟ್ಟಿಸಿದ ವಿಚಾರವನ್ನು ನೀಡುತ್ತದೆ. ಅಂದರೆ ಚಿಕ್ಕಣ್ಣ ಉಪಾಧ್ಯಾಯನ ಮಗನಾದ ಗೋಪಣಗಳು ಚಾಗನಕೆರೆಯ ತೂಬನ್ನು ೩೦ ಪ್ರತಾಪವರಹಗಳನ್ನು ಖರ್ಚು ಮಾಡಿ ಕಟ್ಟಿಸಿದ ಬಗ್ಗೆ ಹೇಳುತ್ತದೆ.[೨೦೨]

### ೨.೫.೩. ಬಾವಿ ನಿರ್ಮಾಣ

ಲಕ್ಷ್ಮೇಶ್ವರದ ಕ್ರಿ.ಶ.೧೦೮೨ರ ಆರನೇ ವಿಕ್ರಮಾದಿತ್ಯನ ಕಾಲದ ಶಾಸನವು "ಸ್ವಸ್ತಿ ಶ್ರೀ ಚಾಳುಕ್ಯವಿಕ್ರಮಕಾಲದ ೬ನೆಯ ದುಂದುಂಭಿ ಸಂವತ್ಸರದ ವೈಶಾಖ ಸುಹಿ ಬ್ರಿಹಸ್ಪತಿವಾರದಂದು ಶ್ರೀ ರಾಜಧಾನಿಪಟ್ಟಣಂ ಪುರಿಗೆಜೆಯ ಶಾನ್ತಿಶೆಟ್ಟಿಯುಂ ಕರ್ತ್ತೆಯ[ಬ]ಮ್ಮಿಸೆಟ್ಟಿಯುಂ ಮುಖ್ಯಮಾಗಿರಯ್ನೂರ್ಬ್ಬರುಂ ರಾಟಣದ ಬಾವಿಯ ಧರ್ಮ್ಮೇತಕ್ಕೆ ಶೋಭನಗೆಱೆಯಿಂ ಮೂಡ [ಗಾ]ವುಣ್ಡಸ್ವಾಮಿ ಚಾವುಣ್ಡಮಯ್ಯನ ಮಾನ್ಯದ ಕೆಯ್ಯಂ ಕೊನ್ದು ಬಿಟ್ಟ" ಎಂಬುದನ್ನು ರಾಟಣದ ಬಾವಿಯ ಧರ್ಮದ ಏತಕ್ಕಾಗಿ ಭೂಮಿಯನ್ನು ದಾನವಾಗಿ ನೀಡಿದ್ದಾರೆ. ಇಲ್ಲಿ ಬಾವಿಯಿಂದ ಜನರಿಗೆ ನೀರನ್ನು ಒದಗಿಸುವುದು ಮುಖ್ಯ ಕೆಲಸವಾಗಿದೆ.[೨೦೩]

ಇದೇ ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದ ಹಿಂದೆ ಇರುವ ಬಾವಿಯಲ್ಲಿ ಕ್ರಿ.ಶ.೧೧೪೫ರ ವಾರವಧುಮಣ್ಣನೆ ಗೌರಲೆಯ ಒಂದು ಶಾಸನವಿದ್ದು ಅದು ಎಲ್ಲಾ ದಾನಗಳನ್ನು ಮಾಡುವುದಕ್ಕಿಂತ ಬಾಯಾರಿದವರಿಗೆ ಉದಕದಾನವನ್ನು ಮಾಡುವುದು ಬಹಳ ಶ್ರೇಷ್ಠವಾದ ದಾನ. ಅಂತಹ ಒಳ್ಳೆಯ ಕೆಲಸವನ್ನು ಈ ಬಾವಿಯನ್ನು ಕಟ್ಟಿಸುವುದರಿಂದ ಮಾಡಿದ್ದೇವೆಂದು.[೨೦೪] ಆ ಶಾಸನವು ಹೇಳುತ್ತದೆ.

ಕ್ರಿ.ಶ. ೧೧ನೇ ಶತಮಾನದ ಸೊರಟೂರಿನ ಶಾಸನವು "ಸ್ವಸ್ತಿ ಶ್ರೀ ಪವಿತ್ರರಾಸಿಜೀಯರ ಶಿಷ್ಯ ಪಗವರಗಣ್ಡ ಧರ್ಮಶೆಟ್ಟಿಯು ಮಾಡಿಸಿದ ಬಾವಿ ಎಂದು".[೨೦೫] ಅವನು ತೆಗೆಸಿದ ಬಾವಿಯ ಉಲ್ಲೇಖವನ್ನು ಹೇಳುತ್ತದೆ.

ಕ್ರಿ.ಶ.೧೧೦೧ರ ೬ನೇ ವಿಕ್ರಮಾದಿತ್ಯನ ಕಾಲದ ಗದುಗಿನ ಶಾಸನವು ಬಾವಿಯ ಧರ್ಮದ ಏತಕ್ಕಾಗಿ ೧೦ ಗದ್ಯಾಣ ಕೊಟ್ಟ ಬಗ್ಗೆ ತಿಳಿಸುತ್ತದೆ.[೨೦೬]

ಲಕ್ಕುಂಡಿಯ ಕ್ರಿ.ಶ.೧೧೯೫ರ ಹೊಯ್ಸಳ ದೊರೆ ಎರಡನೇ ವೀರಬಲ್ಲಾಳನ ಕಾಲದ ಶಾಸನವು, ಲಕ್ಕುಂಡಿಯು ಹೊಯ್ಸಳದೊರೆ ವೀರಬಲ್ಲಾಳನ ಎರಡನೇ ರಾಜದಾನಿಯಾಗಿತ್ತು. ಆಗ ಸುಪುತ್ರಂ ಕುಲದೀಪಕರೆನಿಸಿದ ವಿಷ್ಣುಭಟ್ಟರ ಶ್ರೀಕೇಸವದೇವನುಂ ಯಡಕೆಯರ ಲೋಕೋತ್ತಮ ಕೇಶವದೇವನುಂ ಆರೀ ಸಾಸಿರ್ಬರು ಬೇಡಿಕೊಂಡು ನಾಗರಬಾವಿಯ ಧರ್ಮೇತಕ್ಕೆ [ತಳ]ಭೊಗದ ಕೇಣಿಕಾಱತನದಲಿ ಬಿಟ್ಟ ಗದ್ಯಾಣ ೧೨ ಯೀ ಧರ್ಮ್ಮ[ದಾರ]ವೆಯಂ ವರ್ಷಂಪ್ರತಿ ಕೇಣಿಯಂ ಕೊಂಡು ಕೇಣಿಕಾರರು ನಡೆಸುವರು." ಎಂಬುದಾಗಿ ವಿಷ್ಣುಭಟ್ಟರ ಕೇಶವಭಟ್ಟನು ದಾನಕೊಟ್ಟ ಬಗ್ಗೆ ತಿಳಿಸುತ್ತದೆ.[೨೦೭]

**೨.೫.೪. ಅರವಟ್ಟಿಗೆ ಮತ್ತು ಸಾಮಾಜಿಕ ಕಾರ್ಯಗಳು**

ನಮ್ಮ ಪೂರ್ವಜರು ನೀರಿನ ಮಹತ್ವವನ್ನು ತಿಳಿದವರಾಗಿದ್ದರು. ಪ್ರತಿನಿತ್ಯ ಜನ ದಾರಿಯಲ್ಲಿ ನಡೆದಾಡುವಾಗ ಅವರು ಬಾಯಾರಿಕೆಯಿಂದ ಬಳಲಬಾರದೆಂದು ಅವರಿಗೆ ನೀರಿನ ಸೌಕರ್ಯಕ್ಕಾಗಿ ನೀರಿನ ಅರವಟ್ಟಿಕೆಗಳನ್ನು ಇಟ್ಟು ಅವುಗಳ ನಿರ್ವಹಣೆಗಾಗಿ ಭೂದಾನವನ್ನು ಬಿಟ್ಟಿರುವುದನ್ನು ನೋಡಬಹುದು. ಅಲ್ಲದೆ ಅನ್ನಸತ್ರಕ್ಕಾಗಿಯೂ ಸಹ ಭೂದಾನವನ್ನು ನೀಡಲಾಗಿದೆ.

ಕಣಿವೆಯ ಕ್ರಿ.ಶ.೯೬೯ರ ಶಾಸನವು ರಾಷ್ಟ್ರಕೂಟರ ದೊರೆ ಕೊಟ್ಟಿಗದೇವನ ಕಾಲದ್ದಾಗಿದ್ದು ಇದು ಬಹಳ ತೃಟಿತವಾಗಿದೆ. ಇದರಲ್ಲಿ ನಾಗಾವಿಯ ರಾಮೇಶ್ವರದ ಸತ್ರಕ್ಕೆ ಮತ್ತು ವಿದ್ಯಾದಾನಕ್ಕಾಗಿ ಬಿಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ.[೨೦೮]

ಕ್ರಿ.ಶ.೧೧೦೧ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು ಹೊನ್ನವರ ಮದ್ದಿಮಯ್ಯನಾಯಕನು ಎರಡು ಅರವಟ್ಟಗೆಗಳನ್ನು ನಡೆಸಲು ಒಟ್ಟು ೨೦ ಗದ್ಯಾಣ ಕೊಟ್ಟಿದ್ದು ಸತ್ರಕ್ಕಾಗಿ ಕೊಟ್ಟ ಹಣದಾನದ ಬಗ್ಗೆ ತಿಳಿಸುತ್ತದೆ.[೨೦೯]

ವಿಜಯನಗರದ ಅರಸು ಕೃಷ್ಣದೇವರಾಯನ ಕಾಲದಲ್ಲಿ ಕ್ರಿ.ಶ.೧೫೧೯ರಲ್ಲಿ "ಬಾಗಿಲನಾಗಿನಾಯಕರ ಮಗ ನಯನಪ್ಪನಾಯಕರು ಪರೂವತೋಡೆಯರಿಗೆ ಕೊಟ್ಟ ಅರವಟ್ಟಿಗೆಯ ಹೊಲನ ಧರ್ಮದ ವಿಚಾರವನ್ನು ತಿಂಮಪ್ಪನಾಯಕಯ್ಯನವರು ಉಂಬಳಿಯಾಗಿ ಪಾಲಿಸಿದ ಗದುಗಿನ ಸೀಮೆಯೊಳಗಣ ಬಟ್ಟಕೆಱೆಯ ಗ್ರಾಮದಲು ಗದುಗಿನ ಶ್ರಿತ್ರಿಯಂಬಕದೇವರಿಗೆಉ ಪ್ರೀತಿಯಾ ಶ್ರೀವೀರನಾರಾಯಣದೇವರಿಗೆಉ ಪ್ರೀತಿಯಾ[ಗಿ] ಗದಗಿನ ತಾರಬೀದಿಯ [ವೊ]ಳಗಣ ಕೋಟೆಯ ಮುಂದೆವೊಂದು ಅಱವಟಿಗೆ ಬಟ್ಟಕೆಱ[ಱೆ] ಬೆನಕ[ನ] ಕೊಪ್ಪದ ನಡುವೆ ಉಭಯ ಮಾರ್ಗ್ಗ ದಾರಿಯಲಿ ವೊಂದು ಅಱವಟಿಗೆ ಕೂಡಿ ಎರಡು ಅಱವಟಿಗೆಉ ಸರ್ವ್ವಮಾನ್ಯವಾಗಿ [ಕೊಟ್ಟ] ಹತ್ತು ಕೊಳಗದ ಹೊಲ[ನ] ಕೊಟ್ಟರು" ಎಂದು ಶಾಸನವು ತಿಳಿಸುತ್ತದೆ.[೨೧೦]

ಕ್ರಿ.ಶ.೧೧೨೧ರ ಲಕ್ಕುಂಡಿಯ ಶಾಸನವು ಶ್ರೀನಾಣಿಮಯ್ಯನಾಯಕನು ತೇಕಿಮಯ್ಯನಾಯಕರಿಗೆ ಮಳೆಯಗೇರಿಯ ಅರವಂಟ್ಟಿಗೆಗೆ ಬಿಟ್ಟ ಗದ್ಯಾಣ ಐದು ರವಿಕಾಳಿಗೆರೆಯ ಪಡುವಣಮಯ್ಯ ತನ್ನ ಆರವೆಯಲ್ಲಿಯ ಅರವಂಟಿಗೆಗೆ ತಮ್ಮ ಅಬ್ಬೆರನ್ನಿವ್ವಗೆ ಅಕ್ಷಯವಾಗಿ ಬಿಟ್ಟ ಗದ್ಯಣ ಐದರ ಬಗ್ಗೆ ತಿಳಿಸುತ್ತದೆ.[೨೧೧]

ಕರೂರಿನ ಕ್ರಿ.ಶ.೧೦೪೦ರ ಕಲ್ಯಾಣ ಚಾಲುಕ್ಯರದೊರೆ ಎರಡನೇ ಜಯಸಿಂಹನ ಕಾಲಕ್ಕೆ ಸೇರಿದ್ದು ಇದು ಅಯ್ಯಗಾವುಂಡನಿಂದ ಸತ್ರಕ್ಕಾಗಿ ಭೂದಾನ ಬಿಟ್ಟ ಬಗ್ಗೆ ತಿಳಿಸುತ್ತದೆ.[೨೧೨]

ಕ್ರಿ.ಶ.೧೦೪೨ರ ಮುಂಡರಗಿ ತಾಲೂಕು ಶಿರೂರಿನ ಶಾಸನವು "ಸಿರಿವೂರದ ಸಿರಿವಾಗಿಲಂ ಕುಂಚವಡುಗದಾಸಯ್ಯ ಮಾಡಿಸಿದುದಕ್ಕೆ ಅಯ್ಚಗಾವುಣ್ಡಂ, ಚೆನ್ನಗಾವುಣ್ಡಂ, ಸೋವಗಾವುಣ್ಡಂ ಪೆರ್ಗ್ಗಡೆ ಸೋವಯ್ಯ[ನಿ]ನ್ತಜುವರ್ಗ್ಗಾವುಣ್ಡುಗಳ್ಮಿಟ್ಟು ಮಂನೆಯಸಾಮ್ಯದೊಳ್ ಬಿಟ್ಟ ಮರ್ನ್ನಣೆಯೆನ್ತೆನ್ದೊಡೆ ಮನೆನಯದೆಜೆಆಳಿವಸತಾಯ ಪೊ[ಗೆ] ವೊಗೆಡ ತಳಾಜಗೂಲಿಇ. .ದಿ ತಂಬುಲಂ ಮೊದಲಾಗಿ ಆತನ ಮಕ್ಕಳ್ವ[ರುಳ್ವ]ರಸರ್ವ್ವಭಾದಪರಿಹಾರಂ ಕಾದು ನಡೆಯಿಸುವರ್॥" ಎಂದು ಸಿರಿವಾಗಿಲ ನಿಲಿಸುದುದಕಾಗಿ ಬಿಟ್ಟ ದಾನದ ಬಗ್ಗೆ ತಿಳಿಸುತ್ತದೆ. ಇದನ್ನು ಬರೆದವರು ಕುಲಕರ್ಣಿ ಭರ್ಮ್ಮಯ್ಯ ಎಂದು ಹೇಳುತ್ತದೆ.[೨೧೩]

ಕ್ರಿ.ಶ.೧೧೯೯ರ ಗದುಗಿನ ೬ನೇ ವಿಕ್ರಮಾದಿತ್ಯನ ಶಾಸನವು ತೃಟಿತವಾಗಿದ್ದು ಇದು ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯರಿಂದ ಲಕ್ಕುಂಡಿಯಲ್ಲಿ ಪ್ರಭಾಕರ ವ್ಯಾಖ್ಯಾನ ಶಾಲೆಯ ನಿರ್ಮಾಣ ಹಾಗು ದಾನಬಿಟ್ಟ ಬಗ್ಗೆ ತಿಳಿಸುತ್ತದೆ. ಅಲ್ಲದೆ ವಿಕ್ರಮಾದಿತ್ಯನಿಂದ ವಿಕ್ರಮವರ್ಷ ಪ್ರಾರಂಭವಾದ ಬಗ್ಗೆ ತಿಳಿಸುತ್ತದೆ.[೨೧೪]

ಕ್ರಿ.ಶ.೧೧೫೫ರ ಮೂರನೇ ತೈಲಪನ ಕಾಲದ ಶಾಸನವು ಹೊಸೂರಿನಲ್ಲಿದ್ದು ಇದರಲ್ಲಿ "ಹೊಸವೂರ ಮಹಾಪ್ರಭು ಹೊಲ್ಲಗಾವುಣ್ಡಂ ಆರೀ ಮೂಲಸ್ಥಾನ ದೇವರಾಚಾರ್ಯ್ಯರಪ್ಪ ಗಂಗರಾಶಿಪಣ್ಡಿತದೇವರ ಕಾಲಂ ಕರ್ಚ್ಚಿ ಕೈದಾರೆಯೆರೆದು ಅ[ಲ್ಲಿ]ಯ ತಪೋಧನರಾಹಾರಕ್ಕೆಂದೊಂದು ತೋಂಟದಾಯದೆಸೆವನ್ದಮಂ ಬಿಟ್ಟನಾ." ಎಂಬುದಾಗಿ ಅನ್ನ ಸತ್ರಕ್ಕಾಗಿ ತೋಂಟದ ಆದಾಯವನ್ನು ದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೨೧೫]

ಒಟ್ಟಾರೆ ಈ ಭಾಗದಲ್ಲಿ ಬದಾಮಿ ಚಾಲುಕ್ಯದೊರೆ ೨ನೇ ಪುಲಕೇಶಿಯಿಂದ ಹಿಡಿದು ವಿಜಯನಗರದ ಅರಸರ ಕಾಲದವರೆಗೂ ವಿವಿಧರೀತಿಯ ದಾನಗಳನ್ನು ನೀಡುತ್ತ ಬಂದಿರುವುದು ತಿಳಿಯುತ್ತದೆ. ಕ್ರಿ.ಶ.೭ನೇ ಶತಮಾನದಿಂದಲೂ ವಿವಿಧ ಧರ್ಮಗಳ ಧಾರ್ಮಿಕ ಕಾರ್ಯಗಳಿಗೆ ಎಲ್ಲಾ ಅರಸರು ತಂತಮ್ಮ ಕೊಡುಗೆಗಳನ್ನು ನೀಡುತ್ತಾ ಬಂದಿರುವುದು, ವಿವಿಧ ಕಾಲದ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.೬೦೮-೬೪೨ರ ಕಾಲಘಟ್ಟದ ಶಾಸನವು ಪ್ರಾಚೀನವಾದುದಾಗಿದ್ದು ಇದು ಇಮ್ಮಡಿ ಪುಲಕೇಶಿಯ ಕಾಲದಲ್ಲಿ ದುರ್ಗಶಕ್ತಿಜಿನಾಲಯಕೆ ಭೂದಾನ ನೀಡಿರುವುದನ್ನು ತಿಳಿಸುತ್ತದೆಯಲ್ಲದೆ

ಮುಂದಿನ ಹಲವಾರು ಶಾಸನಗಳು ಬಸದಿಗಳನ್ನು, ದೇವಾಲಯಗಳನ್ನು ನಿರ್ಮಿಸಿರುವುದು ಅಲ್ಲದೆ ಅವುಗಳು ಬಿದ್ದು ನಾಶವಾದಾಗ ಅವುಗಳನ್ನು ಪುನಃ ಜೀರ್ಣೋದ್ಧಾರಮಾಡಿರುವುದು, ಅಲ್ಲಿಯ ಪ್ರತಿಮೆಗಳು ನಾಶವಾದಾಗ ಅವುಗಳನ್ನು ಪುನಃ ಪ್ರತಿಷ್ಠಾಪನೆ ಮಾಡಿರುವುದು, ಕಂಬಗಳನ್ನು ನಿರ್ಮಿಸಿಕೊಟ್ಟಿರುವುದು, ಅಲ್ಲಿಯ ಪೂಜೆಗಳು ನಿರ್ವಿಘ್ನವಾಗಿ ನಡೆಯಲು ಪೂಜಾಪಾತ್ರೆಗಳು, ಹೂದೋಟ, ಸದಾ ನಂದಾದೀಪಗಳು ಕೆಡದಂತೆ ಉರಿಯಲು ಅವುಗಳಿಗೆ ಎಣ್ಣೆ, ಹುಣ್ಣಿಮೆ ಮತ್ತು ವಿವಿದ ಹಬ್ಬದ ದಿನಗಳಲ್ಲಿ ನಡೆಯುವ ವಿಶೇಷ ಪೂಜೆಗೆ ಸುಂಕಗಳನ್ನು ನೀಡಿರುವುದು ಇಲ್ಲಿಯ ಶಾಸನಗಳನ್ನು ನೋಡಿದಾಗ ತಿಳಿಯುತ್ತದೆ.

ಬಸದಿಗಳಿಗೆ ದೇವಾಲಯಗಳಿಗೆ ದಾನಮಾಡಿರುವುದಲ್ಲದೆ ವೈಯಕ್ತಿಕವಾಗಿ ಆ ದೇವಾಲಯದ ಗುರುಗಳಿಗೆ, ಅನ್ನಸತ್ರಗಳಿಗೆ, ಕೆಲವು ಸಂದರ್ಭಗಳಲ್ಲಿ ವಸ್ತ್ರದಾನ, ಹುಲ್ಲು ಹೊಟ್ಟುಗಳದಾನ, ಮನೆ ನಿವೇಶನಗಳದಾನ, ಸುಂಕದಾನವನ್ನು ನೀಡುತ್ತಾ ಬಂದಿರುವುದು ತಿಳಿಯುತ್ತದೆ. ಅಲ್ಲದೆ ಊರುಗಳಲ್ಲಿ ಸಂತೆಯ ಸಂದರ್ಭಗಳಲ್ಲಿ ತರುವ ಹೇರುಗಳಿಗೆ ಇಂತಿಷ್ಟು ಎಂಬಂತೆ ಎಲೆ ಅಡಕೆಗಳನ್ನು ದಾನಬಿಟ್ಟಿರುವುದು ತಿಳಿಯುತ್ತದೆ. ಕೆಲವು ಸಂದರ್ಭಗಳಲ್ಲಿ ಊರಪ್ರಮುಖರು, ಊರಗೌಡರು, ಅಯ್ಯಗಾವುಂಡರು, ಮಂಡಲೇಶ್ವರರು, ಸಾಮಂತರು, ಮಹಾಸಾಮಂತಾಧಿಪತಿಗಳು, ಅಷ್ಟೆ ಅಲ್ಲದೆ ಕೇಣಿಕಾರರು ತಮ್ಮ ಗಳಿಕೆಯ ಸ್ವಲ್ಪಭಾಗವನ್ನು ದಾನಮಾಡಿರುವುದು ತಿಳಿದು ಬರುತ್ತದೆ.

**ಅಡಿಟಿಪ್ಪಣಿಗಳು**

೧. ಶಾಸನ ಸಂಗ್ರಹ, ಸಂಪಾದಕರು ಎ.ಎಂ.ಅಣ್ಣೀಗೇರಿ, ಡಾ॥ಆರ್.ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು.

೨. ಪಂಪನ ಆದಿಪುರಾಣ, ಆಶ್ವಾಸ ೧೦ ಪದ್ಯ ೯-೧೦

೩. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ॥ ಎಚ್.ತಿಪ್ಪೇರುದ್ರಸ್ವಾಮಿ. ಪು,ಸಂ,೨೩೨

೪. ಮುಳಗುಂದ, ಇ.ಐ.೧೩ ಪು.೧೯೨-೧೯೪

೫. ಶಿರೂರು, ಅತ್ತಿಯಬ್ಬೆಯ ಅಪ್ರಕಟಿತ ಶಾಸನ, ಪ್ರಕಟಣೆ ಡಾ॥ಡಿ.ವಿ.ಪರಮಶಿವಮೂರ್ತಿ. ಇತಿಹಾಸ ದರ್ಶನ

೬. ಲಕ್ಕುಂಡಿ, ಎಸ್.ಐ.ಐ ೧೧ ಶಾ.ಸಂ ೫೨ ಕ್ರಿ.ಶ.೧೦೦೭

೭. ಲಕ್ಕುಂಡಿ. ಎಸ್.ಐ.ಐ ೧೧ ಶಾ.ಸಂ ೫೨ ಕ್ರಿ.ಶ.೧೦೦೭

೮. ಕಲಕೇರಿ, ಎಸ್.ಐ.ಐ ೧೫ ಶಾ.ಸಂ ೫೬೮. ಕ್ರಿ.ಶ.ಸು.೧೨.ಶ

೯. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೭ ಕ್ರಿ.ಶ.೭೩೫

೧೦. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೩೬೬ಕ್ರಿ.ಶ. ೧೨-೧೩ನೇ ಶ

೧೧. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ೨೧೫ ಕ್ರಿ.ಶ.೧೨೪೭

೧೨. ಡೋಣಿ. ಎಸ್.ಐ.ಐ.೧೫ ಶಾ.ಸಂ ೬೧೪ ಕ್ರಿ.ಶ.೧೨೬೯

೧೩. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೭೧೬ ಕ್ರಿ.ಶ. ೧೬೭೫

೧೪. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ ೩ ಕ್ರಿ.ಶ.೬೦೮-೬೪೨

೧೫. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ ೭ ಕ್ರಿ.ಶ.೭೩೫

೧೬. ಮುಳಗುಂದ, ಇ.ಐ.೧೩ ಪು.ಸಂ.೧೯೨-೧೯೪

೧೬ಎ. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ ೨೪೬ ಕ್ರಿ..ಶ.೯೭೧

೧೭. ಶಿರೂರ, ಅತ್ತಿಯಬ್ಬೆಯ ಅಪ್ರಕಟಿತ ಶಾಸನ ಪ್ರಕಟಣೆ. ಡಾ॥ಡಿ.ವಿ.ಪರಮಶಿವಮೂರ್ತಿ ಇತಿಹಾಸ ದರ್ಶನ.

೧೮. ಲಕ್ಕುಂಡಿ, ಎಸ್.ಐ.ಐ ೧೧ ಶಾ.ಸಂ ೫೨ ಕ್ರಿ.ಶ.೧೦೦೭

೧೯. ಮುಳಗುಂದ, ಇ.ಐ.೧೬ ಪು.ಸಂ.೫೩-೫೭

೨೦. ಡೋಣಿ, ಎಸ್.ಐ.ಐ.೧೫ ಶಾ.ಸಂ.೧೭೨ ಕ್ರಿ.ಶ.೧೧೯೬-೯೭

೨೧. ಡೋಣಿ, ಎಸ್.ಐ.ಐ.೧೫ ಶಾ.ಸಂ.೫೭೨ ಕ್ರಿ.ಶ.೧೨ ಶ.

೨೨. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೪ ಕ್ರಿ.ಶ.೬೮೩

೨೩. ಲಕ್ಷ್ಮೇಶ್ವರ ಎಸ್.ಐ.ಐ.೨೦ ಶಾ.ಸಂ.೫ ಕ್ರಿ.ಶ.೭೨೩

೨೪. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೬ ಕ್ರಿ.ಶ.೭೩೦

೨೫. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೪೫ ಕ್ರಿ.ಶ.೯೬೮-೬೯

೨೬. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೪೭ ಕ್ರಿ.ಶ.೧೦೭೪

೨೭. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೪೫ ಕ್ರಿ.ಶ.೯೬೮-೬೯

೨೮. ಡಂಬಳ, ಎಸ್.ಐ.ಐ೧೧ ಶಾ.ಸಂ.೯೪ ಕ್ರಿ.ಶ.೧೦೫೯

೨೯. ಸೊರಟೂರು, ಎಸ್.ಐ.ಐ.೧೧ ಶಾ.ಸಂ.೧೧೧ ಕ್ರಿ.ಶ.೧೦೭೧

೩೦. ಲಕ್ಕುಂಡಿ, ಎಸ್.ಐ.ಐ.೧೩ ಶಾ.ಸಂ.೧೧೯ ಕ್ರಿ.ಶ.೧೧೭೩

೩೧. ಲಕ್ಕುಂಡಿ, ಎಸ್.ಐ.ಐ.೧೩ ಶಾ.ಸಂ.೧೧೯ ಕ್ರಿ.ಶ.೧೧೭೩

೩೨. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೬೭ ಕ್ರಿ.ಶ.೧೧೮೫

೩೩. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೬೭ ಕ್ರಿ.ಶ.೧೧೮೫

೩೪. ಲಕ್ಕುಂಡಿ, ಎಸ್.ಐ.ಐ ೧೫ ಶಾ.ಸಂ.೫೫೭ ಕ್ರಿ.ಶ. ೧೨ಶ

೩೫. ಗದಗ, ಎಸ್.ಐ.ಐ. ೨೦ ಶಾ.ಸಂ ೩೭೨ ಕ್ರಿ.ಶ.೧೨-೧೩ಶ

೩೬. ಡಂಬಳ, ಕೆ.ಐ.೫. ಶಾ.ಸಂ ೪೬ ಕ್ರಿ.ಶ.೧೨೮೮

೩೭. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ ೨೨೪ ಕ್ರಿ.ಶ.೧೨೯೫

೩೮. ಬಸವಣ್ಣನವರ ವಚನಗಳು. ಸಂ. ಡಾ॥ಡಿ.ಎಲ್.ಬಸವರಾಜು

೩೯. ಹೆಬ್ಬಾಳ, ಇ.ಐ.೪ ಪು.ಸಂ.೩೫೦-೩೫೬ ಕ್ರಿ.ಶ.೮೭೫

೪೦. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ ೨೦೬

೪೧. ಗದಗ, ಎಸ.ಐ.ಐ. ಶಾ.ಸಂ. ೧೦೪ ಕ್ರಿ.ಶ.೧೧೦೧

೪೨. ಮುಳಗುಂದ, ಎಸ್.ಐ.ಐ ೧೫ ಶಾ.ಸಂ.೫೧೬ ಕ್ರಿ.ಶ.೯೭೭

೪೩. ಮುಳಗುಂದ, ಎಸ್.ಐ.ಐ ೧೫ ಶಾ.ಸಂ.೫೧೭ ಕ್ರಿ.ಶ.೯೭೭

೪೪. ಲಕ್ಕುಂಡಿ, ಎಸ್.ಐ.ಐ ೧೫ ಶಾ.ಸಂ ೫೬೧ ಕ್ರಿ.ಶ.೧೨ ಶ

೪೫. ಸೊರಟೂರು, ಎಸ್.ಐ.ಐ ೧೫ ಶಾ.ಸಂ.೬೪೯ ಕ್ರಿ.ಶ.೧೩೫೬

೪೬. ಮೇವುಂಡಿ, ಎಸ್.ಐ.ಐ ೧೧ ಶಾ.ಸಂ ೨೨ ಕ್ರಿ.ಶ. ೮೯೭

೪೭. ಅಸುಂಡಿ, ಎಸ್.ಐ.ಐ.೧೧ ಶಾ.ಸಂ. ೩೪ ಕ್ರಿ.ಶ.೯೨೫

೪೮. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ೩೭ ಕ್ರಿ.ಶ.೯೪೬

೪೯. ಸೊರಟೂರು, ಎಸ್.ಐ.ಐ.೧೧ ಶಾ.ಸಂ ೩೯ ಕ್ರಿ.ಶ.೯೫೧

೫೦. ಹೊಸೂರು, ಎಸ್.ಐ.ಐ.೧೧ ಶಾ.ಸಂ ೪೭ ಕ್ರಿ.ಶ.೯೯೪-೯೫

೫೧. ನಾರಗಹಳ್ಳಿ, ಎಸ್.ಐ.ಐ.೧೧ ಶಾ.ಸಂ.೫೮ ಕ್ರಿ.ಶ.೧೦೨೨

೫೨. ಹಸುಂಡಿ, ಎಸ್.ಐ.ಐ.೧೧ ಶಾ.ಸಂ.೮೯ ಕ್ರಿ.ಶ.೧೦೫೩

೫೩. ಮುಳಗುಂದ, ಎಸ್.ಐ.ಐ.೧೧ ಶಾ.ಸಂ.೬೪ ಕ್ರಿ.ಶ.೧೦೨೮

೫೪. ಬರದೂರು, ಎಸ್.ಐ.ಐ.೧೫ ಶಾ.ಸಂ.೫೨೮ ಕ್ರಿ.ಶ.೧೦೩೨

೫೫. ಅಸುಂಡಿ, ಎಸ್.ಐ.ಐ೧೧ ಶಾ.ಸಂ.೮೯ ಕ್ರಿ.ಶ.೧೦೫೩

೫೬. ಮಲ್ಲಸಮುದ್ರ ಎಸ್.ಐ.ಐ.೧೫ ಶಾ.ಸಂ.೫೪ ಕ್ರಿ.ಶ.೧೧೫೭

೫೭. ಗದಗ, ಎಸ್.ಐ.ಐ.೨೦ ಶಾ.ಸಂ. ೭೦ ಕ್ರಿ.ಶ.೧೦೬೪

೫೮. ಡೋಣಿ, ಎಸ್.ಐ.ಐ.೧೧. ಶಾ.ಸಂ.೧೨೬ ಕ್ರಿ.ಶ.೧೦೮೦

೫೯. ಕುರ್ತುಕೋಟಿ, ಎಸ್.ಐ.ಐ.೧೧. ಶಾ.ಸಂ.೧೩೩ ಕ್ರಿ.ಶ.೧೦೮೭

೬೦. ಪೇಠಾ ಆಲೂರು, ಎಸ್.ಐ.ಐ.೧೧. ಶಾ.ಸಂ.೧೩೬ ಕ್ರಿ.ಶ.೧೦೯೧

೬೧. ಡೋಣಿ, ಎಸ್.ಐ.ಐ.೧೧. ಶಾ.ಸಂ.೧೮೨ ಕ್ರಿ.ಶ.೧೦೯೮

೬೨. ಹೊಸೂರು, ಎಸ್.ಐ.ಐ.೧೧. ಶಾ.ಸಂ.೧೫೨ ಕ್ರಿ.ಶ.೧೧೦೩

೬೩. ಕಣವಿ, ಎಸ್.ಐ.ಐ.೧೧. ಶಾ.ಸಂ.೧೫೬ ಕ್ರಿ.ಶ.೧೧೦೫

೬೪. ಎಲೆಶಿರೂರ, ಎಸ್.ಐ.ಐ.೧೧. ಶಾ.ಸಂ.೧೬೮ ಕ್ರಿ.ಶ.೧೧೧೯

೬೫. ಕಕ್ಕೂರು, ಎಸ್.ಐ.ಐ.೧೫. ಶಾ.ಸಂ.೧೬೫ ಕ್ರಿ.ಶ.೧೧೧೩

೬೬. ಗದಗ, ಎಸ್.ಐ.ಐ.೨೦. ಶಾ.ಸಂ.೧೧೪ ಕ್ರಿ.ಶ.೧೧೧೬

೬೭. ಎಲೆಶಿರೂರ, ಎಸ್.ಐ.ಐ.೧೧. ಶಾ.ಸಂ.೧೬೭ ಕ್ರಿ.ಶ.೧೧೧೮

೬೮. ಶಿರೊಳ, ಎಸ್.ಐ.ಐ.೧೧. ಶಾ.ಸಂ.೧೭೭ ಕ್ರಿ.ಶ.೧೧೨೧

೬೯. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೮೧ ಕ್ರಿ.ಶ.೧೧೨೨

೭೦. ಮುಳಗುಂದ. ಎಸ್.ಐ.ಐ.೧೧. ಶಾ.ಸಂ.೧೯೮ ಕ್ರಿ.ಶ.೧೨೩-೨೪

೭೧. ವೇತಾಆಲೂರು. ಎಸ್.ಐ.ಐ.೧೧. ಶಾ.ಸಂ.೧೭೩ ಕ್ರಿ.ಶ.೧೧೨೪

೭೨. ಡಂಬಳ, ಎಸ್.ಐ.ಐ.೧೧. ಶಾ.ಸಂ.೧೭೫ ಕ್ರಿ.ಶ.೧೧೨೪

೭೩. ಚಿಕ್ಕವಡ್ಡಟ್ಟಿ, ಎಸ್.ಐ.ಐ.೧೧. ಶಾ.ಸಂ.೧೭೮ ಕ್ರಿ.ಶ.೧೧೨೭

೭೪. ಗದಗ, ಎಸ್.ಐ.ಐ.೧೧. ಶಾ.ಸಂ.೨೦೧

೭೫. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೯೯ ಕ್ರಿ.ಶ.೧೧೨೮

೭೬. ಗದಗ, ಎಸ್.ಐ.ಐ.-- ಶಾ.ಸಂ.-- ಕ್ರಿ.ಶ.೧೧೩೭

೭೭. ಕಣವಿ, ಎಸ್.ಐ.ಐ.೧೧. ಶಾ.ಸಂ.೧೬೭ ಕ್ರಿ.ಶ.೧೧೪೧

೭೮. ಚಿಕ್ಕವಡ್ಡಟ್ಟಿ, ಎಸ್.ಐ.ಐ.೧೫. ಶಾ.ಸಂ.೨೯ ಕ್ರಿ.ಶ.೧೧೪೫

೭೯. ಬೂದಿಹಾಳ, ಎಸ್.ಐ.ಐ.೧೫. ಶಾ.ಸಂ.೩೩ ಕ್ರಿ.ಶ.೧೧೪೭

೮೦. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೧೭ ಕ್ರಿ.ಶ.೧೧೪೭

೮೧. ಹೊಸೂರು, ಎಸ್.ಐ.ಐ.೧೫. ಶಾ.ಸಂ.೫೧ ಕ್ರಿ.ಶ.೧೧೫೫

೮೨. ಎಲೆಶಿರೂರ, ಎಸ್.ಐ.ಐ.೧೫. ಶಾ.ಸಂ.೧೦೭ ಕ್ರಿ.ಶ.೧೧೬೭

೮೩. ಹರ್ತಿ, ಎಸ್.ಐ.ಐ.೧೫. ಶಾ.ಸಂ.೧೨೦ ಕ್ರಿ.ಶ.೧೧೭೩

೮೪. ಕಣವಿ, ಎಸ್.ಐ.ಐ.೧೫. ಶಾ.ಸಂ.೧೨೧ ಕ್ರಿ.ಶ.೧೧೭೩

೮೫. ಮುಳಗುಂದ, ಎಸ್.ಐ.ಐ.೧೫. ಶಾ.ಸಂ.೧೩೧ ಕ್ರಿ.ಶ.೧೧೭೮

೮೬. ಡಂಬಳ, ಎಸ್.ಐ.ಐ.೧೫. ಶಾ.ಸಂ.೫೭ ಕ್ರಿ.ಶ.೧೧೮೪

೮೭. ಗದಗ, ಎಸ್.ಐ.ಐ.೧೫. ಶಾ.ಸಂ.೧೪೦ ಕ್ರಿ.ಶ.೧೧೮೪

೮೮. ಚಿಂಚಲಿ, ಎಸ್.ಐ.ಐ.೧೫. ಶಾ.ಸಂ.೬೪ ಕ್ರಿ.ಶ.೧೦೮೫

೮೯. ಮುಳಗುಂದ, ಎಸ್.ಐ.ಐ.೧೫. ಶಾ.ಸಂ.೪೦

೯೦. ಹೊಸೂರು, ಎಸ್.ಐ.ಐ.೧೫. ಶಾ.ಸಂ.೬೯ ಕ್ರಿ.ಶ.೧೧೮೬

೯೧. ಡಂಬಳ, ಎಸ್.ಐ.ಐ.೧೫. ಶಾ.ಸಂ.೫೬೯ ಕ್ರಿ.ಶ.೧೨ ಶ

೯೨. ಮೇವುಂಡಿ, ಎಸ್.ಐ.ಐ.೧೧. ಶಾ.ಸಂ.೩೦ ಕ್ರಿ.ಶ.೧೨ ಶ

೯೩. ಹೊಸೂರು, ಎಸ್.ಐ.ಐ.೧೫. ಶಾ.ಸಂ.೨೩೯ ಕ್ರಿ.ಶ.೧೨ ಶ

೯೪. ಹೊಸೂರು. ಎಸ್.ಐ.ಐ.೧೫. ಶಾ.ಸಂ.೨೧೯ ಕ್ರಿ.ಶ.೧೨೦೭

೯೫. ಮುಳಗುಂದ ಎಸ್.ಐ.ಐ.೧೫. ಶಾ.ಸಂ.೨೨೦ ಕ್ರಿ.ಶ.೧೨೦೭

೯೬. ನಾಗಾವಿ. ಎಸ್.ಐ.ಐ.೧೫. ಶಾ.ಸಂ.೨೨೧ ಕ್ರಿ.ಶ.೧೨೧೧

೯೭. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೯೮ ಕ್ರಿ.ಶ.೧೨೨೭

೯೮. ನಾಗಾವಿ, ಎಸ್.ಐ.ಐ.೧೫. ಶಾ.ಸಂ.೨೧೫ ಕ್ರಿ.ಶ.೧೨೪೪

೯೯. ನೀಲಗುಂದ, ಎಸ್.ಐ.ಐ.೧೫. ಶಾ.ಸಂ.೬೮೫ ಕ್ರಿ.ಶ.೧೫೨೪

೧೦೦. ನಾಗಾವಿ, ಎಸ್.ಐ.ಐ.೧೫. ಶಾ.ಸಂ.೧೮೯ ಕ್ರಿ.ಶ.೧೨೫೫

೧೦೧. ಅಸುಂಡಿ, ಎಸ್.ಐ.ಐ.೧೫. ಶಾ.ಸಂ.೨೦೧ ಕ್ರಿ.ಶ.೧೨೮೯

೧೦೨. ಶಿರೂರ, ಎಸ್.ಐ.ಐ.೧೫. ಶಾ.ಸಂ.೨೦೨ ಕ್ರಿ.ಶ.೧೭೯೧

೧೦೩. ಮುಳಗುಂದ, ಎಸ್.ಐ.ಐ.೧೫. ಶಾ.ಸಂ.೬೭೧ ಕ್ರಿ.ಶ.೧೫ ಶ

೧೦೪. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೦೭ ಕ್ರಿ.ಶ.೧೧೩೮

೧೦೫. ಗದಗ, ಎಸ್.ಐ.ಐ.೧೫. ಶಾ.ಸಂ.೧೫೦ ಕ್ರಿ.ಶ.೧೯೯೧

೧೦೬ ಗದಗ, ಎಸ್.ಐ.ಐ.೧೫. ಶಾ.ಸಂ.೨೦೮ ಕ್ರಿ.ಶ.೧೯೯೨

೧೦೭. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೨೫೭ ಕ್ರಿ.ಶ.೧೫೭೬

೧೦೮. ಗದಗ, ಎಸ್.ಐ.ಐ.೧೧. ಶಾ.ಸಂ.೪೮ ಕ್ರಿ.ಶ.೧೦೦೨

೧೦೯. ಪೇಠಾಆಲೂರು, ಇ.ಐ.೧೬. ಮ.ಸಂ.೨೭–೩೧ ಕ್ರಿ.ಶ.೧೦೧೦

೧೧೦. ಶಿರೂರ, ಎಸ್.ಐ.ಐ.೧೧. ಶಾ.ಸಂ.೮೨ ಕ್ರಿ.ಶ.೧೦೪೮

೧೧೧. ಕೋರ್ಲಹಳ್ಳಿ, ಎಸ್.ಐ.ಐ.೧೧. ಶಾ.ಸಂ.೮೬ ಕ್ರಿ.ಶ.೧೦೫೦

೧೧೨. ಮುಳಗುಂದ, ಎಸ್.ಐ.ಐ.೧೧. ಶಾ.ಸಂ.೯೭ ಕ್ರಿ.ಶ.೧೦೬೨

೧೧೩. ಅಸುಂಡಿ, ಎಸ್.ಐ.ಐ.೧೧. ಶಾ.ಸಂ.೧೦೦ ಕ್ರಿ.ಶ.೧೦೬೪

೧೧೪. ಪೇಠಾಆಲೂರು, ಎಸ್.ಐ.ಐ.೧೧. ಶಾ.ಸಂ.೧೦೧ ಕ್ರಿ.ಶ.೧೦೬೮

೧೧೫. ಲಕ್ಕುಂಡಿ, ಎಸ್.ಐ.ಐ.೧೧. ಶಾ.ಸಂ.೧೮೭ ಕ್ರಿ.ಶ.೧೧೦೪

೧೧೬. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೭೮ ಕ್ರಿ.ಶ.೧೧೧೮

೧೧೭. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ೮೩ ಕ್ರಿ.ಶ.೧೧೨೩

೧೧೮. ಪೇಠಾಆಲೂರು, ಎಸ್.ಐ.ಐ.೧೧. ಶಾ.ಸಂ.೧೭೩ ಕ್ರಿ.ಶ.೧೧೨೪

೧೧೯. ಎಲೆಶಿರೂರ, ಎಸ್.ಐ.ಐ.೧೧. ಶಾ.ಸಂ.೫೦ ಕ್ರಿ.ಶ.೧೦೦೫

೧೨೦. ಡಂಬಳ, ಎಸ್.ಐ.ಐ.೧೫. ಶಾ.ಸಂ.೨೦೦ ಕ್ರಿ.ಶ.೧೨೮೩

೧೨೧. ಗದಗ, ಎಸ್.ಐ.ಐ.೧೫. ಶಾ.ಸಂ.೨೫೩ ಕ್ರಿ.ಶ.೧೫೩೯

೧೨೨. ಸೊರಟೂರು, ಎಸ್.ಐ.ಐ.೧೫. ಶಾ.ಸಂ.೨೬೨ ಕ್ರಿ.ಶ.೧೫೪೭

೧೨೩. ಬ್ಯಾಲವಾಡಗಿ, ಎಸ್.ಐ.ಐ.೧೫. ಶಾ.ಸಂ.೭೦೨ ಕ್ರಿ.ಶ.೧೬ ಶ

೧೨೪. ಚಿಂಚಲಿ, ಎಸ್.ಐ.ಐ.೧೧. ಶಾ.ಸಂ.೧೫

೧೨೫. ಸೊರಟೂರು, ಎಸ್.ಐ.ಐ.೧೧. ಶಾ.ಸಂ.೨೦ ಕ್ರಿ.ಶ.೮೮೩

೧೨೬ ಚಿಂಚಲಿ, ಎಸ್.ಐ.ಐ.೧೧. ಶಾ.ಸಂ.೨೭ ಕ್ರಿ.ಶ.೯೦೪

೧೨೭ ಶಿರೂರು, ಇ.ಐ.೧೫. ಪು.ಸಂ.೩೩೪ ಕ್ರಿ.ಶ.೧೦೪೦

೧೨೮. ತಾಮ್ರಗುಂಡಿ, ಎಸ್.ಐ.ಐ.೧೧. ಶಾ.ಸಂ.೯೨ ಕ್ರಿ.ಶ.೧೦೫೪

೧೨೯. ಚಿಂಚಲಿ, ಎಸ್.ಐ.ಐ.೧೧. ಶಾ.ಸಂ.೧೦೮ ಕ್ರಿ.ಶ.೧೦೭೯

೧೩೦. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೫೩೩ ಕ್ರಿ.ಶ.೧೦೭೬

೧೩೧. ಡೋಣಿ, ಎಸ್.ಐ.ಐ.೧೧. ಶಾ.ಸಂ.೧೪೦ ಕ್ರಿ.ಶ.೧೦೯೬

೧೩೨. ಸೊರಟೂರು, ಎಸ್.ಐ.ಐ.೧೧. ಶಾ.ಸಂ.೧೪೫ ಕ್ರಿ.ಶ.೧೦೯೮

೧೩೩. ಗದಗ, ಎಸ್.ಐ.ಐ.೨೦. ಶಾ.ಸಂ.೩೪೦ ಕ್ರಿ.ಶ.೧೧ಶ

೧೩೪. ಗದಗ, ಎಸ್.ಐ.ಐ.೨೦. ಶಾ.ಸಂ೧೦೪ ಕ್ರಿ.ಶ.೧೧೦೧

೧೩೫. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೬೬ ಕ್ರಿ.ಶ.೧೧೦೨

೧೩೬. ಗದಗ, ಎಸ್.ಐ.ಐ.೧೧. ಶಾ.ಸಂ.೧೫೦ ಕ್ರಿ.ಶ.೧೧೦೨

೧೩೭. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೨೨ ಕ್ರಿ.ಶ.೧೧೦೭

೧೩೮. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೧೯೮ ಕ್ರಿ.ಶ.೧೧೧೮

೧೩೯. ಕುರ್ತುಕೋಟಿ, ಎಸ್.ಐ.ಐ.೧೧. ಶಾ.ಸಂ.೨೦೦ ಕ್ರಿ.ಶ.೧೧೨೬

೧೪೦. ಕುರ್ತುಕೋಟಿ, ಎಸ್.ಐ.ಐ.೧೫. ಶಾ.ಸಂ.೧೭ ಕ್ರಿ.ಶ.೧೧೩೮

೧೪೧. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೨೧ ಕ್ರಿ.ಶ.೧೧೪೦

೧೪೧ಎ. ಕಣವಿ, ಎಸ್.ಐ.ಐ.೧೧. ಶಾ.ಸಂ.– ಕ್ರಿ.ಶ.೧೧೪೨

೧೪೨. ಎಲೆಶಿರೂರ, ಎಸ್.ಐ.ಐ.೧೫. ಶಾ.ಸಂ.೨೫ ಕ್ರಿ.ಶ.೧೧೪೪

೧೪೩. ಹೊಸೂರು, ಎಸ್.ಐ.ಐ.೧೫. ಶಾ.ಸಂ.೩೬ ಕ್ರಿ.ಶ.೧೧೪೮

೧೪೪. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೪೮ ಕ್ರಿ.ಶ.೧೧೫೨

೧೪೫. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೪೮ ಕ್ರಿ.ಶ.೧೧೫೨

೧೪೬. ಲಕ್ಷ್ಮೇಶ್ವರ, ಇ.ಐ.೧೬. ಪು.ಸಂ.೩೫–೪೪ ಕ್ರಿ.ಶ.೧೧೫೩

೧೪೭. ಗದಗ, ಎಸ್.ಐ.ಐ.೧೫. ಶಾ.ಸಂ.೧೦೩ ಕ್ರಿ.ಶ.೧೧೬೨

೧೪೮. ಹರ್ತಿ, ಎಸ್.ಐ.ಐ.೧೫. ಶಾ.ಸಂ.೨೪೦ ಕ್ರಿ.ಶ.೧೧೭೩

೧೪೯. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೧೩೫ ಕ್ರಿ.ಶ.೧೧೭೯

೧೫೦. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೬೦ ಕ್ರಿ.ಶ.೧೧೮೪

೧೫೧. ಗದಗ, ಎಸ್.ಐ.ಐ.೧೫. ಶಾ.ಸಂ.೧೪೦ ಕ್ರಿ.ಶ.೧೧೮೪

೧೫೨. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೬೦ ಕ್ರಿ.ಶ.೧೧೮೪

೧೫೩. ಗದಗ, ಎಸ್.ಐ.ಐ.೧೫. ಶಾ.ಸಂ.೬೬ ಕ್ರಿ.ಶ.೧೧೮೫

೧೫೪. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೩೦ ಕ್ರಿ.ಶ.೧೧೮೭

೧೫೫. ಗದಗ, ಎಸ್.ಐ.ಐ.೧೫. ಶಾ.ಸಂ.೨೧೪ ಕ್ರಿ.ಶ.೧೧೯೯
೧೫೬. ಬೆಂತೂರು, ಎಸ್.ಐ.ಐ.೧೫. ಶಾ.ಸಂ.೨೧೫ ಕ್ರಿ.ಶ.೧೨೦೦
೧೫೭. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೫೬೧ ಕ್ರಿ.ಶ.೧೨ ಶ
೧೫೮. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೫೬೧ ಕ್ರಿ.ಶ.೧೨ ಶ
೧೫೯. ಬೆಂತೂರು, ಎಸ್.ಐ.ಐ.೧೫. ಶಾ.ಸಂ.೨೧೮ ಕ್ರಿ.ಶ.೧೨೦೫
೧೬೦. ಗದಗ, ಎಸ್.ಐ.ಐ.೧೫. ಶಾ.ಸಂ.೧೫೯ ಕ್ರಿ.ಶ.೧೨೧೩
೧೬೧. ಲಕ್ಷ್ಮೇಶ್ವರ ಎಸ್.ಐ.ಐ.೨೦. ಶಾ.ಸಂ.೧೯೧ ಕ್ರಿ.ಶ.೧೨೧೫
೧೬೨. ನಾಗಾವಿ, ಎಸ್.ಐ.ಐ.೧೫. ಶಾ.ಸಂ.೧೬೨ ಕ್ರಿ.ಶ.೧೨೧೫
೧೬೩. ಮುಳಗುಂದ, ಎಸ್.ಐ.ಐ.೧೫. ಶಾ.ಸಂ.೧೭೦ ಕ್ರಿ.ಶ.೧೨೨೪
೧೬೪. ಗದಗ, ಎಸ್.ಐ.ಐ.೧೫. ಶಾ.ಸಂ.೬೭೯ ಕ್ರಿ.ಶ.೧೨೨೫
೧೬೫. ಹರ್ತಿ, ಎಸ್.ಐ.ಐ.೧೫. ಶಾ.ಸಂ.೧೭೬ ಕ್ರಿ.ಶ.೧೨೩೬
೧೬೬. ನಾಗಾವಿ, ಎಸ್.ಐ.ಐ.೧೫. ಶಾ.ಸಂ.೧೮೧ ಕ್ರಿ.ಶ.೧೨೪೬-೪೭
೧೬೭. ಗದಗ, ಎಸ್.ಐ.ಐ.೧೫. ಶಾ.ಸಂ.೬೨೦ ಕ್ರಿ.ಶ.೧೩ ಶ
೧೬೮. ಗದಗ, ಎಸ್.ಐ.ಐ.೧೫. ಶಾ.ಸಂ.೬೨೧ ಕ್ರಿ.ಶ.೧೩ ಶ
೧೬೯. ಗದಗ, ಎಸ್.ಐ.ಐ.೧೫. ಶಾ.ಸಂ.೬೨೧ ಕ್ರಿ.ಶ.೧೩ ಶ
೧೭೦. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೩೮೦ ಕ್ರಿ.ಶ.೧೪೩೨
೧೭೧. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೩೯೦ ಕ್ರಿ.ಶ.೧೫೧೩
೧೭೨. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೩೨೧ ಕ್ರಿ.ಶ.೧೫೫೯
೧೭೩. ಮುಂಡರಗಿ, ಎಸ್.ಐ.ಐ.೧೫. ಶಾ.ಸಂ.೭೦೧ ಕ್ರಿ.ಶ.೧೬ ಶ
೧೭೪. ಗದಗ, ಎಸ್.ಐ.ಐ.೧೧.ಶಾ.ಸಂ.೧೦೩೨ ಕ್ರಿ.ಶ.೧೦೩೭
೧೭೫. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೬೭ ಕ್ರಿ.ಶ.೧೧೭೯
೧೭೬. ಸೊರಟೂರು, ಎಸ್.ಐ.ಐ.೧೫. ಶಾ.ಸಂ.೧೦ ಕ್ರಿ.ಶ.೧೦೭೬-೧೧೨೬
೧೭೭. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೩೧೫ ಕ್ರಿ.ಶ.೧೨-೧೩ ಶ
೧೭೮. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.-- ಕ್ರಿ.ಶ.೧೬-೧೭ ಶ
೧೭೯. ಗದಗ, ಎಸ್.ಐ.ಐ.೧೧. ಶಾ.ಸಂ.೭೨ ಕ್ರಿ.ಶ.೧೦೩೭
೧೮೦. ಕುರ್ತುಕೋಟಿ, ಎಸ್.ಐ.ಐ.೧೧. ಶಾ.ಸಂ.೧೨೭ ಕ್ರಿ.ಶ.೧೦೮೨
೧೮೧. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೩೭ ಕ್ರಿ.ಶ.೧೧೬೧
೧೮೨. ಡೋಣಿ, ಎಸ್.ಐ.ಐ.೧೫. ಶಾ.ಸಂ.೬೭೩ ಕ್ರಿ.ಶ.೧೫ ಶ
೧೮೩. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೪೪ ಕ್ರಿ.ಶ.೧೧೬೬

೧೮೪. ವೆಂಕಟಾಪೂರ, ಎಸ್.ಐ.ಐ.೧೧. ಶಾ.ಸಂ.೨೮ ಕ್ರಿ.ಶ.೯೦೭

೧೮೫. ನೀಲಗುಂದ, ಇ.ಐ.೪ ಪು.ಸಂ೨೦೪-೨೦೮ ಕ್ರಿ.ಶ.೯೮೨

೧೮೬. ಸೊರಟೂರು, ಎಸ್.ಐ.ಐ.೧೧. ಶಾ.ಸಂ.೧೩೭ ಕ್ರಿ.ಶ.೧೦೯೧-೯೨

೧೮೭. ಮುಳಗುಂದ, ಎಸ್.ಐ.ಐ.೧೧. ಶಾ.ಸಂ.೨೦೩ ಕ್ರಿ.ಶ.೧೦೭೬-೧೧೨೬

೧೮೮. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೧೨೫ ಕ್ರಿ.ಶ.೧೧೭೪

೧೮೯. ಗದಗ, ಎಸ್.ಐ.ಐ.೧೫. ಶಾ.ಸಂ.೬೬ ಕ್ರಿ.ಶ.೧೧೮೫

೧೯೦. ಲಕ್ಕುಂಡಿ, ಎಸ್.ಐ.ಐ.೧೧. ಶಾ.ಸಂ.೫೫೯ ಕ್ರಿ.ಶ. ೧೨ ಶ

೧೯೧. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೨೨೨ ಕ್ರಿ.ಶ.೧೨೦೨

೧೯೨. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೧೬೭ ಕ್ರಿ.ಶ.೧೨೨೩

೧೯೩. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೩೮೪ ಕ್ರಿ.ಶ.೧೫ ಶ

೧೯೪. ಗದಗ, ಕೃಷ್ಣದೇವರಾಯನ ಶಾಸನಗಳು ಸಂ ಡಾ॥ ಡಿ.ವಿ. ಪರಶಿವಮೂರ್ತಿಕ್ರಿ.ಶ.೧೫೫೯

೧೯೫. ಗದಗ, ಎಸ್.ಐ.ಐ.೨೦. ಶಾ.ಸಂ.-- ಕ್ರಿ.ಶ.೧೫೫೩

೧೯೬. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೪೭ ಕ್ರಿ.ಶ.೧೦೭೪

೧೯೭. ಹೈತಾಪೂರ, ಎಸ್.ಐ.ಐ.೧೫. ಶಾ.ಸಂ.೪೯೩ ಕ್ರಿ.ಶ.೯ ಶ

೧೯೮. ಕುರ್ತುಕೋಟಿ, ಎಸ್.ಐ.ಐ.೧೧. ಶಾ.ಸಂ.೧೨೭ ಕ್ರಿ.ಶ.೧೦೮೨

೧೯೯. ಗದಗ, ಎಸ್.ಐ.ಐ.೨೦. ಶಾ.ಸಂ.೧೦೪ ಕ್ರಿ.ಶ.೧೧೦೧

೨೦೦. ಲಕ್ಕುಂಡಿ, ಎಸ್.ಐ.ಐ.೧೧. ಶಾ.ಸಂ.೧೯೬ ಕ್ರಿ.ಶ.೧೧೨೧

೨೦೧. ಬೆಂತೂರು, ಎಸ್.ಐ.ಐ.೧೫. ಶಾ.ಸಂ.೧೬೧ ಕ್ರಿ.ಶ.೧೨೧೪

೨೦೨. ಮುಂಡರಗಿ, ಎಸ್.ಐ.ಐ.೧೫. ಶಾ.ಸಂ.೬೬೫ ಕ್ರಿ.ಶ.೧೪೦೪

೨೦೩. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೫೫ ಕ್ರಿ.ಶ.೧೦೮೨

೨೦೪. ಲಕ್ಷ್ಮೇಶ್ವರ, ವಾರವಧುಮಣ್ಣನೆ ಗೌರಲೆಯ ಅಪ್ರಕಟಿತ ಶಾಸನ ಪ್ರಕಟಣೆ ಡಾ॥ಡಿ.ವಿ.ಪರಮಶಿವಮೂರ್ತಿ ಇತಿಹಾಸ ದರ್ಶನ

೨೦೫. ಸೊರಟೂರು, ಎಸ್.ಐ.ಐ.೧೫. ಶಾ.ಸಂ.೫೩೪ ಕ್ರಿ.ಶ.೧೧ ಶ

೨೦೬. ಗದಗ, ಎಸ್.ಐ.ಐ.೨೦. ಶಾ.ಸಂ.-- ಕ್ರಿ.ಶ.೧೧೦೧

೨೦೭. ಲಕ್ಕುಂಡಿ, ಎಸ್.ಐ.ಐ.೧೫. ಶಾ.ಸಂ.೨೧೯ ಕ್ರಿ.ಶ.೧೧೯೫

೨೦೮. ಕಣವಿ, ಎಸ್.ಐ.ಐ.೨೦. ಶಾ.ಸಂ.ಕ್ರಿ.ಶ.೯೬

೨೦೯. ಗದಗ, ಎಸ್.ಐ.ಐ.೨೦. ಶಾ.ಸಂ.೧೦೪ ಕ್ರಿ.ಶ.೧೧೦೧

೨೧೦. ಗದಗ, ಕೃಷ್ಣದೇವರಾಯನ ಶಾಸನಗಳು ಸಂ ಡಾ॥ಡಿ.ವಿ.ಪರಮಶಿವಮೂರ್ತಿ ಕ್ರಿ.ಶ.೧೫೫೯

೨೧೧. ಲಕ್ಕುಂಡಿ, ಎಸ್.ಐ.ಐ.೧೧. ಶಾ.ಸಂ.೧೯೬ ಕ್ರಿ.ಶ.೧೧೨೧

೨೧೨. ಶಿರೂರು, ಇ.ಐ.೧೫ ಮು.ಸಂ.೩೩೪ ಕ್ರಿ.ಶ.೧೦೪೦

೨೧೩. ಶಿರೂರ, ಎಸ್.ಐ.ಐ.೧೧. ಶಾ.ಸಂ.೭೫ ಕ್ರಿ.ಶ.೧೦೪೨

೨೧೪. ಗದಗ, ಇ.ಐ.೧೫. ಮು.ಸಂ.೩೪೮ ಕ್ರಿ.ಶ.೧೦೯೯

೨೧೫. ಹೊಸೂರು, ಎಸ್.ಐ.ಐ.೧೫. ಶಾ.ಸಂ.೫೧ ಕ್ರಿ.ಶ.೧೧೫೫

# ಅಧ್ಯಾಯ ೩

## ಸ್ಮಾರಕ ಶಾಸನಗಳು

೩.೧. ಪೀಠಿಕೆ

೩.೨. ರಾಜಕೀಯ ಹೋರಾಟದ ವೀರಗಲ್ಲುಗಳು

೩.೩. ತುರುಗೊಳ್ ಕದನ

೩.೪. ಮಹಾಸತಿ ಕಲ್ಲುಗಳು

೩.೫. ನಿಸಿಧಿ ಶಾಸನಗಳು

೩.೬. ಆತ್ಮಬಲಿ ಕಲ್ಲುಗಳು

# ೩

# ಸ್ಮಾರಕ ಶಾಸನಗಳು

## ೩.೧. ಪೀಠಿಕೆ

ನಮ್ಮ ಜನರು ವೀರರು, ಶೂರರು, ಧೀರರೂ ಆಗಿದ್ದು, ಪ್ರಾಚೀನ ಕಾಲದಿಂದಲು ಹಲವಾರು ಯುದ್ಧಗಳಲ್ಲಿ ಮತ್ತು ಹೋರಾಟಗಳಲ್ಲಿ ಬಲಿದಾನಗೈದಿರುವರು. ಅಷ್ಟೇ ಏಕೆ ತಮ್ಮ ಗ್ರಾಮದ ತುರುಗಳನ್ನು ಕಳ್ಳರಿಂದ ಬಿಡಿಸಲು, ಆಪತ್ತಿಗೆ ಸಿಲುಕಿದ ಹೆಣ್ಣು ಮಕ್ಕಳನ್ನು ರಕ್ಷಿಸಲು, ಊರಿಗೆ ನುಗ್ಗಿದ ಕಳ್ಳರನ್ನು ಓಡಿಸಲು ಮತ್ತು ಊರ ರಕ್ಷಣೆಗಾಗಿ ಆತ್ಮಾಭಿಮಾನದಿಂದ ಹೋರಾಡಿ ಮಡಿದ ವೀರರ ಬಗ್ಗೆ ಶಾಸನಗಳು ಮಾಹಿತಿ ನೀಡುತ್ತವೆ. ಅಲ್ಲದೆ ಪತಿಯೇ ಪರದೈವ ಎಂದು ತಿಳಿದಿದ್ದ ನಮ್ಮ ಸ್ತ್ರೀಯರು ಸಹಗಮನವನ್ನು ಮಾಡಿರುವುದು ಮಹಾಸತಿ ಶಾಸನಗಳಿಂದ ನಮಗೆ ತಿಳಿಯುತ್ತದೆ. ರಾಜನ ರಕ್ಷಣೆಗಾಗಿಯೇ ಇದ್ದ ಒಂದು ಪಡೆ ರಾಜ ಮಡಿದಾಗ ಆತನ ಹಿಂದೆ ತಾವೂ ಬಲಿಯಾಗುತ್ತಿದ್ದರು. ಇಂತಹವರನ್ನು ವೇಳೆವಾಳಿಗಳು, ಜೋಳವಾಳಿಗಳು, ಲೆಂಕರು ಮತ್ತು ಗರುಡರು ಎಂದು ಕರೆಯುತ್ತಿದ್ದರು. ಹೊಯ್ಸಳರ ಕಾಲದ ಹಳೇಬೀಡಿನ ಕುವರಲಕ್ಷ್ಮನ ಶಾಸನ ಈ ಬಗ್ಗೆ ಹೆಚ್ಚು ಮಾಹಿತಿ ನೀಡುತ್ತದೆ. ಮನುಷ್ಯ–ಮನುಷ್ಯರ ಹೊರಾಟವಷ್ಟೆ ಅಲ್ಲದೆ, ಪ್ರಾಣಿ–ಪ್ರಾಣಿಗಳು ಅಂದರೆ ಹುಲಿ–ನಾಯಿ, ಹಂದಿ–ನಾಯಿಗಳು ಹೋರಾಟ ಮಾಡಿರುವ ವಿಷಯವನ್ನು ತಿಳಿಸುವ ಹಲವಾರು ಶಾಸನಗಳೂ ನಮ್ಮ ನಾಡಿನಲ್ಲಿವೆ. ಗದಗ ಜಿಲ್ಲೆಯ ದಕ್ಷಿಣ ಭಾಗದಲ್ಲಿ ದೊರೆತಿರುವ ಇಂತಹ ಸ್ಮಾರಕ ಶಾಸನಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

ಸ್ಮಾರಕ ಶಾಸನಗಳ ಅಧ್ಯಯನವನ್ನು ಶಾಸನಸಹಿತ ಮತ್ತು ಶಾಸನರಹಿತ ಸ್ಮಾರಕ ಶಾಸನಗಳೆಂದು ಎರಡು ವಿಧಗಳಲ್ಲಿ ನೋಡಬಹುದು. ಇವುಗಳಲ್ಲಿ ಶಾಸನವಿರಲಿ ಇಲ್ಲದಿರಲಿ ಅವುಗಳ

ಆಶಯ ಮಾತ್ರ ಒಂದೇ ಆಗಿರುತ್ತದೆ. ಇವುಗಳಲ್ಲಿ ವೀರಗಲ್ಲುಗಳು, ಮಹಾಸತಿಕಲ್ಲುಗಳು, ಆತ್ಮಬಲಿಕಲ್ಲುಗಳು, ಪ್ರಾಣಿಬೇಟೆಕಲ್ಲುಗಳು, ಮುಂತಾದವುಗಳನ್ನು ನೋಡಬಹುದು.

**೩.೨. ರಾಜಕೀಯ ಹೋರಾಟದ ವೀರಗಲ್ಲುಗಳು**

"ಜೀತೇನ ಲಭ್ಯತೆ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನೀ ಕಾ ಯೇ ಕಾ ಚಿಂತಾ ಮರಣೇ ರಣೆ"

ಎಂಬ ಶ್ಲೋಕದಂತೆ ನಮ್ಮ ವೀರರು 'ಹೋರಾಟದಲ್ಲಿ ಗೆದ್ದರೆ ಲಕ್ಷ್ಮೀ, ಮರಣ ಹೊಂದಿದರೆ ಸುರಾಂಗನೆಯರು ಸಿಗುವರು.ಕ್ಷಣದಲ್ಲಿ ನಾಶವಾಗುವ ಈ ದೇಹಕ್ಕಾಗಿ ಚಿಂತೆಯೇಕೆ ?. ಹೋರಾಡು ಇಲ್ಲ ಸಾಯಿ' ಎಂಬ ತತ್ವಕ್ಕೆ ಬದ್ಧರಾದವರು. ಅವರ ವೀರತ್ವದ ನೆನಪಿಗಾಗಿ ನಮ್ಮ ಜನ ನೂರಾರು ವೀರಸ್ಮಾರಕಗಳನ್ನು ನಿಲ್ಲಿಸಿದ್ದಾರೆ. ಅಂತಹವುಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ. ನಮ್ಮ ರಾಜರು ತಮ್ಮ ರಾಜ್ಯವಿಸ್ತರಣೆಗಾಗಿ ತಮ್ಮ ಸೈನ್ಯಬಲವನ್ನು ಕಟ್ಟಿಕೊಂಡು ಇತರೆ ರಾಜ್ಯಗಳ ರಾಜರ ಮೇಲೆ ಯುದ್ಧವನ್ನು ಮಾಡುತ್ತಿದ್ದುದು ಸರ್ವೆಸಾಮಾನ್ಯವಾಗಿತ್ತು. ಅಲ್ಲದೆ ಗಡಿಸಮಸ್ಯೆಗಳು ರಾಜ್ಯರಾಜ್ಯಗಳ ನಡುವೆ ಎಷ್ಟೋಯುದ್ಧಗಳಿಗೆ ಕಾರಣವಾಗಿರುವಂತೆಯೇ ರಾಜರುಗಳ ಸ್ವಪ್ರತಿಷ್ಟೆಗಳೂ ಸಹ ಇಂತಹ ಯುದ್ಧಗಳಿಗೆ ಕಾರಣೀಭೂತವಾಗಿವೆ. ಪಂಪಕವಿಯು ತನ್ನ ವಿಕ್ರಮಾರ್ಜುನ ವಿಜಯ ಕಾವ್ಯದಲ್ಲಿ ಈ ರೀತಿ ಹೇಳುತ್ತಾನೆ.

"ಒತ್ತಿ ತಱುಂಬಿನಿಂದ ರಿಪುಬೂಜ ಸಮಾಜದ ಬೇರ್ಗಳಂ ನಭ
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕಡೆ ಕಾಯದೆ ಚಾಗದೊಳ್ಪನ
ಚ್ಚೊತ್ತದ ಪೊಣ್ದು ಬಾಟ್ವ ಪುೞುವಾಸನನೆಂಬನ್, ಅಜಾಂಡ ಮೆಂಬುದೊಂ
ದತ್ತಿಯ ಪಣ್ಣೊಳಿರ್ಪ ಪುೞುವಲ್ಲದೆ ಮಾನಸನೇ ಮುರಾಂತಕಾ॥"

ಬಲವಾಗಿ ನಿಂತ ವೈರಿಗಳ ಬೇರುಗಳನ್ನು ಕಿತ್ತು ಆಕಾಶಕ್ಕೆ ಒಗೆಯದೇ, ವೈರಿ ಬಂದು ಮೊರೆಹೊಕ್ಕಾಗ ಅವನನ್ನು ಕಾಯದೇ, ತ್ಯಾಗದ ಒಳ್ಳೆಯತನದ ಅಚ್ಚು ಒತ್ತದೆ ಬಾಳುವ ಮನುಷ್ಯನು ಹತ್ತಿಯ ಹಣ್ಣಿನಲ್ಲಿರುವ ಹುಳುವಿನಂತೆ ಈ ಪ್ರಪಂಚದಲ್ಲಿದ್ದಾನೆ. ಆದರೆ ಹೀಗೆ ಮಾಡದೇ ವೈರಿಯನ್ನು ಕೊಲ್ಲುವ, ಶರಣಾದಾಗ ಕಾಯುವ ಹಾಗೂ ಒಳ್ಳೆಯತನದ, ತ್ಯಾಗದ ಮೌಲ್ಯಗಳನ್ನು ಹೊತ್ತಿರಬೇಕೆಂದು ಕವಿ ಪಂಪ ಅಭಿಪ್ರಾಯಪಡುತ್ತಾನೆ.

ಕ್ರಿ.ಶ.೮೬೪ನೇ ವರ್ಷದ ಒಂದನೇ ಅಮೋಘವರ್ಷನ ಕಾಲದ ಬೆಂತೂರಿನ ಶಾಸನವೊಂದು "ಸ್ವಸ್ತಿ ಶಕನೃಪ ಕಾಲತೀತ ಸಂವತ್ಸರ ಶತಂಗಳ್ ಎಣ್ನೂಱೆಣ್ಭತ್ತಯ್ದನೆಯ ತಾರಣ ಸಂವತ್ಸರಂ ಪ್ರವರ್ತಿಸುತ್ತಿರೆ ಸ್ವಸ್ತ್ಯಮೋಘವರ್ಷ ಆರೀಪ್ರಿಥುವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ

ಪರಮಭಟ್ಟಾರಕರ ಪ್ರಿಥುವೀರಾಜ್ಯಂಗೆಯ್ಯೆ ಶ್ರೀಮ. . .ಪ್ಪಯ್ಯಂಕುರರು. . . . . . ಮೂವತ್ತಜುವರುಮರಸುಂ ಚಿಕ[ಂ]ಣ್ಣಜ್ಗೆ ಪದಿ. . .ಗೊಟ್ಟರಲ್ಲಿಯಜು ಮತ್ತರ್ಕ್ಕೆಯ್ಯಂ ಒಂಬತ್ತುಗಯ್ಮ. .[ತ][ಜೆ]ವರಿಯರ ಮಿದನಜೆ. .ಕವಿಲೆಯನಟಿ." ಎಂಬುದಾಗಿ ಯಾವುದೋ ಹೋರಾಟದಲ್ಲಿ ಚಿಕಂಣ್ಣ ಮಡಿದುದಕ್ಕೆ ಅವನ ನೆನಪಿಗೆ ಪೋದಿಯಮ್ಮ ಈ ಶಾಸನವನ್ನು ಮಾಡಿಸಿರುವುದಾಗಿ ತಿಳಿದುಬರುತ್ತದೆ.[೨] ಇದು ಬಹಳ ತ್ರುಟಿತವಾಗಿರುವುದರಿಂದ ವಿಷಯವನ್ನು ತಿಳಿಯುವುದು ಬಹಳ ಕಷ್ಟವಾಗಿದೆ.

ಕ್ರಿ.ಶ.೮೯೭ರ ೨ನೇ ಕೃಷ್ಣನ ಕಾಲದ ಚಿಂಚಲಿ ಶಾಸನವು "ಸಕನೃಪಕಾಲಾತೀತಸಂವತ್ಸರ ಶತಂಗಳೆಣ್ಬುನೂಱಪತ್ತೊಂಭತ್ತನೆಯ ಪಿಂಗಳನೆಂಬ ವರ್ಷಂ ಪ್ರವರ್ತ್ತಿಸೆ ಸದ್ವರಿಷಾಭ್ಯಾನ್ತರದೊಳ್[ಶ್ರೀ]ಚಿಂಚಿಲ[ದ]ಅಯ್ವತ್ತಜುವರುಂ ಮಹಾಜನಂ ನೆರದಿರಲು . . . . .ವುರುದಂಣ್ಣ[ಲ್ಗೊಗ್ಲೆ]ಯರ ಮಗಳ್ ಕಾಳಬ್ಬೆ. . . .ಯ್ದೆ ಬೀಳಿಸಿ ಕಲ್ಲಂ ನಿಜೆಸಿದೋರ್" ಎಂದು ಮಡಿದ ಯಾವೊದೂ ಒಬ್ಬ ವೀರನ ನೆನಪಿಗಾಗಿ ಅಯ್ವುತ್ತಮಿವರುಂ ಮಹಾಜನರ ಎದುರಿನಲ್ಲಿ ವೀರಗಲ್ಲು ನಿಲ್ಲಿಸಿದ ಉಲ್ಲೇಖ ಸಿಗುತ್ತದೆ.[೩] ಹೆಚ್ಚಿನ ವಿಷಯ ತಿಳಿಯಲು ಇದು ಬಹಳ ತೃಟಿತವಾಗಿದೆ.

ಎಲೆಶಿರೂರಿನಲ್ಲಿ ಕ್ರಿ.ಶ.೧೦೦೬ರ ಸತ್ಯಾಶ್ರಯ ಇರಿವಬೆಡಂಗನ ಕಾಲದ ವೀರಗಲ್ಲು ಇದ್ದು, ಇದು ಉಣಕಲ್ಲ ಕೋಟೆಯ ಯುದ್ಧದಲ್ಲಿ ಉಣಕಲ್ಲ ಕೋಟೆಯೊಳಗಿಟ್ಟಣಿ ಸನ್ದಣೆಯಾಗಿ ನೂಂಕೆಮ್ಮ[ಣ[ದಾ ಕೇತ ಪೆಣೆದಿಜೆದು ಸತ್ತೊಡಚ್ಚರಗಣಿಕೆಯರೊಡಗೊಣ್ಡು ದೇವಲೋಕಕುಯ್ದರ್" ಎಂಬುದಾಗಿ ಲೆಂಕಗೇತನು ಹೋರಾಡಿ ಮಡಿದ ವಿಷಯದ ಬಗ್ಗೆ ತಿಳಿಸುತ್ತದೆ.[೪]

ಗದುಗಿನ ಶಾಸನವೊಂದು ಬಹಳ ತೃಟಿತವಾಗಿದ್ದು, ಇದು ಮಾಧವರಾಜನ ಸ್ತುತಿ ಮಾಡುತ್ತದೆ. ಅವನ ಹೋರಾಟವನ್ನು ತೈಲನೇ ಮೆಚ್ಚಿದ್ದನು. ಇವನನ್ನು "ದಣ್ಡಿನ ಧಾಳಿಯಂ ತುಳಿದ ದುರ್ಲ್ಲಘಮಾಗಿರ್ದಂ" ಎನ್ನುತ್ತದೆ ಶಾಸನ. ಇವನು ಚೋಳರೊಡನೆ ಹೋರಾಡಿದುದನ್ನು ನೆನಪಿಸುತ್ತದೆ.[೫]

೧೦ನೇ ಶತಮಾನದ ಹೊಸೂರಿನ ಶಾಸನವೊಂದು ಯಾವುದೋ ಒಂದು ಯುದ್ದದಲ್ಲಿ ಒಬ್ಬ ವೀರ ಮರಣ ಹೊಂದುವುದನ್ನು ತಿಳಿಸುತ್ತದೆ.[೬]

ಕ್ರಿ.ಶ.೧೧೭೧ರಲ್ಲಿ ಹರ್ಲಾಪೂರ ಶಾಸನವು ರಾಯಮುರಾರಿ ಸೋವಿದೇವನ ಕಾಲದ್ದಾಗಿದ್ದು ಇದು ಯಾವುದೋ ವೀರನು ಮರಣ ಹೊಂದಿದ್ದು ಅವನ ನೆನಪಿಗೆ ನಿಲ್ಲಿಸಿದ ವೀರಗಲ್ಲು ಎಂದು ತಿಳಿಸುತ್ತದೆ.[೭]

ಮುಂಡರಗಿ ತಾಲೂಕಿನ ಶಿರೂರಿನ ಶಾಸನವು ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು, ಇದು ಬಾಗಲಮಾಹಾದೇವಿ ಮತ್ತು ಅವಳ ಮಾವ ಪೆರ್ಗಡೆ ಮಾರ್ತಡಯ್ಯರ ಉಲ್ಲೇಖವನ್ನು ತಿಳಿಸುತ್ತದೆ.[೮]

೧೧ನೇ ಶತಮಾನದ ಎಲೆಶಿರೂರಿನ ಶಾಸನವು ಪೂರೆಗನುಮಾಯಿಚ ವೀರನು ಮಡಿದುದ್ದರ ನೆನಪಿಗೆ ವೀರಗಲ್ಲನ್ನು ನಡೆಸಿದ್ದ ಬಗ್ಗೆ ತಿಳಿಸುತ್ತದೆ.[೯]

ಮುಳಗುಂದದ ಕ್ರಿ.ಶ.೧೧೮೪ರ ಶಾಸನವು ಮುಳಗುಂದದ ಚಿಂದಿಯ ಚಂದಂಣನು ರಣದಲು ಮಡಿದ ಎಂದು ತಿಳಿಸುತ್ತದೆ.[೧೦]

೧೨ನೇ ಶತಮಾನದ ಲಕ್ಷ್ಮೇಶ್ವರದ ಶಾಸನವು "[ದಿ]ಲ್ಲಿಯ[ಕೆ]ಳಿದಡೆ ಕಂಣಿಕ [ಸಿಹೇಸಜಿ] ಬಿತ್ತದೆಂದು ಮಿಕ್ಕೆಲ್ಲನುಪ್ರಾ[ಲ*]ರೆ(ಂ)ಮ್ಮತಲೆಯಿಂ ನೋರ್ಪ್ಪನು ಸತ್ತುಬೆ[ಂದರಾ] ಬಲ್ಲಿದ ಕಂಪಿಲಂ ಸಿಡಿಲಬೊ(ಂ)ಮ್ಮನು ಸತ್ತಡೆ ಅಕ್ಕಟೆಂದಯಿಂತೆಲ್ಲರು ಚಿಂತಿಸುತ್ತಿಹುದು ಯೇನರಿದೋ ಧವಳಂಕಭೀಮನಾ॥" ಎಂದು ಕಂಪಿಲ ಮತ್ತು ಸಿಡಿಲಬೊಮ್ಮನು ಯುದ್ಧದಲ್ಲಿ ಮಡಿದುದ್ದನ್ನು ಕೇಳಿ ಎಲ್ಲಾ ಜನರು ಚಿಂತಿಸುತ್ತಿದ್ದರು ಎಂಬುದಾಗಿ ಹೇಳಲಾಗಿದೆ. ಮತ್ತೊಂದು ಶಾಸನದಲ್ಲಿ "ಸ್ವಸ್ತಿ ಶ್ರೀಮನುಮಹಾಮಂಡಳೇಶ್ವರ ಹುಲಿಗೆಜುನಾಡ ಮಂನೆಯ ಬೊಪ್ಪದೇವರ್ಜ್ಜಯಕೇಸಿದೇವರ್ಸ್ಸರ ಮಗ. .ನ[ಡ]ಯನಾಯಕನ.. . ."ಎಂದಿದೆ. ಇದು ಬಹಳ ತೃಟಿತವಾಗಿದ್ದು, ಅಪೂರ್ಣವಾಗಿದೆ. ಜಯಕೇಶಿ ದೇವರ ಮಗ ಮತ್ತು ಬೊಪ್ಪದೇವರ ಎಂಬುವರ ಹೆಸರನ್ನು ಹೇಳುತ್ತದೆ.[೧೧]

ಕ್ರಿ.ಶ.೧೧೮೪ರ ಮುಳಗುಂದ ಶಾಸನವು "ಶ್ರೀ ಕ್ರೋದ್ದ ವೈಸಾಖ ಸುದ್ಧ ಪೋರ್ಣ್ಣಮೆಯ ಗುರುವಾರದಲು ಮುಳುಗುಂದದ ಚಿಂದಿಯ ಚಂದಂಣನು ರಣದೆಲು ಮಡಿದ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀಶ್ರೀ ಎಂಬುದಾಗಿ ತಿಳಿಸುತ್ತದೆ.[೧೨]

ಕ್ರಿ.ಶ.೧೨೫೯ರ ಲಕ್ಷ್ಮೇಶ್ವರ ಶಾಸನವು ಯಾದವ ದೊರೆ ಕನ್ನರನ ಕಾಲದ್ದಾಗಿದ್ದು, ಇದು ಚಾಮುಂಡ ದಂಡೇಶ ಸೇವಕನಾದ ಆಚಿದೇವನ ಹೆಂಡತಿ ಲಕ್ಕಿಲೆ ಮತ್ತು ಅವಳ ಮಕ್ಕಳು ವೀರಮರಣ ಹೊಂದಿದ ಬಗ್ಗೆ ತಿಳಿಸುತ್ತದೆ. ಇದರಲ್ಲಿ "ಬೈಲನ ಕಲಿತನವತಿ ಚೋದ್ಯಮಾಯ್ತು ಲೋಕಕೆಲ್ಲ"[೧೩] ಎಂದು ಹೇಳುತ್ತದೆ.

ಕ್ರಿ.ಶ.೧೨೭೫ರ ಮುಳಗುಂದದ ಶಾಸನವು "ಶ್ರೀಮತ್ಸರಟೂರ ತಿಳಕರಸ ಭೂಜಾದೋರ್ಧಂಡನ ಶ್ರೀಮನ್ಮಾಹಾಪ್ರಧಾನಂ ಬಾಹತ್ತರ ನಿಯೋಗಾಧಿಪತಿ ನಿಯೋಗದುರಂದರ ಮಂತ್ರಿಲಲಾಮನಪ್ಪಹೆಗ್ಗಡೆ ದೇವಂಣ್ಣನ ಮಗ ಅಮ್ರಿತಯ್ಯನು ಸ್ವರ್ಗಕ್ಕೆ ಸಂದನು[೧೪]" ಎಂದು ಹೇಳುತ್ತದೆ.

ಕ್ರಿ.ಶ.೧೨೮೭ರ ಲಕ್ಷ್ಮೇಶ್ವರ ಶಾಸನವು ಯಾದವದೊರೆ ರಾಮಚಂದ್ರನ ಕಾಲಕ್ಕೆ ಸೇರಿದ್ದು, ಇದು ತೃಟಿತವಾಗಿದೆ. ತಿಳಿಯುವ ಅಲ್ಪ ವಿಷಯವೆಂದರೆ ಮುಮ್ಮಡಿ ಸಿಂಗನಾಯಕನ ಮೇಲೆ ಯುದ್ಧವನ್ನು ಮಾಡಲು ಆಗ ಹುಲಿಗೆರೆಯ ಸೈನ್ಯಾಧಿಪತಿಯಾಗಿ ಹೋಗಿದ್ದ ದಾಮನಾಯಕ ಆ ಹೋರಾಟದಲ್ಲಿ ಮಡಿದ ಸುದ್ದಿಯನ್ನು ಹೇಳುತ್ತದೆ.[೧೫] ಅವನ ನೆನಪಿಗಾಗಿ ಹಾಕಿರುವ ವೀರಗಲ್ಲು ಇದು.

೧೩ನೇ ಶತಮಾನದ ಸೊರಟೂರಿನ ವೀರಗಲ್ಲೊಂದು "ಮಹಾಮಂಡಲೇಶ್ವರ ತಿಳಕರ್ಸರ ಕುಮಾರರ್ಸರು ನಾಲ್ಕು ದುರ್ಗಗಳನ್ನು ಗೆದ್ದು ನಿಡುಗಲ್ಲಿಗೆ ದಾಳಿಯನ್ನು ಮಾಡಿದಾಗ ಬಿಲ್ಲಾಳು ಹರಿಪೆಯ ನಾಯ್ಕನು ಮರಣಹೊಂದಿದ ವಿಚಾರವನ್ನು ಹೇಳುತ್ತದೆ."[೧೬] ನಾಲ್ಕು ಕೋಟೆಗಳು ಯಾವುವು ಎಂಬುದನ್ನು ತಿಳಿಯಲು ಈ ಶಾಸನವು ತೃಟಿತವಾಗಿದೆ.

ಕ್ರಿ.ಶ.೧೪೨೧ರ ಮುಳಗುಂದದ ಚಂದ್ರನಾಥ ಬಸದಿಯಲ್ಲಿರುವ ಶಾಸನವು "ಶ್ರೀಮತ್ಸರಟೂರ ತಿಳಕರಸರ ಭೂಜಾದೊರ್ದ್ದಂಡ ಸನ್ಮದನ ಶ್ರೀಮನ್ಮಹಾಪ್ರಧಾನ ಬಹತ್ತರ ನಿಯೋಗಾಧಿಪತಿ ನಿಯೋಗ ಯೋಗಂದರಾ ಮಂತ್ರಿತಿಲಕನುಮಪ್ಪ ಹೆಗ್ಗಡೆಸೇನೆಬೋವ ಮಧುವರಸನ ಮಗ ನಾಗರಸನು ಸ್ವರ್ಗಕ್ಕೆ ಸಂದನು,[೧೭]" ಎಂಬುದಾಗಿ ತಿಳಿಸುತ್ತದೆ.

೧೬ನೇ ಶತಮಾನದ ಮುಳಗುಂದದ ಶಾಸನವೊಂದು ಶ್ರೀಜಿನಪಾರ್ಶ್ವನಾಥ ಬಸದಿಯನ್ನು ಸುಡಲು ಬಂದಂತಹ ಮುಸ್ಲೀಮರೊಂದಿಗೆ ಹೋರಾಟವನ್ನು ಮಾಡಿ ಆ ಯುದ್ಧದಲ್ಲಿ ಸಹಸ್ರಕೀರ್ತಿಯು ಮರಣ ಹೊಂದಿದ ಬಗ್ಗೆ ತಿಳಿಸುತ್ತದೆ.[೧೮]

**೩.೩. ತುರುಗೊಳ್ ಕದನ**

ರನ್ನ ಕವಿಯು ತನ್ನ ಗದಾಯುದ್ಧ ಕೃತಿಯಲ್ಲಿ ತುರುಗೊಳ್, ಸ್ತ್ರೀ, ಊರು ರಕ್ಷಣೆಯ ಬಗ್ಗೆ ಈ ರೀತಿ ಹೇಳುತ್ತಾನೆ.

ತುಱುಗೊಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಱೊಳೂರಱೆವಿನೊಳಂ
ತಱೆಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತುಂ ಷಂಡಂ ॥[೧೯]

ಮೇಲಿನ ಪದ್ಯದ ಆಧಾರದಿಂದ ಆ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು, ಸ್ತ್ರಿಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತು ಎಂಬುದು ತಿಳಿಯುತ್ತದೆ. ಯಾವ ಕಾರಣದಿಂದಲಾದರು ಶತ್ರುಗಳು ದನಕರುಗಳನ್ನು ಅಪಹರಿಸಿದಾಗ ಆ ದನಕರುಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ಆ ಹೋರಾಟದಲ್ಲಿ ಕೆಲವರು ಗೆದ್ದು ಹಿಂತಿರುಗಿದರೆ, ಕೆಲವರು ಸಾವನ್ನಪ್ಪುತ್ತಿದ್ದರು. ಇಂತಹ ವೀರರ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲುಗಳನ್ನು ನಾವು ಸುಲಭವಾಗಿ ಗುರುತಿಸಬಹುದು.

ಕ್ರಿ.ಶ.೮೮೩ರ ಶಿರುಂಜದ ಶಾಸನವು ಎರಡನೇ ಕೃಷ್ಣನ ಕಾಲದ್ದಾಗಿದ್ದು, ಅದು "ಕಿಡಿಲೆಗಧಿಪಾಣ್ಣನ್ ಎರೆಯಮ್ಮಂನಿವುದಿ ತೊರುಗೊಳೊಳ್ಕಾದಿ ಸತೋನ್ ಈ ಕಲ್ಲ ಶ್ರೀಬುತೇಂದ್ರಗಾವ್ಯಣ್ಣಂ

ಕೊಮ್ಮಗುರೆಯಮ್ಮನಿರಿಸಿದೋರ್"[೨೦] ಎಂದು ಹೇಳುತ್ತದೆ. ಎರೆಯಮ್ಮ ಎಂಬುವನು ತುರುಗೊಳ್ ಕದನದಲ್ಲಿ ಹೋರಾಡಿ ಮಡಿದ ವಿಚಾರದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ.೯೨೮-೨೯ರ ಶಿರುಂಜದ ಶಾಸನವು ಎರಡನೇ ಅಮೋಘವರ್ಷನ ಕಾಲದ್ದಾಗಿದ್ದು, ಅದು ಬೆಳ್ವೊಲ-೩೦೦ನ್ನು ಕೆಲಿವಿಟ್ಟರಸರು ಆಳುತ್ತಿದ್ದಾಗ, ತುರುಗೊಳ್ ಕಾಳಗದಲ್ಲಿ ಮಡಿದ ಯಾರೋ ಒಬ್ಬ ವೀರನ ಬಗ್ಗೆ ತಿಳಿಸುತ್ತದೆ.[೨೧] ಈ ಶಾಸನ ಬಹಳ ತೃಟಿತವಾಗಿದ್ದು ವೀರನ ಹೆಸರು ದೊರೆಯುವುದಿಲ್ಲ.

ಕ್ರಿ.ಶ.೧೦೪೯ರ ಶಾಸನವು ಬೆಂತೂರಿನಲ್ಲಿದ್ದು, ಇದು ಒಂದನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು ಅತಿ ತೃಟಿತವಾಗಿದೆ. ಇದರಲ್ಲಿ "ಸಕವರ್ಷ ೯೭೦ನೆಯ ಸರ್ವ್ವಧಾರಿ(ಚ) ಸಂವತ್ಸರದ ಫಾಲ್ಗುಣ ಸುದ್ಧ ಪಂಚಮಿ ಸೋಮವಾರದನ್ದು ॥ಕ॥ ಎರಡರನೂಱಱ ಪೆರ್ಗ್ಗಡೆ ವರಪುತ್ರಂ ಮಾದಿರಾಜನತಿಕೋಪದಿ ನ[ನ್ತಿ]ರ[ದೆ] ಬೆನತೂರ ತುಱುವಂ [ತಜ್ದಿ]ಸಿದನನ್ದಣ್ಣಿಗೆಜೆಗೆ ತ[ಜಿ]ಸಲ ನಿನ್ದಂ ॥ ಇನ್ತನ್ಯಾಯದಿಂ ತುಱುವಂ ಕೊಣ್ಡು ಪೋಗಲು . . .ಯೋಧ ಮಹಾಜನಮಂ ಬಡಿದೊಡೆ ॥ಕ॥ ಬಡಿಕೊಳೆ ಮಾಣ್ಬ . . . . . . ಮಾರ್ಪ್ಪನೆನ್ದು ತಳ್ವಿಲ್ಲದೆ ಇರ್ತ್ತಡೆ ತಿ[ವಿದು] ಸತ್ತಂ" ಎಂದು, ಎರಡುನೂರರ ಪೆಗ್ಗಡೆಯವರ ವರಪುತ್ರ ಮಾದಿರಾಜನು ಗೋಗ್ರಣದಲ್ಲಿ ಅಕಳುಗಳನ್ನು ರಕ್ಷಿಸಿದ, ಈ ಸಮಯದಲ್ಲಿ ಮಾದಿಮಯ್ಯಂಗೆ ಮೂವತ್ತಾರುವರುಂ ಭೂದಾನ ಬಿಟ್ಟ ವಿಚಾರವನ್ನು ತಿಳಿಸುತ್ತದೆ.[೨೨]

**೩.೪. ಮಹಾಸತಿಕಲ್ಲು**

ನಮ್ಮ ವೀರರು ಹೋರಾಟದಲ್ಲಿ ಮಡಿದಾಗ ಅವರ ಹಿಂದೆಯೇ ಅವರ ಹೆಂಡತಿಯರು ಸಹಗಮನ ಮಾಡಿರುವುದು ತಿಳಿದುಬರುತ್ತದೆ. ಇಂತಹ ಶಾಸನಗಳು ದಕ್ಷಿಣ ಗದಗು ಭಾಗದಲ್ಲಿ ಬೆರಳೆಣಿಕೆಯಷ್ಟು ದೊರೆಯುತ್ತವೆ. ಪತಿಯು ಕಾರಣಾಂತರಗಳಿಂದ ಮಡಿದಾಗ ಅವನ ಸತಿಯೂ ಕೂಡ ಬೆಂಕಿಗೆ ಬಿದ್ದು ಪ್ರಾಣವನ್ನು ಅರ್ಪಿಸುತ್ತಿದ್ದಳು. ಇದು ಅವಳ ಪತಿಭಕ್ತಿಯನ್ನು ತೋರಿಸುವ ಆಚರಣೆಯಾದರೂ ಇದರ ಹಿಂದೆ ಸಾಮಾಜಿಕ ಕಟ್ಟಳೆಗಳು, ಸಂಪ್ರದಾಯಗಳು, ಶೋಷಣೆಯ ಅಂಶಗಳು ಬಲವಾದ ಪ್ರೇರಣೆಯನ್ನು ನೀಡುತ್ತಿದ್ದವು. ಗಂಡನ ಹಿಂದೆಯೇ ಸತಿಯಾಗದವಳಿಗೆ ಸಮಾಜದಲ್ಲಿ ಅಷ್ಟಾಗಿ ಗೌರವವಿರಲಿಲ್ಲ. ಅಲ್ಲದೆ ಪ್ರಾಚೀನ ಕಾಲದಲ್ಲಿ ಪತಿಯಿಲ್ಲದೆ ಸತಿಗೆ ಬದುಕು ಹಾಗೂ ರಕ್ಷಣೆಗೆ ಅನ್ಯಮಾರ್ಗವಿಲ್ಲದೆ ಈ ರೀತಿ ಆಚರಣೆಯನ್ನು ಅನಿವಾರ್ಯವಾಗಿಯಾದರೂ ಆಚರಿಸಬೇಕಾಗಿತ್ತು. ಕರ್ನಾಟಕದ ಮಹಿಳೆಯರು ಈ ಪದ್ಧತಿಯನ್ನು ನಿರಾಕರಿಸಿದ್ದರ ಬಗ್ಗೆ ಶಾಸನಗಳಲ್ಲಿ ಎಲ್ಲೂ ಉಲ್ಲೇಖ ದೊರೆಯುವುದಿಲ್ಲ. ಇದರಿಂದಾಗಿ ಕರ್ನಾಟಕದಲ್ಲಿ ಸತಿ ಪದ್ಧಿತಿಯನ್ನು ಆನಂದದಿಂದ ಸ್ವೀಕರಿಸಿದ್ದರು, ಅನುಮೊದಿಸಿದ್ದರೆಂದು ತಿಳಿಯಬೇಕಾಗಿಲ್ಲ. ಶಾಸನಗಳನ್ನು ಸತಿಪದ್ಧತಿಯ ಆಚರಣೆ ಮುಗಿದ ನಂತರ ಹಾಕಿಸುತ್ತಿದ್ದರಿಂದ ಬೇಕೆಂದೇ ಅದರಲ್ಲಿ ನಿರಾಕರಣೆಯ ಅಂಶಗಳನ್ನು

ಪ್ರಕಟಪಡಿಸುತ್ತಿರಲಿಲ್ಲ ಅಥವಾ ನಿರಾಕರಿಸಿದ ಉಲ್ಲೇಖಗಳು ನಮಗೆ ಇನ್ನೂ ದೊರೆಯದೇ ಇರಬಹುದು.

ಕ್ರಿ.ಶ.೧೪೦೭ರ ಒಂದು ಶಾಸನವು ಗದಗು ತಾಲೂಕಿನ ಕಣವಿಯ ಮೈಲಾರ ದೇವಾಲಯದಲ್ಲಿದ್ದು, ಇದು ಎರಡನೇ ಹರಿಹರನ ಕಾಲಕ್ಕೆ ಸೇರಿರುತ್ತದೆ. ಇದರಲ್ಲಿ "ಕಿಲಾರಿ ಸಾಯಿನಾಯಕನ ಮಗ [ದೇವೆ]ನಾಯಕ ಅವನ ಮದವಳಿಗೆ ನಾಗಾಯಿ, ದೇಮಾಯಿಗಳು ಮಹಾಸತಿಯರಾಗಿ ಆತನ ಸಂಘಾತ ಸ್ವರ್ಗಸ್ತರಾದರು" ಎಂದು ಹೇಳುತ್ತದೆ. ಇದು ವೀರಗಲ್ಲು, ಮಹಾಸತಿ ಎರಡು ವಿಷಯಗಳನ್ನು ತಿಳಿಸುವ ಶಾಸನವಾಗಿದೆ.[೨೩]

ಮುಂಡರಗಿ ತಾಲೂಕಿನ ಕಲಕೇರಿ ಗ್ರಾಮದ ಊರ ಚಾವಡಿ ಹತ್ತಿರ ಒಂದು ಕೈ ಮೇಲಕ್ಕೆ ಎತ್ತಿದ ಒಂದು ಮಹಾಸತಿಯ ವಿಗ್ರಹವಿದ್ದು, ಅದೂ ಸಹ ಮಹಾಸತಿಯಾದವಳ ಬಗ್ಗೆ ತಿಳಿಸುತ್ತದೆ. ಆದರೆ ಯಾವುದೇ ವಿಚಾರವನ್ನು ತಿಳಿಸುವ ಲಿಪಿ ಇಲ್ಲ.[೨೪]

ಈ ಭಾಗದಲ್ಲಿ ಮಹಾಸತಿ ಕಲ್ಲುಗಳು ಬೆರಳೆಣಿಕೆಯಷ್ಟು ಮಾತ್ರ ಸಿಗುತ್ತವೆ. ದಕ್ಷಿಣ ಗದಗು ಜಿಲ್ಲೆ ಭಾಗದಲ್ಲಿ ಮಹಾಸತಿಯಾಗುವ ಪದ್ಧತಿಯು ಕಡಿಮೆ ಪ್ರಮಾಣದಲ್ಲಿದ್ದಂತೆ ಕಾಣುತ್ತದೆ. ಅಲ್ಲದೆ ಈ ಭಾಗದಲ್ಲಿ ಮಹಾಸತಿ ಶಾಸನಗಳು ಕಾಲನ ಹೊಡೆತಕ್ಕೆ ಸಿಕ್ಕಿ ನಾಶವಾಗಿರಲೂಬಹುದು. ಜೊತೆಗೆ ಈ ಭಾಗದಲ್ಲಿ ಇಂತಹ ಪದ್ಧತಿಯನ್ನು ನಮ್ಮ ಜನ ವಿರೋಧಿಸಿರಲೂಬಹುದು. ಆದ ಕಾರಣ ಇವುಗಳ ಸಂಖ್ಯೆ ಈ ಭಾಗದಲ್ಲಿ ಕಡಿಮೆಯಾಗಿರಬಹುದು ಅಥವ ಸ್ತ್ರೀಯರು ಪತಿ ಸಾವನ್ನಪ್ಪಿದಾಗ ತಮ್ಮ ಮಕ್ಕಳ ಜವಾಬ್ದಾರಿಯನ್ನು ಯಾರಿಗೆ ನೀಡಬೇಕು? ಮನುಷ್ಯರಾಗಿ ಹುಟ್ಟಿರುವ ಈ ಜನ್ಮವನ್ನು ಹಾಳುಮಾಡಿಕೊಳ್ಳದೆ ಮಕ್ಕಳ ಜೊತೆ ಅವರ ಲಾಲನೆ ಪಾಲನೆ ಬಗ್ಗೆ ಯೋಚಿಸಿ ಈ ಪದ್ಧತಿಯನ್ನು ನಿರಾಕರಿಸಿರಬಹುದು. ಅಲ್ಲದೆ ಈ ಭಾಗದಲ್ಲಿ ಯುದ್ಧಗಳು ನಡೆದಿರುವುದು ಬೆರಳೆಣಿಕೆಯಷ್ಟು ಮಾತ್ರ.

**೩.೫. ನಿಸಿಧಿ ಕಲ್ಲುಗಳು**

ಸನ್ಯಸನ ವಿಧಿಯಿಂದ ಮಡಿದವರ ಸ್ಮಾರಕವಾಗಿ ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇವುಗಳನ್ನು 'ನಿಸಿಧಿಕಲ್ಲು'ಗಳೆಂದು ಕರೆಯುತ್ತಾರೆ. ಇವುಗಳನ್ನು ಬಸದಿಗಳ ಮುಂದಿನ ಪ್ರತ್ಯೇಕ ಶಿಲಾಫಲಕಗಳಲ್ಲಿ ಬಸದಿಯ ಕಂಬಗಳ ಮೇಲೆ, ಊರ ಹೊರಗಿನ ಹೊಲಗಳಲ್ಲಿ ನೆಟ್ಟ ಕಲ್ಲುಗಳಲ್ಲಿ, ಬಂಡೆಗಳ ಮೇಲೆ ಹಾಕಿಸುತ್ತಿದ್ದರು. ಜೈನಯತಿಗಳು ಮಡಿದಾಗ ಅವರ ನೆನಪಿಗಾಗಿ ನಿಲ್ಲಿಸಿರುವ ಕಲ್ಲುಗಳೇ ನಿಸಧಿಕಲ್ಲುಗಳು. ದೈವವನ್ನು ಗುರಿಯಿಟ್ಟು ನಡೆಸುವ ಆತ್ಮಾನುಸಂಧಾನದಿಂದ ಸದ್ಗತಿ ಸಾಧ್ಯವೆಂದು ಭಾವಿಸಿದ ನಮ್ಮ ಪೂರ್ವಜರು ದೇವರಿಗಾಗಿ ಕೈಗೊಳ್ಳುವ ಬಲಿದಾನದಿಂದಲೂ ಸದ್ಗತಿ ಸಾಧ್ಯವೆಂದು ನಂಬಿ ಆತ್ಮಾರ್ಪಣ

ಮಾಡಿಕೊಳ್ಳುವ ಸಂಪ್ರದಾಯ ನಡೆದು ಬಂದಿರುವುದು ಈ ಅಂಶಗಳಿಂದ ತಿಳಿದುಬರುತ್ತದೆ. ಇಂತಹ ಶಾಸನಗಳು ಈ ಭಾಗದಲ್ಲಿ ಕೆಲವು ಇವೆ. ಅವುಗಳ ಬಗ್ಗೆ ಚರ್ಚಿಸಲಾಗಿದೆ.

ಕ್ರಿ.ಶ.೧೦೭೭-೭೮ರ ಆರನೇ ವಿಕ್ರಮಾದಿತ್ಯನ ಕಾಲದ ಲಕ್ಷ್ಮೇಶ್ವರದ ಶಾಸನವು "ಶ್ರೀಶ್ರೀನನ್ದಿಪಣ್ಡಿತ ದೇವರ್ಜ್ಜಿವಿತಾರಾಧನಾಪುರಸ್ಸರ ಮಾಸಸಲ್ಲೇಖನೆ[ಯಿಂ] ದ್ವದಿನಸನ್ಯಾವಸಾನದೊಳ್ ಶಕನೃಪಕಾಳಾತೀತ ಸಂವತ್ಸರಂ[ಗಳೊಂ]ಬಯ್ನೂಱತೊಂಬತೊಂಬತಾಗೆ ವಿಕ್ರಮಾಭ್ಯುದಯದೆರಡೆನೆಯ ಪಿಂಗಳ ಸಂವತ್ಸರ[ದಾ] ಷಾಡ ಸುದ್ಧದ್ವಾದಶಿ ಬುಧವಾರದನ್ದು ಕುನ್ತಳವಿಷಯದ ಪುರಿಕರನಗರೀ[ಭಾಳ] ಲೀಳಾತಿಳಕಾಳಂಕಾರ ಮಾದಾನೆಸೆಜ್ಜೆಯ ಬಸದಿಯೊಳ್ ಚತುರ್ವ್ವಿಧಾರಾಧ[ನೆಯಿ]ನಾದಾರಿಸಿ ಗುರುಪರಮೇಷ್ಠಿಚರಣಾನುಸ್ಮರಣಪೂರ್ವ್ವಕಮರ್ಹ[ದ್ಬಿ]ಜಮಂ ಹೃತ್ಪದ್ಮಸದ್ಮದೊಳ್ ನಿಶ್ಚಳಮಿರಿಸಿ ಯೋಗಸಮಾಧಾನಾದೀನಚಿತ್ತರಾಗಿ [ಶ][ಮಿತ] ಪರಿತ್ಯಾಗದಿನಮರಲೋಕಾವಲೋಕನಕೌತುಕದಿಂ ದೇವಲೋಕಕ್ಕೆ ವಿಜಯಂಗೆಯ್ದರ್"ಎಂದು ನಂದಿಪಂಡಿತದೇವನು ಸಲ್ಲೇಖನ ವ್ರತವನ್ನು ಕೈಗೊಂಡು ಶಕನೃಪ ಕಾಳಾತೀತ ಸಂವತ್ಸರದ ೯೯೯ರ ಪಿಂಗಳ ಸಂವತ್ಸರದ ಆಷಾಡ ಶುದ್ಧ ದ್ವಾದಶಿ ಬುಧವಾರದಂದು ಮಾದನೆ ಸೆಜ್ಜೆಯ ಬಸದಿಯಲ್ಲಿ ಮರಣ ಹೊಂದಿದರು ಎಂಬುದಾಗಿ ತಿಳಿಸುತ್ತದೆ.[೨೫]

ಕ್ರಿ.ಶ.೧೩ನೇ ಶತಮಾನದ ಸೊರಟೂರಿನ ಶಾಸನವು "ಸ್ವಸ್ತಿ ಶ್ರೀಮತು ನರೇಂದ್ರಸೇನ ಭಟ್ಟರಾಕರ ಗುಡ್ಡ ಹೆಬ್ಬಾಗೆಯ ನಗಗಾಊಂಡನ ಹೆಂಡತಿಯಾದ ಪಮಿಗಉಡತಿಯು ಸ್ವರ್ಗಸ್ತಳಾದಳು" ಎಂಬುದಾಗಿ ತಿಳಿಸುತ್ತದೆ.[೨೬]

ಕ್ರಿ.ಶ.೧೪೨೦ರ ಮುಳಗುಂದದ ಶಾಸನವು "ಶ್ರೀ ಮದಾಯರಾಜ ಗುರು ಮಂಡಲಾಚಾರ್ಯ್ಯ ನಾದಿವಾದೀಸ್ವರರಾಯವದಿಸಿತಾಮಹ ಸೆಕಲವಿ[ಬಂ*] ಧಜನಚಕ್ರರ್ವ್ವಗ[ಳ] [ಪ್ಪ] ಸೇನಗಣದೆ ಹೇಮಸೇನ ಗುರುಗಳ ಪ್ರಿಯ ಗುಡ್ಡ [ಮು*]ಳಗುಂದದ ಬುಳಿಸೆಟ್ಟಿಯ ಕೇ[ಷ]ಪ್ಪನು ಸ್ವರ್ಗಸ್ಥನಾದ ನಿಸ್ತಿಕೆಯ ಕಲ್ಲ ನಿಲಿಸಿದೆರು ಮಂಗಳ ಮಹಾಶ್ರೀ" ಎಂದು ಅವನ ನೆನಪಿಗೆ ನಿಲ್ಲಿಸಿದ ನಿಸಿಧಿ[೨೭] ಎಂದು ತಿಳಿಸುತ್ತದೆ.

**೩.೬. ಆತ್ಮಬಲಿ ಕಲ್ಲುಗಳು**

ನಮ್ಮ ನಾಡಿನಲ್ಲಿ ಜೋಳವಾಳಿ, ವೇಳೆವಾಳಿ,ಕಿಳ್ಗುಂಟೆ ಮುಂತಾದ ರೀತಿಯ ಆತ್ಮಬಲಿ ಕಲ್ಲುಗಳು ನಮಗೆ ದೊರೆಯುತ್ತವೆ. ವೇಳೆವಾಳಿತನವು ಕೃತಜ್ಞತೆಯ ಪರಾಕಾಷ್ಠೆಯ ಆಚರಣೆ. ತಮಗೆ ಅನ್ನವಿಟ್ಟ ಒಡೆಯನು ಮಡಿದರೆ ತಾವೂ ಮಡಿಯುವುದಾಗಿ ಹಲವರು ಪ್ರತಿಜ್ಞೆ ಕೈಗೊಳ್ಳುತ್ತಿದ್ದರು. ಹೀಗೆ ಪ್ರತಿಜ್ಞೆಯನ್ನು ಕೈಗೊಳ್ಳುವುದನ್ನು 'ವೇಳೆವಾಳ್' ಎಂದು ಕರೆಯಲಾಗಿದೆ. ತಮ್ಮ ಒಡೆಯನು ಮಡಿದಾಗ ಅವನ ವೇಳೆವಡಿಚರರು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದರು. ಇದೇ ವೇಳೆವಾಳಿ ಶಿಲ್ಪವನ್ನು ಕೀಳ್ಗುಂಟೆ ಶಿಲ್ಪ, ಬೆಂಕಿಬಿಶಿಲ್ಪ, ಶೂಲಶಿಲ್ಪ, ತಲೆಕಡಿಸಿಕೊಳ್ಳುವ ಶಿಲ್ಪ, ಸಿಡಿತಲೆಶಿಲ್ಪ ಮತ್ತು ಲೆಂಕರಶಿಲ್ಪ ಎಂದು

ವಿಂಗಡಿಸಬಹುದು. ಕೀಳ್ಗುಂಟೆಶಿಲ್ಪ ಎಂಬುದನ್ನು ಒಡೆಯನ ಸಮಾಧಿ ಕೆಳಗೆ ಆಳನ್ನು ಹೂಳುವುದು ಎಂದು ಡಾ॥ಎಂ.ಎಂ.ಕಲಬುರ್ಗಿ ಅಭಿಪ್ರಾಯಪಡುತ್ತಾರೆ. ಈ ರೀತಿ ಹೂಳಿಸಿಕೊಳ್ಳುವ ವ್ಯಕ್ತಿಗಳಿಗೆ ಬೆಳವಡಿಚ, ಮನೆಮಗತ್ತಿನ್, ಪ್ರೇಮಾಲಯಸುತನ್, ಕುಲಮುದ್ದ, ಮನೆಮುದ್ದ, ಪೊರೆದಮಗನ್. ಪ್ರಿಯ ಪುತ್ರ ಎಂದು ಕರೆಯುತ್ತಿದ್ದರು.

ಕ್ರಿ.ಶ.೮೬೫ರ ಒಂದನೇ ಅಮೋಘವರ್ಷನ ಕಾಲಕ್ಕೆ ಸೇರಿದ ಮೇವುಂಡಿ ಶಾಸನವೊಂದು ವೇಳಾವಾಳಿತನವನ್ನು ಕುರಿತು ಪ್ರಸ್ತಾಪಿಸುವ ಈ ಭಾಗದ ಮೊಟ್ಟಮೊದಲ ಶಾಸನ. ಈ ಶಾಸನದಲ್ಲಿ "ಸ್ವಸ್ತಮೋಘವರ್ಷ ಶ್ರೀಪೃಥುವೀವಲ್ಲಭ ಮಹಾರಾಜಾಧಿರಾಜಂಪರಮೇಶ್ವರ ಭಟಾ[ರ]ಕ[ರ] ಪೃಥುವೀರಾಜ್ಯಂಗೆಯೆ . . . ಸಂಪನ್ನ ಯಾದವ ವಂಶೋ. . .[ರ್ವ್ವ] ಧವಟಡ್ಗುಣಾಳಂ. . .ದಿ. .ಶ್ರೀಮತ್ತುಪ್ಪೆಯರಸರ . . .ಮಗ ನಣ್ಬುಗ ರಟ್ಟೆಯ[ಣ್ಣ][ಸಂ] ಬೆಳಾ[ವ]ಡಿಚ ಮೇಟಿಮಡುವಿಟ್ಟುಅರ[ಸ] ನಮೆ[ಯ್ಗೆ] ಕರಮೆಂಬು[ದ]ಂ ಕೇಳ್ದುಲ್ಲ ಮುನ್ದನಿನ್ದು ಕೂಟಾತೂಜಿದು ಮೂವತ್ತು ಗಾವುದ. . . ದೆವಸದೊಳೆಯ್ದಿ ಅರಸನಂ ಜಾಮಿಸಿ ನುರಿವುತ್ತಿಟ್ಟುದಂ ಕಣ್ದು ಕೀಟ್ಟುಗಣ್ಪೆಯಾಗಲ್ಕು[ಡ]ದುದಮಂ ಕುಡುವೆನೆನ್ದು ಪಿಡಿಖಣ್ಡ[ಂ] ಗೊಣ್ದು ದೆಸೆವಲಿಗೆಜಿಪೊಟ್ಟುಕ[ರು]ಳ ಬೋ[ನಿಡಿ]ಗಲ್ಲೊಳಿಕ್ಕಿ ಎಟ್ಡಿ[ಯ] ಮರೆಪಲ[ರ್ಮ್ಮಾ]ಡಿಆದಿತ್ಯಂಗೆತ್ತಿ ಇತ್ತಕ್ಕೆಮೆಳ್ಗಿಲ್ಲತೋಜಿಬೇರನ್ದಜೆಯಿಸಿ. .ತೊ[ಟ್ಟಿರ್ದ್ದು]ತಂಬು. ..ಸೂಬುಗುಟ್ಟುಆಕಿಮಾರಿವೆಚ್ಚ[ಡೆ]ರ್ವಿ. . ಸಕವ. . . .ಜವಣ್ಭತ್ತಾಟನೆಯ ವರ್ಷಂ ಪೋದ[ಬ]ಟಿಕ್ಕೆ ನಿನ್ದುದೀಕಲ್ಲಿ ಪುರಿಗೆಜೆಯಿಂ ಭನ್ದ ಪೊಲೆಯಣ್ಣನ ಶಿಲಾಕರ್ಮ್ಮ ಅರ[ಕು]ಳಿಯನ ಕಲ್ಲುಮಿಕಲ್ಲು." ಎಂದು ರೆಟ್ಟಿಯಣ್ಣ ಎಂಬುವನು ತನ್ನ ಅರಸನ ಆರೋಗ್ಯ ಸರಿ ಇಲ್ಲ ಎಂದು ತಿಳಿದು ಅರಸನನ್ನು ನೋಡಲು ತಕ್ಷಣ ಹೊರಡುತ್ತಾನೆ. ಆದರೆ ಅವನು ಬರುವಷ್ಟರಲ್ಲಿ ಅರಸನ ದೇಹವು ಚಿತೆಯಲ್ಲಿ ಉರಿಯುತ್ತಿರುತ್ತದೆ. ತಕ್ಷಣವೇ ಅವನು ಖಡ್ಗದಿಂದ ತನ್ನ ಕತ್ತನ್ನು ಕತ್ತರಿಸಿಕೊಳ್ಳುತ್ತಾನೆ. ಈ ಶಾಸನ ಶಿಲ್ಪದ ಕೆಳಹಂತದ ಮೂಲೆಯಲ್ಲಿ ಒಬ್ಬ ವ್ಯಕ್ತಿಯು ಒಂದು ಆಳವಾದ ಗುಂಡಿಯೊಳಗೆ ಕುಳಿತಿದ್ದಾನೆ. ಇವನೇ ರೆಟ್ಟಿಯಣ್ಣನಿರಬಹುದು. ಈ ಗುಂಡಿಯು ಕಲ್ಲಿನ ಸಮಾಧಿಯಾಗಿದ್ದು ಇವನು ಕೂಡ ಸಾಯಲು ಸಮಾಧಿಯಲ್ಲಿ ಕುಳಿತಿದ್ದಾನೆ. ಈ ಸಮಾಧಿಯ ಮರಣವನ್ನೇ ನಿಜವಾದ ಅರ್ಥದಲ್ಲಿ ಕಿಟ್ಗುಂಟೆ ಎಂದು ಕರೆಯುವುದು. ಇದು ಮುಂದೆ ಅಗ್ನಿಪ್ರವೇಶ ಮಾಡಿದವನಿಗೂ ಕ್ರಿಯಾಪದವಾಗಿ ಬಳಕೆಯಾಗಿರಬಹುದು.[೨೮]

ಗದಗ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ಪಾಟೀಲ ಕುಲಕರ್ಣಿ ಅವರ ಬಾವಿಯ ಹತ್ತಿರವಿರುವ ಆತ್ಮಬಲಿಕಲ್ಲು ೧೨ನೇ ಶತಮಾನದ್ದಾಗಿದ್ದು ಚಾಲುಕ್ಯರ ಕಾಲಕ್ಕೆ ಸೇರುತ್ತದೆ. ಇದು ಐದು ಅಡಿ ಎತ್ತರ ಎರಡು ಅಡಿ ಅಗಲವಾಗಿದ್ದು ಮೂರು ಹಂತಗಳಿಂದ ಕೂಡಿದೆ. ಎರಡು ಪಟ್ಟಿಕೆಯಲ್ಲಿ ೧೨ನೇ ಶತಮಾನದ ಲಿಪಿಯಿದ್ದು ಇದು "ಶ್ರೀಮತು ಮಲ್ಲಿದೇವನ ಡಿಂಗರಿಗ ಕೊಪ್ಪಯ್ಯನು ಬಾವಿಮಲೋವೆಯ

ಕಾಲಕೆಳಗೆ ತಲೆಯಳಿವಿಸಿಕೊಂಡ"[೨೫] ಎಂದು ಹೇಳುತ್ತದೆ. ಅಂದರೆ ಮಲ್ಲೇದೇವನ ಸೇವಕನಾದ ಕೊಪ್ಪಯ್ಯನು ಜಾವಿಲೋವೆಯ ಸನ್ನಿದಿಯಲ್ಲಿ ತಲೆಯನ್ನು ಕತ್ತರಿಸಿಕೊಂಡು ಪ್ರಾಣ ಅರ್ಪಿಸಿದನು ಎಂಬುದಾಗಿ ವಿವರಿಸುತ್ತದೆ.

ಗದಗ ತಾಲೂಕಿನ ಬೆಳದಡಿಯ ಬಸವಣ್ಣದೇವರ ಗುಡಿಯ ಗೋಡೆಗೆ ನಿಲ್ಲಿಸಿರುವ ಸಿಡಿತಲೆಶಿಲ್ಪವನ್ನು ಇಲ್ಲಿ ಗುರುತಿಸಬಹುದು. ಈ ಶಿಲ್ಪವು ಮೂರು ಹಂತಗಳಲ್ಲಿದ್ದು, ಮೊದಲನೇ ಹಂತದಲ್ಲಿ ಸ್ತ್ರೀಯೊಬ್ಬಳು ಧ್ಯಾನಭಂಗಿಯಲ್ಲಿ ಕುಳಿತಿದ್ದಾಳೆ. ಎದುರಿಗೆ ವ್ಯಕ್ತಿಯೊಬ್ಬ ಖಡ್ಗವನ್ನು ಮೇಲಕ್ಕೆತ್ತಿಡಿದು ನಿಂತಿದ್ದಾನೆ. ಎರಡನೇ ಹಂತದಲ್ಲಿ ಅಪ್ಸರೆಯರು ಆಕೆಯನ್ನು ಹೆಗಲಮೇಲೆ ಹೊತ್ತು ಸ್ವರ್ಗಕ್ಕೆ ಸಾಗುತ್ತಿದ್ದಾರೆ. ಮೂರನೇ ಹಂತದಲ್ಲಿ ಸ್ತ್ರೀಯು ಸ್ವರ್ಗದಲ್ಲಿ ಧ್ಯಾನಾಸಕ್ತಳಾಗಿ ಕುಳಿತಿರುವಂತೆ ಚಿತ್ರಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಪಂಪನ ವಿಕ್ರಮಾರ್ಜುನ ವಿಜಯ, ಆಶ್ವಾಸ ೫, ಪದ್ಯ ೭೫
೨. ಬೆಂತೂರು, ಎಸ್.ಐ.ಐ.೧೧ ಶಾ.ಸಂ.೧೦ ಕ್ರಿ.ಶ.೮೬೪
೩. ಚಿಂಚಲಿ, ಎಸ್.ಐ.ಐ.೧೧ ಶಾ.ಸಂ.೨೪ ಕ್ರಿ.ಶ.೯೯೭
೪. ಎಲೆಶಿರೂರು, ಎಸ್.ಐ.ಐ.೧೧ ಶಾ.ಸಂ.೫೧ ಕ್ರಿ.ಶ.೧೦೦೬
೫. ಗದಗ, ಎಸ್.ಐ.ಐ.೧೧ ಶಾ.ಸಂ.೭೬ ಕ್ರಿ.ಶ.--
೬. ಹೊಸೂರು, ಎಸ್.ಐ.ಐ.೧೫ ಶಾ.ಸಂ.೫೧೮ ಕ್ರಿ.ಶ.೧೦ ಶ
೭. ಹರ್ಲಾಪೂರ, ಎಸ್.ಐ.ಐ.೧೫ ಶಾ.ಸಂ.೧೧೮ ಕ್ರಿ.ಶ.೧೧೭೧
೮. ಶಿರೂರು, ಎಸ್.ಐ.ಐ.೧೧ ಶಾ.ಸಂ.೨೦೬ ಕ್ರಿ.ಶ.---
೯. ಎಲೆಶಿರೂರು, ಎಸ್.ಐ.ಐ.-- ಶಾ.ಸಂ.-- ಕ್ರಿ.ಶ.೧೧ಶ
೧೦. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೫೪೬ ಕ್ರಿ.ಶ.೧೧೮೪
೧೧. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೨೯೪ ಕ್ರಿ.ಶ.೧೨ ಶ
೧೨. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೫೪೬ ಕ್ರಿ.ಶ.೧೧೮೪
೧೩. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೧೭ ಕ್ರಿ.ಶ.೧೨೫೯
೧೪. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೬೧೫ ಕ್ರಿ.ಶ.೧೨೭೫
೧೫. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೨೨ ಕ್ರಿ.ಶ.೧೨೮೭
೧೬. ಸೊರಟೂರು, ಎಸ್.ಐ.ಐ.೧೫ ಶಾ.ಸಂ.೬೨೨ ಕ್ರಿ.ಶ.೧೩ ಶ
೧೭. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೬೬೭ ಕ್ರಿ.ಶ.೧೪೨೧

೧೮. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೬೯೫ ಕ್ರಿ.ಶ.೧೬ ಶ

೧೯. ರನ್ನನ ಸಾಹಸಭೀಮವಿಜಯ, ಪದ್ಯ ೩

೨೦. ಶಿರುಂಜ, ಎಸ್.ಐ.ಐ.೧೧ ಶಾ.ಸಂ.೧೯ ಕ್ರಿ.ಶ.೮೮೩

೨೧. ಶಿರುಂಜ, ಕ್ರಿ.ಶ. ೯೨೮-೨೯

೨೨. ಬೆಂತೂರು, ಎಸ್.ಐ.ಐ.೧೧ ಶಾ.ಸಂ.೮೧ ಕ್ರಿ.ಶ.೧೦೪೯

೨೩. ಕಣವಿ, ಎಸ್.ಐ.ಐ.೨೦ ಶಾ.ಸಂ.೨೭೬ ಕ್ರಿ.ಶ.೧೪೦೭

೨೪. ಕಲಕೇರಿ,

೨೫. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೫೨ ಕ್ರಿ.ಶ.೧೦೭೭-೭೮

೨೬. ಸೊರಟೂರು, ಎಸ್.ಐ.ಐ.೧೫ ಶಾ.ಸಂ.೬೨೩ ಕ್ರಿ.ಶ.೧೩ ಶ

೨೭. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೬೬೬ ಕ್ರಿ.ಶ.೧೪೨೦

೨೮. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೧೧ ಕ್ರಿ.ಶ.೮೬೫

# ಅದ್ಯಾಯ:–೪

## ಶಾಸನಗಳಲ್ಲಿ ಇತಿಹಾಸ

# ೪

# ಶಾಸನಗಳಲ್ಲಿ ಇತಿಹಾಸ

## ೪.೧. ರಾಜಕೀಯ ಇತಿಹಾಸ

ನಮ್ಮ ರಾಜ್ಯದ, ದೇಶದ ಇತಿಹಾಸವನ್ನು ನಿರ್ಮಿಸಲು ಶಾಸನಗಳು ಪ್ರಮುಖ ಆಧಾರಗಳಾಗುತ್ತವೆ. ಶಾಸನಗಳನ್ನು ಹೆಚ್ಚಾಗಿ ಅರಸರು ಮತ್ತು ಅಧಿಕಾರಿಗಳು ಹಾಕಿಸುತ್ತಿದ್ದುದರಿಂದ ಮತ್ತು ಅದರಲ್ಲಿ ಅನಿವಾರ್ಯವಾಗಿ ರಾಜಕೀಯ ವಿಷಯಗಳು ಸೇರುತ್ತಿದ್ದುದರಿಂದ ಅವುಗಳನ್ನು ರಾಜಕೀಯ ಅಧ್ಯಯನಕ್ಕೆ ಮತ್ತು ಅರಸರ ವಿಚಾರಗಳ ಅಧ್ಯಯನಕ್ಕೆ ಮುಖ್ಯವಾಗಿ ಬಳಸಲಾಗುತ್ತಿದೆ. ಈ ಭಾಗದಲ್ಲಿ ಶಾಸನಗಳ ಆಧಾರದಿಂದ ದಕ್ಷಿಣ ಗದಗ ಭಾಗದಲ್ಲಿ ಆಡಳಿತ ನಡೆಸಿದ ರಾಜರುಗಳು ಮತ್ತು ಅಧಿಕಾರಿಗಳು, ಆ ಶಾಸನಗಳಲ್ಲಿನ ಸ್ಥಳನಾಮಗಳು, ಲಿಪಿಕಾರರು ಮತ್ತು ಕವಿಗಳ ಬಗ್ಗೆ ಚರ್ಚಿಸಲಾಗಿದೆ.

ಗದಗು ಜಿಲ್ಲೆಯು ಮೊದಲಿಗೆ ಧಾರವಾಡ ಜಿಲ್ಲೆಯಲ್ಲಿ ವಿಲೀನವಾಗಿತ್ತು. ೧೯೯೭ರಲ್ಲಿ ಈ ಜಿಲ್ಲೆಯನ್ನು ಪುನರ್ವಿಂಗಡಣೆ ಮಾಡಲಾಯಿತು. ಆಗ ಹುಟ್ಟಿಕೊಂಡ ಹೊಸ ಜಿಲ್ಲೆಗಳಲ್ಲಿ ಈ ಗದಗು ಜಿಲ್ಲೆಯೂ ಒಂದು. ಈ ಜಿಲ್ಲೆಯು ಉತ್ತರ ಅಕ್ಷಾಂಶ ೨೫° ಪೂರ್ವ ರೇಖಾಂಶ ೭೫.೧೬°ರಿಂದ ೭೫.೪೫°ರವರೆಗೆ ಇದೆ. ಈ ಗದಗು ಜಿಲ್ಲೆಯು ಪುಲಿಗೆರೆಯ ತಿರುಳ್ಗನ್ನಡವನ್ನು ತನ್ನ ಜೀವನಾಡಿಯನ್ನಾಗಿ ಮಾಡಿಕೊಂಡಿರುವ ಜಿಲ್ಲೆ. ಕನ್ನಡದ ಗಂಡುಮೆಟ್ಟಿನ ಸ್ಥಳವೆಂದು ಹೆಸರು ಪಡೆದಿದೆ. ಈ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಕರ್ನಾಟಕದ ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ ಹಾಗೂ ಧಾರ್ಮಿಕ ಚಟುವಟಿಕೆಗಳಲ್ಲಿ ಮಹತ್ವದ ಸ್ಥಾನ ಪಡೆದಿದೆ. ಈ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲೂ ಶಿಲಾಯುಗದ ನೆಲೆಗಳಿದ್ದು, ಗದಗ ತಾಲೂಕಿನ ಕಲ್ಲೂರು, ಬೆನಕೊಪ್ಪ, ಲಿಂಗದಾಳ, ಮುಂಡರಗಿ

ತಾಲೂಕಿನ ಕಲಕೇರಿ, ಬಿದರಹಳ್ಳಿ, ಮೇವುಂಡಿ, ಶೀರನಹಳ್ಳಿ, ರೋಣ ತಾಲೂಕಿನ ಅಸೂಟಿ, ಕುಂಟೋಜಿ, ಗೋಗೇರಿ, ಬೆಳವಣಿಕಿ, ಕೌಜಗೇರಿ, ಗಜೇಂದ್ರಗಡ, ಮೆಣಸಿಗಿ, ಯಾವಗಲ್ಲ, ರಾಜೂರ, ಸವಡಿ, ಹೊಳೆಆಲೂರು, ನರಗುಂದ ತಾಲೂಕಿನ ಅರಿಶಿಣಗೋಡಿ, ಬೂದಿಹಾಳ, ಭೈರನಹಟ್ಟಿ, ಶಿರೋಳ, ಸುರಕೋಡ, ಹಿರೇಕೊಪ್ಪ, ಮುಂತಾದವುಗಳು ಶಿಲಾಯುಗದ ನೆಲೆಗಳಾಗಿವೆ. ಈ ಗ್ರಾಮಗಳ ಹತ್ತಿರ ಶಿಲಾಯುಗದ ಕುರುಹುಗಳಾಗಿ ಕುಪ್ಪರಿಗಳು, ೩೦ ರಿಂದ ೪೦ ಅಡಿಗಳಷ್ಟು ಉದ್ದವಾಗಿದ್ದು ಇವು ಸತ್ತವರ ಸ್ಮಾರಕಗಳಾಗಿರಬೇಕು. ಅಲ್ಲದೆ ಇಲ್ಲಿಯ ಹತ್ತಿರದ ಮಟ್ಟಿಗಳಲ್ಲಿ ಸಣ್ಣ ಮಣ್ಣಿನ ಕುಡಿಕೆಗಳಲ್ಲಿ ಬೂದಿ ದೊರೆಯುತ್ತದೆ. ಗದಗವು ಮಹಾಭಾರತದಲ್ಲಿ ಕೃತಪುರವೆಂದು ಉಲ್ಲೇಖಿಸಲಾಗಿದೆ. ಇದಕ್ಕೆ ಸಂಬಂದಿಸಿದಂತೆ ಕಥೆಯೊಂದು ಇದ್ದು, ಇದು ಪಾಂಡವರ ವಂಶಜನಾದ ಪರೀಕ್ಷಿತ ರಾಜನು ಕೃತಪುರಕ್ಕೆ ಬಂದಾಗ ಸರ್ಪಕಚ್ಚಿದ ಪರಿಣಾಮ ಮರಣ ಹೊಂದುತ್ತಾನೆ. ಅದರಿಂದ ಕೋಪಗೊಂಡ ಅವನ ಮಗ ಜನಮೇಜಯನು ಸರ್ಪಸಂತತಿಯನ್ನೇ ನಾಶಮಾಡಲು ಪ್ರತಿಜ್ಞೆಮಾಡಿ ಸರ್ಪಯಾಗವನ್ನು ಮಾಡುತ್ತಾನೆ. ಆಗ ಇದರಿಂದ ಭಯಗೊಂಡ ಸರ್ಪಗಳೆಲ್ಲವು ಆಸ್ತಿಕ ಮುನಿಯನ್ನು ಮೊರೆಯಾಚಿಸುತ್ತವೆ. ಆಗ ಆಸ್ತಿಕ ಮುನಿಯು ಜನಮೇಜಯನಿಗೆ ಸರ್ಪಯಾಗವನ್ನು ಮುಂದುವರೆಸದಂತೆ ಅಡ್ಡಿಪಡಿಸುತ್ತಾನೆ. ಆ ಒಂದು ಯಜ್ಞದ ಸ್ಥಳ ಕೃತಪುರವೇ ಈ ಗದಗ ಎಂದು ಮಹಾಭಾರತದಲ್ಲಿ ಹೇಳಲಾಗಿದೆ. ಆ ಜನಮೇಜಯನು ಯಾಗದ ನಂತರ ೭೨ಜನ ಬ್ರಾಹ್ಮಣರಿಗೆ ಮನೆ, ಹೂದೋಟ, ಭೂಮಿಯನ್ನು ಇಲ್ಲಿನ ತ್ರಿಕೂಟೇಶ್ವರ ದೇವಾಲಯಕ್ಕೆ ೭೨೮ಗದ್ಯಾಣಗಳನ್ನು ದಾನವಿತ್ತುದಾಗಿ ತಿಳಿದುಬರುತ್ತದೆ.

ಈ ಜಿಲ್ಲೆಯು ಮೌರ್ಯ ದೊರೆಗಳಿಂದ ಪ್ರಾರಂಭಿಸಿ ವಿಜಯನಗರ ಅರಸರ ಆಳ್ವಿಕೆಯ ಕಾಲದವರೆಗೂ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಪ್ರಸ್ತುತ ಭಾಗವು ಪ್ರಾಚೀನ ಬೆಳ್ವಲ, ಪುಲಿಗೆರೆ ಮತ್ತು ಮಾಸವಾಡಿ ಎಂಬ ಮೂರು ನಾಡುಗಳನ್ನು ವ್ಯಾಪಿಸಿತ್ತು. ಆಡಳಿತದ ಅನುಕೂಲಕ್ಕಾಗಿ ತಮ್ಮ ಸಾಮ್ರಾಜ್ಯವನ್ನು ಅನೇಕ ವಿಭಾಗ, ಉಪವಿಭಾಗಗಳನ್ನಾಗಿ ವಿಂಗಡಿಸಿರುವುದು ಇತಿಹಾಸದಲ್ಲಿ ಕಂಡುಬರುತ್ತದೆ. ಅವುಗಳನ್ನು ಪ್ರಾಂತ, ಮಂಡಲ, ಕಂಪಣ, ದೇಶ, ವಿಷಯ, ನಾಡು, ಎಂದು ಮುಂತಾಗಿ ವಿಂಗಡಿಸಿದ ಸಂಗತಿ ಶಾಸನಗಳಲ್ಲಿ ಉಕ್ತವಾಗಿದೆ. ಇಂತಹ ವಿಭಾಗಗಳಲ್ಲಿ ಕುಂತಳ ದೇಶವೂ ಒಂದು. ಈ ಕುಂತಳ ದೇಶದಲ್ಲಿ ಸಮಾವೇಶಗೊಂಡ ಹಲವಾರು ಉಪವಿಭಾಗಗಳಿದ್ದವು. ಅವುಗಳೆಂದರೆ ಬನವಾಸಿ, ಹಲಸಿಗೆ, ಬಾಗಡಿಗೆ, ದಂಗಟಿಗೆ, ತರ್ದವಾಡಿ, ಹಾನುಗಲ್ಲು, ಕಿಸುಕಾಡು, ಕರಡಿಕಲ್ಲು, ಬೆಳ್ವೊಲ, ಮಾಸವಾಡಿ, ಪುಲಗೆರೆ ಮುಂತಾದ ವಿಭಾಗಗಳಾಗಿ ಮಾಡಲಾಗಿತ್ತು. ಕೆಲವು ಅರಸು ಮನೆತನಗಳನ್ನು ಆ ಹೆಸರಿನಿಂದಲೇ ಕರೆಯಲಾಗಿದೆ. ಗಂಗವಾಡಿ, ಸಿಂದವಗಿ, ಸೇವುಣದೇಶ, ಕದಂಬಮಂಡಲ ಮುಂತಾಗಿ ಕರೆಯುತ್ತಿದ್ದುದು ಶಾಸನಗಳಲ್ಲಿ ಕಂಡುಬರುತ್ತದೆ.

ದಕ್ಷಿಣ ಗದಗು ಭಾಗದ ಇತಿಹಾಸವನ್ನು ರಚಿಸಲು ಶಾಸನಗಳು ನಿಶ್ಚಿತ ತಳಹದಿಯಾಗಿವೆ. ಇವು ವಿವಿಧ ಕಾಲಮಾನಗಳಿಗೆ ವಿಶೇಷ ವ್ಯಕ್ತಿ, ಘಟನೆಗಳಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ತಿಳಿಸುತ್ತವೆ. ಪ್ರಸ್ತುತ ದಕ್ಷಿಣ ಗದಗು ಜಿಲ್ಲೆಯು ಪ್ರಾಚೀನ ಕಾಲದಲ್ಲಿ ಮಾಸವಾಡಿ-೧೪೦, ಬೆಳ್ವೊಲ-೩೦೦ ಮತ್ತು ಪುಲಿಗೆರೆ-೩೦೦ರಲ್ಲಿ ಮೂರು ಭಾಗಗಳಲ್ಲಿ ಹಂಚಲಾಗಿತ್ತು. ಮಾಸವಾಡಿ-೧೪೦ರಲ್ಲಿ ಮುಂಡರಗಿ ತಾಲ್ಲೂಕಿನ ಎಲ್ಲಾ ಗ್ರಾಮಗಳು ವಿಲೀನವಾಗಿದ್ದವು. ಮಾಸವಾಡಿ ಎಂದು ಒಂದು ವಿಭಾಗವಾಗಿ ಎಂದಿನಿಂದ ಪ್ರಾರಂಭವಾಯಿತೆಂದು ಹೇಳಲು ಸ್ವಲ್ಪ ಕಷ್ಟ. ಆದರೆ ರಾಷ್ಟ್ರಕೂಟರ ದೊರೆ ಒಂದನೇ ಅಮೋಘವರ್ಷನ ಕಾಲದ ಮೇವುಂಡಿ ಶಾಸನದಲ್ಲಿ ಮಾಸವಾಡಿ ನಾಡಿನ ಉಲ್ಲೇಖವಿರುವುದಿಲ್ಲ.[೧] ಇದೇ ರಾಷ್ಟ್ರಕೂಟ ವಂಶದ ದೊರೆ ಒಂದನೇ ಅಮೋಘವರ್ಷನ ಕಾಲದ ನಂತರ ಆಳ್ವಿಕೆ ಮಾಡಿದ ಎರಡನೇ ಕೃಷ್ಣನ ಕಾಲದ ಶಾಸನದಲ್ಲಿ ಮತ್ತು ನಂತರ ಕಾಲದ ಶಾಸನಗಳಲ್ಲಿ ಮಾಸವಾಡಿ ನಾಡಿನ ಉಲ್ಲೇಖವಿರುತ್ತದೆ.[೨] ಅಂದರೆ ಈ ಶಾಸನದ ಕಾಲಮಾನವು ಕ್ರಿ.ಶ ೮೯೭ಕ್ಕೆ ನಿಗದಿಯಾಗುವುದರಿಂದ ಈ ಕಾಲಮಾನದ ಆಸುಪಾಸಿನಲ್ಲಿ ಈ ನಾಡು ರಚನೆ ಗೊಂಡಿರಬಹುದೆಂದು ತಿಳಿಯಬಹುದು.

ಬೆಳ್ವೊಲ-೩೦೦ರ ಭಾಗವು ಗದಗ ತಾಲ್ಲೂಕಿನ ಬಹುತೇಕ ಗ್ರಾಮಗಳನ್ನು ಒಳಗೊಂಡಿದೆ. ಇದನ್ನು ಬೆಣ್ಣೆದಡಿ-೭೦, ಕೊಳನೂರು-೩೦, ನರೆಯಂಗಲ್ಲ-೧೨, ಮುಳಗುಂದ-೧೨, ಚಿಂಚಲಿ-೫೦, ಬೆಳವಣಿಕೆ-೧೨, ಕಿಸುಕಾಡು-೭೦, ಎಂಬುದಾಗಿ ವಿಭಾಗಿಸಲಾಗಿತ್ತು. ಬೆಳ್ವಲ-೩೦೦ರ ಮೇರೆಗಳಾಗಿ

ಉತ್ತರಕ್ಕೆ – ಬೆಳಗಲಿ-೫೦೦

ದಕ್ಷಿಣಕ್ಕೆ – ಪುಲಗೆರಿ-೩೦೦ ಮತ್ತು ಮಾಸವಾಡಿ-೧೪೦

ಪೂರ್ವಕ್ಕೆ – ಕರಡಿಕಲ್-೩೦೦

ಪಶ್ಚಿಮಕ್ಕೆ – ಹಲಸಿಗೆ-೧೨೦೦ಗಳನ್ನು ಮತ್ತು ಕೊಂಡಿ-೩೦೦೦ಗಳನ್ನು ಮೇರೆಯಾಗಿ ಪಡೆದಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಇದರಲ್ಲಿ ಹಲವಾರು ಉಪವಿಭಾಗಗಳಿದ್ದು ಕೊಳನೂರು-೩೦, ಬೆಳ್ವಣಿಕೆ-೧೨, ನರೆಯಂಗಲ್-೧೨, ಕಿಸುಕಾಡು-೭೦, ಕುಕನೂರ-೩೦, ಮುಳಗುಂದ-೧೨, ಚಿಂಚಲಿ-೫೦ರ ಭಾಗಗಳು ಸೇರಿದ್ದವು.

ಪುಲಿಗೆರೆ-೩೦೦ರ ಭಾಗದಲ್ಲಿ ಶಿರಹಟ್ಟಿ ತಾಲೂಕಿನ ಬಹಳಷ್ಟು ಗ್ರಾಮಗಳು ಸೇರಿವೆ. ಇದು ಒಂದು ಆಡಳಿತ ವಿಭಾಗವಾಗಿದ್ದು ಬಾದಾಮಿ ಚಾಲುಕ್ಯರ ಕಾಲದಲ್ಲಿ ಬರಿ ಪುಲಗೇರಿ ಎಂದು ಗುರುತಿಸಲಾಗಿದೆಯಾದ್ದರಿಂದ ಆ ಕಾಲದಲ್ಲಿ ಇದು ಒಂದು ವಿಭಾಗವಾಗಿತ್ತು ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಕ್ರಿ.ಶ.೮೬೭-೬೮ರಲ್ಲಿ ಕುಪ್ಪೆಯರಸ ಎಂಬುವನು ಆ ಪುಲಗೆರೆ ನಾಡನ್ನು ಆಳುತ್ತಿದ್ದುದಾಗಿ[೩] ತಿಳಿದುಬರುತ್ತದೆ. ಆದ್ದರಿಂದ ಈ ನಾಡು ೯ನೇ ಶತಮಾನದ ಮೊದಲ ಭಾಗದಲ್ಲಿ

ರಚನೆಯಾಗಿರಬಹುದು. ಕವಿರಾಜಮಾರ್ಗಕಾರನು ತಿರುಳ್ಗನ್ನಡನಾಡಿನ ಪ್ರದೇಶದ ವ್ಯಾಪ್ತಿಯನ್ನು ಅಂದಿನ ನಗರಗಳ ಹಿನ್ನೆಲೆಯಲ್ಲಿ ಸೂಚಿಸುತ್ತಾನೆ.

ಅದರೊಳಗಂ ಕಿಸುವೊಳಲಾ
ವಿದಿತ ಮಹಾಕೊಪಣ ನಗರದಾ ಪುಲಿಗೆರೆಯ
ಸದಾಭಿಸ್ತುತಮಪ್ಪೊಂಕ್ಕುಂ
ದದನಡುವಣ ನಾಡೆ ನಾಡೆ ಕನ್ನಡ ತಿರುಳ್॥

ಅಂದರೆ ಕಿಸುವೊಳಲು(ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲು) ಕೊಪಣ(ಕೊಪ್ಪಳ) ಪುಲಿಗೆರೆ (ಲಕ್ಷ್ಮೇಶ್ವರ) ಮತ್ತು ಒಕ್ಕುಂದ (ಬೆಳಗಾವಿ ಜಿಲ್ಲೆಯ ಒಕ್ಕುಂದ) ಈ ನಡುವಿನ ಪ್ರದೇಶವು ತಿರುಳ್ಗನ್ನಡದ ನಾಡು ಎಂಬುದು ಅತನ ಹೇಳಿಕೆ. ಈ ಭಾಗದಲ್ಲಿ ಬೆಳ್ವೊಲ-೩೦೦ ಪುಲಿಗೆರೆ-೩೦೦ ಮಾಸೆವಾಡಿ-೧೪೦ ವಿಭಾಗಗಳು ಮೇಳವಿಸುತ್ತವೆ.

ಈ ಭಾಗವನ್ನು ಕನ್ನಡ ನಾಡಿನ ರಾಜಮನೆತನಗಳಾದ ಕದಂಬ, ಗಂಗ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ಹೊಯ್ಸಳ, ಯಾದವ, ಕಲಚುರಿ, ವಿಜಯನಗರ, ಈ ಎಲ್ಲ ಸಾಮ್ರಾಜ್ಯಗಳಿಗೆ ಸೇರಿತ್ತಲ್ಲದೆ, ಮೌರ್ಯ, ಶಾತವಾಹನ, ರಾಜಮನೆತನಗಳು ಆಳ್ವಿಕೆ ನಡೆಸಿವೆ.

**೪.೧.೧. ಮೌರ್ಯರು**

ಕ್ರಿ.ಪೂ. ೩ನೇ ಶತಮಾನದಲ್ಲಿ ಉತ್ತರಭಾರತದಲ್ಲಿ ಅಧಿಕಾರಕ್ಕೆ ಬಂದ ಮೌರ್ಯರು ದಕ್ಷಿಣ ಭಾರತದ ಹಲವು ಪ್ರದೇಶಗಳ ಮೇಲೆ ಆಧಿಪತ್ಯವನ್ನು ಸ್ಥಾಪಿಸಿದರು. ಇವರ ಕಾಲದ ಸುಮಾರು ೧೭ ಶಾಸನಗಳು ಕರ್ನಾಟಕದಲ್ಲಿ ನಮಗೆ ಲಭ್ಯವಾಗುತ್ತವೆ. ನಮ್ಮ ಕರ್ನಾಟಕದಲ್ಲಿ ಬ್ರಹ್ಮಗಿರಿ, ಸಿದ್ದಾಪುರ, ಜಟ್ಟಂಗಿರಾಮೇಶ್ವರ, ಉದೆಗೊಳ ಮತ್ತು ನಿಟ್ಟೂರಿನಲ್ಲಿ ತಲಾ ಎರಡರಂತೆ ಹತ್ತು ಶಾಸನಗಳು, ಮಸ್ಕಿ, ಗವಿಮಠ ಮತ್ತು ಪಾಲ್ಕಿಗುಂಡುಗಳಲ್ಲಿ ಒಂದೊಂದರಂತೆ ಮೂರು ಶಾಸನಗಳು, ಇವಲ್ಲದೆ ಸನ್ನತಿಯಲ್ಲಿ ನಾಲ್ಕು ಶಾಸನಗಳು ದೊರೆಯುತ್ತವೆ. ಅಶೋಕನ ಕಾಲದ ಶಾಸನವು ಇಲ್ಲೇ ಹತ್ತಿರದ ಕೊಪ್ಪಳದ ಗವಿಮಠದಲ್ಲಿ ದೊರೆಯುವುದಲ್ಲದೆ, ಚಿತ್ರದುರ್ಗ ಜಿಲ್ಲೆಯ ಜಟ್ಟಂಗಿ ರಾಮೇಶ್ವರದ ಬ್ರಹ್ಮಗಿರಿ, ಸಿದ್ದಾಪುರ, ಪ್ರದೇಶಗಳಲ್ಲಿ ದೊರೆಯುವುದರಿಂದ ಮೌರ್ಯರು ಉತ್ತರಭಾರತದ ಪಾಟಲಿಪುತ್ರದಿಂದ ಆಳ್ವಿಕೆ ಮಾಡುತ್ತಿದುದ್ದು ತಿಳಿದ ವಿಷಯವಾದರೂ, ಶಾಸನಗಳು ದೊರೆತಿರುವುದನ್ನು ಗಮನಿಸಿದರೆ, ಗದಗು ಜಿಲ್ಲೆಯ ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆಯಾದ್ದರಿಂದ ಈ ಭಾಗವೂ ಮೌರ್ಯ ಸಾಮ್ರಾಜ್ಯಕ್ಕೆ ಸೇರಿರುವುದರಲ್ಲಿ ಯಾವುದೇ ಸಂಶಯವಿಲ್ಲ.

ಈ ಮನೆತನದಲ್ಲಿ ಪ್ರಮುಖವಾಗಿ ಮೂರು ಜನ ಆಳ್ವಿಕೆಯನ್ನು ಮಾಡಿದ್ದಾರೆ. ಈ ವಂಶದ ಸ್ಥಾಪಕ ಚಂದ್ರಗುಪ್ತ ಮೌರ್ಯ ತನ್ನ ನಾಡಿನಲ್ಲಿ ಭೀಕರ ಬರಗಾಲ ಆವರಿಸಿದಾಗ ತನ್ನ ಗುರುವಾದ

ಭದ್ರಬಾಹುವಿನೊಡನೆ ಬಂದು ಶ್ರವಣಬೆಳಗೊಳದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದನೆಂಬುದಕ್ಕೆ ಜೈನ ಸಾಹಿತ್ಯದಲ್ಲಿ ನಂಬಲರ್ಹವಾದ ಕೆಲವು ಪುರಾವೆಗಳಿವೆ. ಶ್ರೀರಂಗಪಟ್ಟಣ ಮತ್ತು ಶ್ರವಣಬೆಳಗೊಳದಲ್ಲಿ ದೊರೆತ ಕ್ರಿ.ಶ.೯, ೧೨, ೧೫ನೇ[೪] ಶತಮಾನದ ಶಾಸನಗಳಲ್ಲಿ ಜೈನಮುನಿ ಭದ್ರಬಾಹು ಮತ್ತು ಚಂದ್ರಗುಪ್ತಮೌರ್ಯರು ಶ್ರವಣಬೆಳಗೊಳದಲ್ಲಿದ್ದರೆಂಬುದನ್ನು ಪ್ರಸ್ತಾಪಿಸಲಾಗಿದೆ. ಇದೇ ಅಂಶ ಜಿನಸೇನನ ಹರಿವಂಶ ಮತ್ತು ಹರಿಶೇನನ ಬೃಹತ್ಕಥಾ ಕೋಶದಿಂದ ತಿಳಿಯುತ್ತದೆ. ಚಂದ್ರಗುಪ್ತಮೌರ್ಯ ದಕ್ಷಿಣ ಭಾರತವನ್ನು ಸ್ವತಃ ಗೆಲ್ಲದಿದ್ದರೂ ನಂದರ ಆಳ್ವಿಕೆಗೊಳಪಟ್ಟ ಈ ಭಾಗಗಳು ನಂದರ ಪತನಾನಂತರ ಚಂದ್ರಗುಪ್ತನಿಗೆ ಪ್ರಾಪ್ತವಾಗಿರಬಹುದು. ಆದ್ದರಿಂದ ನಮ್ಮನಾಡಿಗೂ ಮೌರ್ಯರಿಗೂ ಅವಿನಾಭಾವ ಸಂಭಂಧವಿರುವುದು ತಿಳಿಯುತ್ತದೆ. ಇವನ ನಂತರ ಇವನ ಮಗ ಬಿಂದುಸಾರ ಮೌರ್ಯ ಸಾಮ್ರಾಜ್ಯದ ಅರಸನಾದನು. ಈತನು ೧೬ ಪ್ರದೇಶಗಳ ಅರಸರು ಮತ್ತು ಮಂತ್ರಿಗಳನ್ನು ಕೊಂದನೆಂಬುದಾಗಿ ತಾರಾನಾಥ ಹೇಳಿದ್ದಾನೆ. ಇವುಗಳು ಕೊಯಮತ್ತೂರು, ಕೆನರ, ದಕ್ಷಿಣ ಪರ್ಯಾಯದ್ವೀಪ, ಮಧುರೆ ಮತ್ತು ತಿನ್ನವೆಲ್ಲಿ ಜಿಲ್ಲೆಗಳು, ಮೈಸೂರು ಮತ್ತು ಕೊಡಗಿನ ಭಾಗಗಳಾಗಿರಬೇಕೆಂದು ಊಹಿಸಲಾಗಿದೆ. ಶಿಕಾರಿಪುರದ ೧೨ನೇ[೫] ಶತಮಾನದ ಶಾಸನ ಕುಂತಲ(ಭೀಮ ಮತ್ತು ವೇದಾವತಿ ನದಿಗಳ ನಡುವಣ ಪ್ರದೇಶ) ಮೌರ್ಯರ ಪ್ರಾಂತ್ಯವಾಗಿತ್ತೆಂಬ ಅಂಶವನ್ನು ತಿಳಿಸುತ್ತದೆ. ನಂತರ ಈತನ ಮಗ ಶಾಂತಿಪ್ರಿಯದೊರೆ ಅಶೋಕನು ಮೌರ್ಯ ಸಾಮ್ರಾಜ್ಯವನ್ನು ಆಳಿದನು. ಈತನನ್ನು ಕೊಪ್ಪಳದ ಗವಿಮಠ ಶಾಸನದಲ್ಲಿ "ದೇವನಾಂಪ್ರಿಯ, ಪ್ರಿಯದರ್ಶಿನಿ, ಅಶೋಕ" ಎಂದು ಕರೆಯಲಾಗಿದೆ[೬]. ಈತನ ಶಾಸನಗಳು ಕರ್ನಾಟಕದ ಉದ್ದಗಲಕ್ಕೂ ದೊರೆಯುವುದರಿಂದ ಇವನು ಕೂಡ ಈ ನಾಡಿನ ಮೇಲೆ ಅಧಿಕಾರವನ್ನು ಸ್ಥಾಪಿಸಿದ್ದನೆಂಬುದಾಗಿ ತಿಳಿಯುತ್ತದೆ. ಅಲ್ಲದೆ ಶಾಸನಗಳ ಹುಟ್ಟಿಗೆ ಭದ್ರಬುನಾಧಿಯನ್ನು ಹಾಕಿ ಅವುಗಳ ಸೃಷ್ಟಿಗೆ ಕಾರಣಕರ್ತನಾದನು ಎಂಬುದು ವೇದ್ಯವಾಗುತ್ತದೆ.

**೪.೧.೨. ಶಾತವಾಹನರು**

ಮೌರ್ಯ ಸಾಮ್ರಾಜ್ಯದ ಪತನದ ನಂತರ ದಕ್ಷಿಣ ಭಾರತದಲ್ಲಿ ಕ್ರಿ.ಶ.೨ನೇ ಶತಮಾನದಲ್ಲಿ ಶಾತವಾಹನರು ಸಹ ಈ ಭಾಗವನ್ನು ಆಳಿರಬಹುದು. ಈ ಭಾಗದಲ್ಲಿ ಅವರ ಯಾವುದೇ ಕುರುಹುಗಳು ದೊರೆಯದೆ ಹೋದರೂ ಸಹ ಶಾತವಾಹನರು ಪ್ರತಿಷ್ಠಾನದಿಂದ ಆಳ್ವಿಕೆಯನ್ನು ಮಾಡುವಾಗ ಅವರ ಸಾಮ್ರಾಜ್ಯ ಬಹುತೇಕ ದಕ್ಷಿಣಕ್ಕೆ ಹಬ್ಬಿದುದು ಸ್ಪಷ್ಟವಾಗುತ್ತದೆ. ಅಲ್ಲದೆ ಗೌತಮಿಪುತ್ರ ಶಾತಕರ್ಣಿಗೆ "ತ್ರೈಸಮುದ್ರತೋಯ ಪಿತಾವಾಹನ" ಎಂಬ ಬಿರುದಿರುವುದು (ಮೂರು ಸಮುದ್ರಗಳ ನೀರನ್ನು ಕುಡಿದ ಕುದುರೆಯ ವಾಹನವಾಗುಳ್ಳವನು) ಅಲ್ಲದೆ ನರಗುಂದ ತಾಲೂಕಿನ ವಾಸನ ಗ್ರಾಮದಲ್ಲಿಯ ಶಾಸನ[೭] ಶಾತವಾಹನರ ಬಗ್ಗೆ ತಿಳಿಸುತ್ತದೆ. ಈ ಭಾಗದಿಂದ ತುಂಗಭದ್ರೆಯ ದಕ್ಷಿಣದ ಕಡೆ ಇರುವ

ಹಿರೇಹಡಗಲಿಯ ಶಾಸನವು "ಶಾತಹನಿರಟ್ಟ"[೮] ಎಂದು ಹೇಳಿರುವುದರಿಂದ, ಸನ್ನತಿ ಮತ್ತು ಬನವಾಸಿಯಲ್ಲಿ ಇವರ ಶಾಸನಗಳು ದೊರೆತಿರುವುದರಿಂದ ಮತ್ತು ಕೊಪ್ಪಳ ತಾಲೂಕಿನ ಚಿಕ್ಕಸಿಂಧೋಗಿಯಲ್ಲಿ ಶಾತವಾಹನರ ನಾಣ್ಯಗಳು ದೊರೆತಿವೆಯಾದ್ದರಿಂದ[೯] ಈ ಭಾಗವು ಶಾತವಾಹನರಾಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬೇಕಾಗುತ್ತದೆ.

**ಶಾತವಾಹನರ ವಂಶಾವಳಿ**

ಸೀಮುಖ (ಕ್ರಿ.ಪೂ.೨೩೦–೨೧೨)

।

ಕನ್ಹ(ಕ್ರಿ.ಪೂ.೨೧೨–೧೮೪)

।

೨ನೇ ಶಾತಕರ್ಣಿ(ಕ್ರಿ.ಪೂ.೧೮೪–೧೨೮)

।

ಹಾಲ(ಕ್ರಿ.ಶ.೨೦–೨೪)(ಇವನು ಶಾತವಾಹನರಲ್ಲಿ ೧೭ನೇ ದೊರೆ)

।

ಪುಲುಮಾಯಿ

।

ಗೌತಮೀಪುತ್ರ ಶಾತಕರ್ಣಿ (ಕ್ರಿ.ಶ.೭೦–೭೫)

।

ವಾಸಿಷ್ಠೀಪುತ್ರ ಪುಳುಮಾವಿ (ಕ್ರಿ.ಶ.೧೩೦–೧೫೦)

।

ಯಜ್ಞಶ್ರೀ ಶಾತಕರ್ಣಿ

**೪.೧.೩. ಕದಂಬರು**

ಶಾತವಾಹನರು ಅವನತಿಯತ್ತ ನಡೆದಾಗ ಕಂಚಿಯ ಪಲ್ಲವರು ಬನವಾಸಿಯನ್ನೂ ಸೇರಿದಂತೆ ಕರ್ನಾಟಕದ ಬಹು ಭಾಗಗಳ ಮೇಲೆ ತಮ್ಮ ಸ್ವಾಮ್ಯ ಸ್ಥಾಪಿಸಿದ್ದರು. ಕರ್ನಾಟಕದಲ್ಲಿ ಪ್ರಬಲ ರಾಜವಂಶ ಇಲ್ಲವಾದುದು ಕಂಚಿಯ ಪಲ್ಲವರಿಗೆ ಬಲ ತಂದಿತ್ತು. ಇಂತಹ ಸಮಯದಲ್ಲಿ ಕ್ರಿ.ಶ.೪ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಕರ್ನಾಟಕದ ಬನವಾಸಿಯಲ್ಲಿ ಆಧಿಪತ್ಯ ಸ್ಥಾಪಿಸಿದ ಕನ್ನಡದ ಮೊದಲ ರಾಜವಂಶ ಎಂಬ ಕೀರ್ತಿ ಕದಂಬರಿಗೆ ಸಲ್ಲುತ್ತದೆ. ಬನವಾಸಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಈ ಅರಸರು ಕ್ರಿ.ಶ.೩೨೫ರಿಂದ ೫೨೫ ರವರೆಗೆ ಆಳಿದರು. ಕದಂಬ ದೊರೆ

ಜಯಕೇಶಿಯು ಕ್ರಿ.ಶ.೧೧೨೮ರಲ್ಲಿ ಕೊಂಕಣ–೯೦೦, ಪಲಸಿಗೆ–೧೨೦೦೦, ಆಳುತ್ತಿದ್ದ ಉಲ್ಲೇಖ ಮತ್ತು ಸೋಮೇಶ್ವರ ದೇವರಿಗೆ ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಇವರ ಒಂದು ಶಾಖೆ ಹಾನಗಲ್ಲಿನಲ್ಲಿ ಆಳ್ವಿಕೆ ಮಾಡುತ್ತಿತ್ತಲ್ಲದೆ, ಗೋವಾದಿಂದಲೂ ಮತ್ತೊಂದು ಶಾಖೆ ಆಡಳಿತವನ್ನು ನಡೆಸುತ್ತಿದ್ದುದರಿಂದ ಅವರ ಆಳ್ವಿಕೆಗೆ ಈ ಭಾಗವು ಸೇರಿದ್ದಿತು ಎಂದು ಹೇಳಬಹುದು. ಹಾನಂಗಲ್ಲು–೫೦೦ರಲ್ಲಿ ಇವರು ಆಳುತ್ತಿದ್ದರಿಂದ ಈ ಪ್ರದೇಶದ ಅಲ್ಪಭಾಗ ಇವರ ಆಳ್ವಿಕೆಗೆ ಒಳಪಟ್ಟಿರಲೂಬಹುದು. ಆದರೆ ಇವರ ಒಂದು ಶಾಸನವು ಈ ಭಾಗದಲ್ಲಿ ದೊರೆಯದೆ ಇರುವುದು ಆಶ್ಚರ್ಯವಾಗುತ್ತದೆ. ಅಲ್ಲದೆ ಮುಂದಿನ ಕಾಲದಲ್ಲಿ ಇವರ ಶಾಸನಗಳು ಅಳಿದಿರಲೂಬಹುದು.

## ಕದಂಬರ ವಂಶಾವಳಿ




### ೪.೧.೪. ಗಂಗರು

ಕರ್ನಾಟಕದ ಇತಿಹಾಸದಲ್ಲಿ ಗಂಗರ ಆಳ್ವಿಕೆ ಚಿರಸ್ಮರಣೀಯವಾಗಿದೆ. ಇವರು ಸುಮಾರು ೬ ಶತಮಾನಗಳ ಕಾಲ ಕರ್ನಾಟಕದ ಬಹುಭಾಗವನ್ನು ತಮ್ಮ ಆಳ್ವಿಕೆಗೆ ವಶಪಡಿಸಿಕೊಂಡಿದ್ದರು.

ಕರ್ನಾಟಕದ ದಕ್ಷಿಣ ಭಾಗವನ್ನು ಗಂಗರು ಕ್ರಿ.ಶ.೯೯೯ರವರೆಗೂ ಆಳುತ್ತಿದ್ದರು. ಇವರು ಬಾದಾಮಿ ಚಾಲುಕ್ಯರಿಗೆ, ರಾಷ್ಟ್ರಕೂಟರಿಗೆ ಸಾಮಂತರಾಗಿ, ವೈವಾಹಿಕ ಸಂಬಂಧವನ್ನು ಮಾಡಿಕೊಂಡಿದ್ದರು. ಕದಂಬರ ಸಮಕಾಲಿನ ರಾಜರಾಗಿ, ಬಹುಕಾಲ ಸ್ವತಂತ್ರ್ಯ ರಾಜರಾಗಿ ಅಡಳಿತ ನಡೆಸದಿದ್ದರೂ ಕೂಡ ಇವರು ೧೨-೧೩ನೇ ಶತಮಾನದವರೆಗೂ ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ಗಂಗರ ದೊರೆ ಎರಡನೇ ಮಾರಸಿಂಹನ ಶಾಸನಗಳು ಲಕ್ಷ್ಮೇಶ್ವರದಲ್ಲಿ[೧೦] ದೊರೆಯುವುದರಿಂದ ಇವರು ಸ್ವತಂತ್ರ್ಯವಾಗಿ ಅಲ್ಲದಿದ್ದರೂ ಸಹ ಸಾಮಂತರಾಗಿ ಆಳಿರುವುದು ತಿಳಿದುಬರುತ್ತದೆ. ಮೂರನೇ ಕೃಷ್ಣನ ಕಾಲದಲ್ಲಿ ಚೋಳರ ವಿರುದ್ಧ ಹೋರಾಡಲು ಗಂಗ ದೊರೆ ಭೂತುಗನು ಸಹಾಯ ಮಾಡಿದುದರ ಫಲವಾಗಿ ಅವನನ್ನು ಬನವಾಸಿಯ ಮಂಡಲಾಧಿಪತಿಯನ್ನಾಗಿ ನೇಮಿಸಿದ. ಆಗ ಬೆಳ್ವೊಲ, ಪುಲಗೆರೆ, ಕಿಸುಕಾಡು ಮುಂತಾದುವು ಗಂಗ ವಂಶದ ಪಾಲಿಗೆ ಬಂದವು. ಮುಂದೆ ಅಸಮರ್ಥರಾದ ರಾಷ್ಟ್ರಕೂಟ ದೊರೆಗಳನ್ನು ಕಲ್ಯಾಣಚಾಲುಕ್ಯ ದೊರೆ ಎರಡನೇ ತೈಲ ಬದಿಗೊತ್ತಿ ರಾಜ್ಯವನ್ನು ಅಧೀನ ಮಾಡಿಕೊಂಡ ಸಂದರ್ಭದಲ್ಲಿ ಮಾರಸಿಂಹನು ನಾಲ್ಕನೇ ಇಂದ್ರನನ್ನು ಪಟ್ಟಕ್ಕೆ ತರಲು ಪ್ರಯತ್ನಿಸಿ ವಿಫಲನಾದನು. ಆ ಸಂದರ್ಭದಲ್ಲಿ ಈತನು ಈ ಪ್ರದೇಶಗಳಲ್ಲಿ ಕೆಲವು ದಾನಧರ್ಮಗಳನ್ನು ನೀಡಿದ ಬಗ್ಗೆ ಹೇಳುವ ಶಾಸನಗಳು ದೊರೆಯುತ್ತವೆ. ಅಲ್ಲದೇ ಇವರು ಆಳುತ್ತಿದ್ದ ಪ್ರದೇಶವನ್ನು ಗಂಗವಾಡಿ ೯೬೦೦೦ ಎಂದು ಕರೆಯುತ್ತಿದ್ದುದರಿಂದ ಈ ಭಾಗಗಳು ಸ್ವಲ್ಪ ದಿನ ಇವರ ಆಳ್ವಿಕೆಯಲ್ಲಿ ಇದ್ದವೆಂದೇ ಹೇಳಬಹುದು.

**ಗಂಗರ ವಂಶಾವಳಿ**

ಕೊಂಗುಣಿ ವರ್ಮ(ಕ್ರಿ.ಶ.೩೨೫-೩೫೦)

|

೧ನೇ ಮಾಧವ(ಕ್ರಿ.ಶ.೩೫೦-೩೭೫)

|

-------------------

| |

ಅಯ್ಯವರ್ಮ — ೧ನೇ ಕೃಷ್ಣವರ್ಮ (ಕ್ರಿ.ಶ.೩೭೫-೪೦೦)

(ಹರಿವರ್ಮ) |

-----------------------------------------------

| | |

೨ನೇ ಮಾಧವ ಸಿಂಹ (ಕ್ರಿ.ಶ.೪೦೦-೪೨೦) — ವಿಷ್ಣು ಗೋಪ (ಕ್ರಿ.ಶ.೪೨೦-೪೪೦) — ವೀರವರ್ಮ

|


೩ನೇ ಮಾಧವ(ಕ್ರಿ.ಶ.೪೪೦-೪೬೯)
ಅವನೀತ(ಕ್ರಿ.ಶ.೪೬೯-೫೨೯)
ದುರ್ವಿನೀತ (ಕ್ರಿ.ಶ.೫೨೯-೬೦೪)
ಮಗ(ಹೆಸರು ತಿಳಿದಿಲ್ಲ)
ಮುಷ್ಕರ (ಕ್ರಿ.ಶ.೬೦೪-೬೨೯)
ಶ್ರೀ ವಿಕ್ರಮ (ಕ್ರಿ.ಶ.೬೨೯-೬೫೪)
ಭೂವಿಕ್ರಮ (ಕ್ರಿ.ಶ.೬೫೪-೬೭೯)
೧ನೇ ಶಿವಕುಮಾರ (ಕ್ರಿ.ಶ.೬೭೯-೭೨೫)
ಮಗ(ಹೆಸರು ತಿಳಿದಿಲ್ಲ)
ಶ್ರೀಪುರುಷ (ಕ್ರಿ.ಶ.೭೨೫-೭೮೮)
ದುಗ್ಗಾರ
೨ನೇಶಿವಮಾರ
ವಿಜಯಾದಿತ್ಯ
೧ನೇ ರಾಚಮಲ್ಲ(ಕ್ರಿ.ಶ.೮೧೬-೮೪೩)
ಮಾರಸಿಂಹ
೧ನೇ ಪೃಥಿವೀಪತಿ
ನೀತಿಮಾರ್ಗಎರೆಯಂಗ(ಕ್ರಿ.ಶ.೮೪೩-೮೭೦)
ನನ್ನಿಯ ಗಂಗ
೨ನೇ ಪೃಥಿವೀಪತಿ
೨ನೇ ರಾಚಮಲ್ಲ
೧ನೇ ಭೂತಗ
ಎರೆಗಂಗ (ಕ್ರಿ.ಶ.೮೭೦-೯೨೦)
ನರಸಿಂಹ(ಕ್ರಿ.ಶ.೯೨೦-೯೩೩)
೩ನೇ ರಾಚಮಲ್ಲ(ಕ್ರಿ.ಶ.೯೩೩-೯೩೬)
೨ನೇ ಭೂತಗ(ಕ್ರಿ.ಶ.೯೩೬-೯೬೧)
ಮರುಳ
೨ನೇ ಮಾರಸಿಂಹ
ನೀತಿಮಾರ್ಗ ಗೋವಿಂದ
೪ನೇ ರಾಚಮಲ್ಲ (ಕ್ರಿ.ಶ.೯೭೪-೯೯೯)

### ೪.೧.೫. ಬಾದಾಮಿ ಚಾಲುಕ್ಯರು

ಪುಲಿಗೆರೆ-೩೦೦, ಬೆಳ್ವೊಲ-೩೦೦ ಮತ್ತು ಮಾಸವಾಡಿ-೧೪೦ರಲ್ಲಿ ಬಾದಾಮಿ ಚಾಲುಕ್ಯರ ಬಹಳಷ್ಟು ಶಾಸನಗಳು ನಮಗೆ ದೊರೆಯುತ್ತವೆ. ಈ ಭಾಗದಲ್ಲಿ ಇವರ ಆಳ್ವಿಕೆ ಇತ್ತು ಎಂಬುದು ನಮಗೆ ಸುಸ್ಪಷ್ಟವಾಗಿ ತಿಳಿಯುತ್ತದೆ. ಬಾದಾಮಿ ಚಾಲುಕ್ಯರ ಆಡಳಿತ ಕರ್ನಾಟಕದ ಇತಿಹಾಸದಲ್ಲಿ ಉಜ್ವಲಯುಗವಾಗಿದೆ. ಪುಲಿಕೇಶಿಯ ಬಗ್ಗೆ ಹೇಳುವ ಒಂದು ಜನಪದ ಹಾಡು ಈ ರೀತಿ ಇದೆ.

"ಪುಲಕೇಶಿ ದೊರೆಯಾಳಿ ಕಲಕೆಲ್ಲ ತಿಳಿಯಾಗಿ
ಬಲಕಾಣ ಕೇಳೊಡೆ ಬಸವ । ಡಂಬಳದ
ಕಳಸದ ತೇರ ಎಳದಾಂವ[೧೧]

ಎಂಬ ಹಾಡು ಪುಲಿಕೇಶಿ ರಾಜ್ಯವಾಳಲು ಪ್ರಾರಂಭಿಸಿದ ನಂತರ ರಾಜ್ಯದಲ್ಲಿ ಇದ್ದಂತಹ ಬಂಡಾಯಗಳು, ಜಗಳಗಳು, ಕ್ರಾಂತಿಗಳು ಎಲ್ಲವೂ ನಿಂತು, ರಾಜ್ಯದಲ್ಲಿ ಒಳ್ಳೆಯ ರೀತಿಯ ಜಾತ್ರೆಗಳು ಮುಂತಾದ ಶುಭಕಾರ್ಯಗಳು ಪ್ರಾರಂಭವಾದ ಬಗ್ಗೆ ಹೇಳುವುದಲ್ಲದೆ ಸುಖ ಶಾಂತಿಯಿಂದ ಜನರು ಬಾಳಿದುದರ ಕಲ್ಪನೆಯನ್ನು ಈ ಹಾಡು ನೀಡುತ್ತದೆ.

"ಕೆರೆ ಬತ್ತಿ ಡಂಬಳದ ಮೊರೆಕೇಳಿ ಬಾದಾಮಿ
ಪುಲಕೇಶಿ ಮರುಗ್ಯಾನ ಕರುಣ । ಸಾರ್‍ಯಾನ
ತೆರಿಗಿ ಜನದಾಗ ಕಡತಾವೂ ॥[೧೨]

ಎಂಬ ಸಾಲುಗಳು ರಾಜ್ಯಕ್ಕೆ ಬರಗಾಲ ಬಂದಂತಹ ಸಮಯದಲ್ಲಿ ಜನರು ತೆರಿಗೆ ಕಟ್ಟಲು ಕಷ್ಟವಾಗುತ್ತದೆ ಎಂದು ತಿಳಿದು ಅದನ್ನು ಕಡತಾ ಮಾಡಿ ಜನರಿಗೆ ಅನುಕೂಲ ಮಾಡಿಕೊಟ್ಟು, ರಾಜರು ಜನತೆಯನ್ನು ಹೇಗೆ ನೋಡಿಕೊಳ್ಳಬೇಕು ಎಂಬುದನ್ನು ತೋರಿಸಿಕೊಟ್ಟ ಎಂಬುದನ್ನು ಮಾರ್ಮಿಕವಾಗಿ ಈ ಸಾಲುಗಳು ತಿಳಿಸುತ್ತವೆ.

ಇವೆಲ್ಲ ಆಧಾರಗಳ ಜೊತೆಯಲ್ಲಿ ನೋಡಿದರೆ ನಮಗೆ ಒಂದನೇ ಪುಲಿಕೇಶಿ ಒಂದನೇ ಕೀರ್ತಿವರ್ಮ, ಮಂಗಳೇಶನವರೆಗಿನ ಯಾವುದೇ ಶಾಸನಗಳು ದೊರೆಯುವುದಿಲ್ಲ. ಆದರೆ ಎರಡನೇ ಪುಲಕೇಶಿ, ವಿನಯಾದಿತ್ಯ, ವಿಜಯಾದಿತ್ಯ, ಎರಡನೇ ವಿಕ್ರಮಾದಿತ್ಯರ ಕಾಲದ ಶಾಸನಗಳು ಲಕ್ಷ್ಮೇಶ್ವರ ಮತ್ತು ಗದುಗಿನ ಕುರ್ತುಕೋಟಿ ಗ್ರಾಮಗಳಲ್ಲಿ ದೊರೆಯುತ್ತವೆ. ಲಕ್ಷ್ಮೇಶ್ವರದಲ್ಲಿ ೬ ಶಾಸನಗಳು ಮತ್ತು ಕುರ್ತುಕೋಟೆಯಲ್ಲಿ ಒಂದು ಶಾಸನವು ದೊರೆಯುತ್ತವೆ. ಎರಡನೇ ಪುಲಕೇಶಿ ಕಾಲದ ಶಾಸನವೊಂದು ಮೊದಲಿಗೆ "ಜಯತ್ಯುತಿಶಂಯಜಿನ್ಯೈರ್ಬ್ಬಾಸುರ ವನ್ದಿತಃ ಶ್ರೀ ಮಾನ್ಜಿನಪತಿ"[೧೩] ಮತ್ತು ಉಳಿದ

ಶಾಸನಗಳು "ಜಯತ್ಯಾವಿಷ್ಕೃತಂ ವಿಷ್ಣೋರ್ವಂ ರಾಹಂ ಕ್ಷೋಂಬಿತಾರ್ಣ್ಣವಂ"[೧೪] ಎಂಬ ಶ್ಲೋಕದಿಂದಲೂ ಪ್ರಾರಂಭವಾಗುತ್ತವೆ.

ಎರಡನೇ ಪುಲಿಕೇಶಿ ಕಾಲದ ಶಾಸನಗಳಲ್ಲಿ ಪುಲಿಕೇಶಿಯನ್ನು 'ಎರೆಯಮ್ಮ ನಾಮದೇಯ ಶ್ರೀವಲ್ಲಭೋಭತ್' ಎಂದು ಹೇಳುತ್ತದೆ. ಇವನ ನಂತರದ ದೊರೆಗಳ ಕಾಲದ ಬಹುತೇಕ ಶಾಸನಗಳಲ್ಲಿ ಇವರ ವಂಶಾವಳಿ ಕಂಡುಬರುತ್ತದೆ. ಇವುಗಳಲ್ಲೆಲ್ಲ ಪುಲಕೇಶಿಯನ್ನು ಹೊಗಳಿದ್ದಾರೆ. ಅವರ ವಂಶಾವಳಿಯನ್ನು ಶಾಸನಗಳಲ್ಲಿ ಇವರು ಮಾನವ್ಯಗೋತ್ರದವರು, ಹಾರತಿಪುತ್ರರು, ಸಪ್ತಮಾತೃಕೆಯರಿಂದ, ಕಾರ್ತಿಕೇಯನ ಕೃಪೆಯಿಂದ, ಶ್ರೀಮನ್ನಾರಾಯಣನ ವರಪ್ರಸಾದದಿಂದ ವರಾಹ ಲಾಂಛನ ಧರಿಸಿದವರೆಂದು ಉಲ್ಲೇಖಗಳು ದೊರೆಯುತ್ತವೆ. ಬಾದಾಮಿ ಚಾಲುಕ್ಯರ ಮೂಲಪುರುಷ ಜಯಸಿಂಹ ಕ್ರಿ.ಶ.೫೦೦ ರಿಂದ ೫೨೦ರವರೆಗೆ ಆಳಿದನು. ಈತನ ಮಗ ರಣರಾಗನು ಕ್ರಿ.ಶ.೫೨೦ರಿಂದ ೫೪೦ರವರೆಗೆ ಆಳಿದ ಬಗ್ಗೆ ಮಹಾಕೂಟದ ಸ್ತಂಭಶಾಸನ ಮತ್ತು ಐಹೊಳೆ ಪ್ರಶಸ್ತಿ ಶಾಸನಗಳು ತಿಳಿಸುತ್ತವೆ. ಇವರು ಮೊದಲಿಗೆ ಕದಂಬ ಸೈನ್ಯಾಧಿಕಾರಿಗಳಾಗಿ ಐಹೊಳೆಯಲ್ಲಿ ಆಡಳಿತ ನಡೆಸಿದ್ದರು. ಇವರ ನಂತರ ರಣರಾಗನ ಮಗ ಒಂದನೇ ಪುಲಕೇಶಿಯನ್ನು ಪಿಯತನುಜ ಶ್ರಿವಲ್ಲಭ(ಐಹೊಳೆ ಶಾಸನ) ಎಂದು ಶಾಸನದಲ್ಲಿ ಕರೆಯಲಾಗಿದೆ. ಈತನು ಕ್ರಿ.ಶ. ೫೪೦ರಿಂದ ೫೬೬ರವರೆಗೆ ರಾಜ್ಯವಾಳಿದನು. ಈತನು ಮೊದಲಿಗೆ ಬಾದಾಮಿ ರಾಜಧಾನಿಗೆ ಭದ್ರವಾದ ಕೋಟೆಯನ್ನು ಕಟ್ಟಿಸಿದನು. ಇವನ ನಂತರ ಈತನ ಮಗ ೧ನೇ ಕೀರ್ತೀವರ್ಮನು ಕ್ರಿ.ಶ.೫೬೬ರಲ್ಲಿ ಸಿಂಹಾಸನಕ್ಕೆ ಬಂದನು. ಇವನನ್ನು ಶಾಸನಗಳಲ್ಲಿ ಪುರರಣಪರಾಕ್ರಮ, ಸತ್ಯಾಶ್ರಯ, ಪೃಥ್ವಿವಲ್ಲಭ, ಮಹಾರಾಜ ಎಂಬುದಾಗಿ ಕರೆಯಲಾಗಿದೆ. ಅಲ್ಲದೆ ಮಹಾಕೂಟ ಸ್ತಂಭಶಾಸನದಲ್ಲಿ 'ವಾತಾಪ್ಯ ಪ್ರಥಮ ವಿಧಾತ' ಎಂದು ಕರೆಯಲಾಗಿದೆಯಲ್ಲದೆ ನಳ, ಮೌರ್ಯ, ಕದಂಬರ, ಕಾಳರಾತ್ರಿ ಎಂಬುದಾಗಿ ಸಂಭೋದಿಸಲಾಗಿದೆ.

ಇಂತಹ ಒಂದನೇ ಕೀರ್ತಿವರ್ಮನಿಗೆ ಪುಲಕೇಶಿ, ವಿಷ್ಣುವರ್ಧನ, ಧಾರಾಶ್ರಯ ಹಾಗೂ ಜಯಸಿಂಹ ಎಂಬ ನಾಲ್ಕು ಜನ ಮಕ್ಕಳು. ಆದರೆ ಕೀರ್ತಿವರ್ಮನು ಮರಣಹೊಂದಿದಾಗ ಆತನ ನಾಲ್ಕು ಜನಮಕ್ಕಳು ಅಪ್ರಾಪ್ತರಾಗಿದ್ದರು. ಆದಕಾರಣ ರಾಜ್ಯಭಾರದ ಹೊಣೆಯನ್ನು ತನ್ನ ತಮ್ಮನಾದ ಮಂಗಳೇಶನಿಗೆ ಒಂದನೇ ಕೀರ್ತಿವರ್ಮನು ವಹಿಸಿದನು. ಕ್ರಿ.ಶ.೫೯೬ರಲ್ಲಿ ಮಂಗಳೇಶನು ಪಟ್ಟವೇರಿದನು. ಇವನನ್ನು ರಣವಿಕ್ರಾಂತ, ಉರುರಣವಿಕ್ರಾಂತ, ಪೃಥ್ವಿವಲ್ಲಭ, ಶ್ರೀಪೃಥ್ವಿವಲ್ಲಭೇಂದ್ರ ಎಂಬುದಾಗಿ ಶಾಸನಗಳಲ್ಲಿ ಕರೆಯಲಾಗಿದೆ. ಈತನು ಕಲಚುರಿ ಬುದ್ಧರಾಜನನ್ನು ಸೋಲಿಸಿ, ಆಪಾರ ಸಂಪತ್ತನ್ನು ಪಡೆದು ಅದನ್ನು ಮುಕುಟೇಶ್ವರ ದೇವರಿಗೆ ದಾನಮಾಡಿ, ಮಹಾಕೂಟದಲ್ಲಿ ಧರ್ಮ ಸ್ತಂಭವನ್ನು ನಿಲ್ಲಿಸಿದನು. ಅಲ್ಲದೆ ತನ್ನ ಅಣ್ಣನ ನೆನಪಿಗಾಗಿ ಬಾದಾಮಿಯಲ್ಲಿ ಭವ್ಯವಾದ ಮೂರನೆ ವೈಷ್ಣವ ಗುಹೆಯನ್ನು ನಿರ್ಮಿಸಿದನು. ಹಾಗೂ ಆ ಗುಹೆಗೆ ಹೂವನ್ನು ಕೊಡುವ ಮಾಲೆಕಾರನಿಗೆ

ಭೂಮಿಯನ್ನು ಉಂಬಳಿ ಬಿಟ್ಟಿರುವುದನ್ನು ಆ ಗುಹೆಯ ಬಲಭಾಗದಲ್ಲಿರುವ ಶಾಸನ ತಿಳಿಸುತ್ತದೆ.[೧೫] ಇಷ್ಟೆಲ್ಲ ಮಾಡಿದ ಮಂಗಳೇಶನು ಅಣ್ಣನ ಮಕ್ಕಳು ವಯಸ್ಕರಾದ ಮೇಲೆ ರಾಜ್ಯವನ್ನು ಬಿಟ್ಟುಕೊಡದೆ ಎರಡನೇ ಪುಲಿಕೇಶಿಯಿಂದ ಸೋಲನ್ನು ಅನುಭವಿಸಬೇಕಾಯಿತು. ಎರಡನೇ ಪುಲಿಕೇಶಿಯು ಬಾಣರ ಸಹಾಯದಿಂದ ಈ ಕೆಲಸವನ್ನು ಸಾಧಿಸಿದನು.

ಎರಡನೇ ಪುಲಿಕೇಶಿಯು ತನ್ನ ಚಿಕ್ಕಪ್ಪನನ್ನು ಸೋಲಿಸಿ ಕ್ರಿ.ಶ.೬೧೦ರಲ್ಲಿ ಸಿಂಹಾಸನವನ್ನೇರಿದನು. ಈತನ ದಿಗ್ವಜಯಗಳ ಬಗ್ಗೆ ಕ್ರಿ.ಶ.೬೩೪ರ ಐಹೊಳೆ ಶಾಸನವು ವಿಸ್ತಾರವಾಗಿ ತಿಳಿಸುತ್ತದೆ.[೧೬] ಈತನು ರಾಷ್ಟ್ರಕೂಟರ ಮಾಂಡಳಿಕರನ್ನು ಗಂಗ, ಅಳುಪದೊರೆಗಳನ್ನು, ಕೊಂಕಣದ ಮೌರ್ಯರನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯದ ಗಡಿಗಳನ್ನು ಸಮುದ್ರ ತೀರದವರೆಗೂ ವಿಸ್ತರಿಸಿದನು. ಅಲ್ಲದೆ ಉತ್ತರ ಪಥೇಶ್ವರನಾದ ಹರ್ಷವರ್ಧನನನ್ನು ನರ್ಮದ ನದಿತೀರದಲ್ಲಿ ಸೋಲಿಸಿ ಪರಮೇಶ್ವರ, ದಕ್ಷಿಣಪಥೇಶ್ವರ, ಎಂಬ ಬಿರುದನ್ನು ಧರಿಸಿದನೆಂದು ಶಾಸನಗಳು ತಿಳಿಸುತ್ತವೆ. ಅಲ್ಲದೆ ಸತ್ಯಾಶ್ರಯ, ವಲ್ಲಭ, ವಲ್ಲಭೇಂದ್ರ, ಶ್ರೀಪೃಥ್ವಿವಲ್ಲಭೇಂದ್ರ, ಮಹಾರಾಜ, ಮಹಾರಾಜಾಧಿರಾಜ, ಭಟ್ಟಾರಕ, ಪರಮೇಶ್ವರ, ಮುಂತಾದ ಬಿರುದುಗಳನ್ನು ಹೊಂದಿದುದಾಗಿ ತಿಳಿಯುತ್ತದೆ. ಇವನ ಕಾಲದಲ್ಲಿ ಚೀನಾ ದೇಶದ ಹ್ಯೂಯನ್‌ತ್ಸಾಂಗ ಎಂಬ ಪ್ರವಾಸಿ ಬಾದಾಮಿ ರಾಜ್ಯಕ್ಕೆ ಭೇಟಿ ನೀಡಿದನು. ಅಲ್ಲದೆ ಈತನು ಈ ಸಾಮ್ರಾಜ್ಯ ಶಾಂತಿಯಿಂದ ಸುಖ ಸಮೃದ್ಧಿಯಿಂದ ಇದ್ದುದಾಗಿ ಹೇಳಿರುತ್ತಾನೆ. ಈ ರೀತಿಯಾಗಿ ಪ್ರಸಿದ್ಧಿ ಪಡೆದ ರಾಜ್ಯ ಪಲ್ಲವರ ವೈರತ್ವದಿಂದಾಗಿ ೨ನೇ ಪುಲಕೇಶಿಯ ಕಾಲದಲ್ಲಿಯೇ ಪತನವಾದುದು ಒಂದು ದುರಂತವೇ ಸರಿ. ಪಲ್ಲವ ದೊರೆ ೨ನೇ ನರಸಿಂಹನು ೨ನೇ ಪುಲಕೇಶಿಯನ್ನು ಸುರ್ಮಾರ ಮತ್ತು ಮಣಿಮಂಗಲ ಯುದ್ಧಗಳಲ್ಲಿ ಸೋಲಿಸಿ ಕಡೆಗೆ ಬಾದಾಮಿಯನ್ನು ಮುತ್ತಿ ಧ್ವಂಸಗೊಳಿಸಿ "ವಾತಾಪಿಕೊಂಡನ್" ಎಂಬ ಬಿರುದನ್ನು ಧರಿಸಿದನು. ಲಕ್ಷ್ಮೇಶ್ವರದಲ್ಲಿರುವ ಕಾಲಸೂಚನೆ ಇಲ್ಲದ ಈತನ ಶಾಸನವು[೧೭] ಎರೆಯಮ್ಮ ಮತ್ತು ಸೇಂದ್ರಕ ಸಂತತಿಯ ಕಂದ ಶಕ್ತಿಯ ಮಗ ದುರ್ಗಶಕ್ತಿಯ ವಿವರವನ್ನು ತಿಳಿಸುತ್ತದೆ. ೨ನೇಪುಲಿಕೇಶಿಯು ಬಾದಾಮಿ ಚಾಲುಕ್ಯ ಅರಸರಲ್ಲಿ ಶ್ರೇಷ್ಠ ದೊರೆ ಎನ್ನವುದರಲ್ಲಿ ಎರಡುಮಾತಿಲ್ಲ. ಆದರೆ ಇವನ ಕಾಲದಲ್ಲಿಯೇ ಪಲ್ಲವರು ಬಾದಾಮಿಯನ್ನು ಜಯಿಸಿದ್ದು, ಚಾಲುಕ್ಯರ ಆಡಳಿತವು ಮುಂದೆ ೧೩ ವರ್ಷಗಳ ಕಾಲ ಪಲ್ಲವ ರಾಜ್ಯದಲ್ಲಿ ವಿಲೀನವಾಯಿತು. ಇವನ ಆಶ್ರಯದಲ್ಲಿದ್ದ ರವಿಕೀರ್ತಿಯು, ಕ್ರಿ.ಶ.೬೩೪-೬೩೫ರಲ್ಲಿ ಮೇಗುತಿ ದೇವಾಲಯವನ್ನು ಕಟ್ಟಿಸಿ ಪ್ರಶಸ್ತಿ ಶಾಸನವನ್ನು ಹಾಕಿಸಿರುವನು.[೧೮]

ಎರಡನೇ ಪುಲಿಕೇಶಿಗೆ ಆದಿತ್ಯವರ್ಮ, ಚಂದ್ರಾದಿತ್ಯ, ರಣರಾಗವರ್ಮ, ವಿಕ್ರಮಾದಿತ್ಯ ಮತ್ತು ಜಯಸಿಂಹ ಎಂಬ ಐವರು ಮಕ್ಕಳು ಹಾಗೂ ಅಂಬರಾ ಎಂಬ ಮಗಳು ಇದ್ದುದಾಗಿ ತಿಳಿಯುತ್ತದೆ. ಇವನ ನಂತರ ವಿಕ್ರಮಾದಿತ್ಯನು ಪಲ್ಲವರ ವಂಶದಲ್ಲಿದ್ದ ರಾಜ್ಯವನ್ನು ಕಿ.ಶ.೬೫೫ರಲ್ಲಿ

ವಶಪಡಿಸಿಕೊಳ್ಳುವಲ್ಲಿ ಸಪಲನಾಗುತ್ತಾನಲ್ಲದೆ, ಪಲ್ಲವರ ದೊರೆಗಳಾದ ನರಸಿಂಹವರ್ಮ, ಆತನ ಮಗ ೨ನೇ ಮಹೇಂದ್ರವರ್ಮ, ಹಾಗೂ ಆತನ ಮಗ ೧ನೇ ಪರಮೇಶ್ವರವರ್ಮನನ್ನು ಅಂದರೆ ಮೂರು ತಲೆಮಾರಿನ ರಾಜರುಗಳನ್ನು ಸೋಲಿಸುತ್ತಾನೆ. ಇವನು ತನ್ನ ಯುದ್ಧ ಕುದುರೆ ಚಿತಗರಕಂಠ ಮತ್ತು ತನ್ನ ಖಡ್ಗದಿಂದ ಎಲ್ಲಾ ಯುದ್ಧಗಳನ್ನು ಜಯಿಸಿದುದಾಗಿ ಮತ್ತು ರಣರಸಿಕ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಭಟ್ಟಾರಕ, ಪರಮಮಹೇಶ್ವರನೆಂಬ ಬಿರುದುಗಳಿದ್ದುದಾಗಿ ತಿಳಿಯುತ್ತದೆ.

ವಿಕ್ರಮಾದಿತ್ಯನ ನಂತರ ಆತನ ಮಗ ವಿನಯಾದಿತ್ಯನು ಕ್ರಿಶ.೬೮೧ರಲ್ಲಿ ಚಾಲುಕ್ಯ ರಾಜ್ಯದ ಆಡಳಿತ ಚುಕ್ಕಾಣಿಯನ್ನು ಹಿಡಿದನು. ಈತನನ್ನು ಕ್ರಿ.ಶ.೬೮೩ರ ಲಕ್ಷ್ಮೇಶ್ವರದ ಶಾಸನದಲ್ಲಿ ಉಲ್ಲೇಖಿಸಲಾಗಿದೆ,[೧೯] ಈತನಿಗೆ ವಿಜಾಯದಿತ್ಯನೆಂಬ ಗಂಡುಮಗ ಮತ್ತು ಕುಂಕುಮಮಹಾದೇವಿ ಎಂಬ ಹೆಣ್ಣುಮಗಳಿದುದ್ದಾಗಿ, ಈಕೆಯನ್ನು ಅಳುಪರ ರಾಜನಾದ ಚಿತ್ರವಾಹನನಿಗೆ ಲಗ್ನಮಾಡಿದುದಾಗಿ ತಿಳಿಯುತ್ತದೆ.

ವಿನಯಾದಿತ್ಯನ ನಂತರ ಇವನ ಮಗನಾದ ವಿಜಯಾದಿತ್ಯನು ಕ್ರಿ.ಶ.೬೯೭ರಲ್ಲಿ ಸಿಂಹಾಸನವನ್ನೇರಿದನು ಈತನ ಕಾಲದ ಕ್ರಿ.ಶ.೭೦೩ರ ಶಾಸನವೊಂದು ಲಕ್ಷ್ಮೇಶ್ವರದಲ್ಲಿ ಇದ್ದು ಅದು " ಸಂಬೋಳಲ" ಗ್ರಾಮವನ್ನು ದಾನಮಾಡಿದುದರ ಬಗ್ಗೆ ತಿಳಿಸುತ್ತದೆ.[೨೦]

ಕ್ರಿ.ಶ.೭೩೩ರ ಕುರ್ತಕೋಟಿಯ ಶಾಸನವು ಈತನನ್ನು ಮಹಾರಾಜಾಧಿರಾಜ, ಪರಮೇಶ್ವರ, ಎಂಬ ಬಿರುದುಗಳನ್ನು ಉಲ್ಲೇಖಿಸುತ್ತದೆ.[೨೧] ವಿನಯಾದಿತ್ಯನ ತರುವಾಯ ಆತನ ಮಗ ೨ನೇ ವಿಕ್ರಮಾದಿತ್ಯನು ಕ್ರಿ.ಶ.೭೩೩ ರಲ್ಲಿ ಪಟ್ಟಕ್ಕೆ ಬಂದನು. ಇವನ ಕಾಲದ ಕ್ರಿ.ಶ.೭೩೫ರ ಲಕ್ಷ್ಮೇಶ್ವರದ ಶಾಸನವು ದೇವಣ ಮತ್ತು ಮೂಲಸಂಘದ ವಿಜಯದೇವ ಪಂಡಿತಾಚಾರ್ಯರಿಗೆ ಧವಳ ಜಿನಾಲಯದ ನಿರ್ವಹಣೆಗೆ ಭೂದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೨೨] ಇವನೂ ಸಹ ಈ ವಂಶದ ಪದ್ಧತಿಯಂತೆ ಸತ್ಯಾಶ್ರಯ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಬಿರುದುಗಳನ್ನು ಧರಿಸಿದ್ದನು. ಇವನು ಪಲ್ಲವ ರಾಜಧಾನಿ ಕಂಚಿಯನ್ನು ಮುತ್ತಿ, ನಂದಿವರ್ಮನನ್ನು ಸೋಲಿಸಿ ಅವನಿಂದ ಕಪ್ಪ ಕಾಣಿಕೆಗಳನ್ನು, ಆನೆಗಳನ್ನು, ರಾಶಿ-ರಾಶಿ ಮಣಿ ಮಾಣಿಕ್ಯ ರತ್ನಗಳನ್ನು ಮತ್ತು ಕಟುಮುಖ, ಸಮುದ್ರಘೋಷವೆಂಬ ವಾದ್ಯಗಳನ್ನು ಪಡೆದನು.

೨ನೇ ವಿಕ್ರಮನ ನಂತರ ಅವನ ಮಗ ೨ನೆ ಕೀರ್ತಿವರ್ಮನು ಕ್ರಿ.ಶ.೭೪೪ರಲ್ಲಿ ಪಟ್ಟಕ್ಕೆ ಬಂದನಾದರೂ ಈತನನ್ನು ರಾಷ್ಟ್ರಕೂಟರ ದೊರೆ ದಂತಿದುರ್ಗನು ಸೋಲಿಸಿ ತನ್ನ ರಾಷ್ಟ್ರಕೂಟ ರಾಜ್ಯ ಸ್ಥಾಪನೆ ಮಾಡಿದನು.

**ಬಾದಾಮಿ ಚಾಲುಕ್ಯರ ವಂಶಾವಳಿ**

ಜಯಸಿಂಹ (ಕ್ರಿ.ಶ.೫೦೦ರಿಂದ ೫೨೦)

ರಣರಾಗ (ಕ್ರಿ.ಶ.೫೨೦ರಿಂದ೫೪೦)

೧ನೇ ಪುಲಕೇಶಿ (ಕ್ರಿ.ಶ.೫೪೦ರಿಂದ ೫೬೬)

ಪೊಗವರ್ಮ | ಕೀರ್ತಿವರ್ಮ(ಕ್ರಿ.ಶ.೫೬೬ರಿಂದ ೫೯೬) | ಮಂಗಳೇಶ (ಕ್ರಿ.ಶ.೫೯೬ರಿಂದ ೬೧೦)

(ಕೀರ್ತಿವರ್ಮನ ಮಕ್ಕಳು:)

೨ನೇ ಪುಲಕೇಶಿ(ಕ್ರಿ.ಶ.೬೧೦ರಿಂದ ೬೪೨) | ಕುಬ್ಜವಿಷ್ಣುವರ್ಧನ | ಧರಾಶ್ರಯ | ಜಯಸಿಂಹವರ್ಮ

(೨ನೇ ಪುಲಕೇಶಿಯ ಮಕ್ಕಳು:)

ಆದಿತ್ಯವರ್ಮ | ಚಂದ್ರಾದಿತ್ಯ | ರಣರಾಗವರ್ಮ (ಕ್ರಿ.ಶ.೬೫೫ರಿಂದ ೬೮೧) | ವಿಕ್ರಮಾದಿತ್ಯ | ಜಯಸಿಂಹ

ವಿನಯಾದಿತ್ಯ (ಕ್ರಿ.ಶ.೬೮೧ರಿಂದ ೬೯೬)

ವಿಜಯಾದಿತ್ಯ (ಕ್ರಿ.ಶ.೬೯೬ರಿಂದ ೭೩೩)

೨ನೇ ವಿಕ್ರಮಾದಿತ್ಯ (ಕ್ರಿ.ಶ.೭೩೩ರಿಂದ ೭೪೫)

೨ನೇ ಕೀರ್ತಿವರ್ಮ (ಕ್ರಿ.ಶ.೭೪೫ರಿಂದ ೭೫೭)

ಅವರ ಕಾಲದ ಶಾಸನಗಳಲ್ಲಿ ಯಾವ ರಾಜ ಆಳುತ್ತಿದ್ದನೋ ಅಲ್ಲಿಯವರೆಗೂ ಅವನ ಕಾಲದವರೆಗೆ ವಂಶಾವಳಿಯನ್ನು ಹೇಳುತ್ತಾ ಮುಂದಿನ ವಿಷಯಕ್ಕೆ ಹೋಗಿರುತ್ತಾರೆ. ಒಟ್ಟಾರೆ ಬಾದಾಮಿ ಚಾಲುಕ್ಯ ಕಾಲದಲ್ಲಿ ಈ ಭಾಗವು ಅವರ ಅಧೀನದಲ್ಲಿತ್ತು. ಆದರೆ ಪುಲಿಗೆರೆ-೩೦೦ ಎಂಬ ಭಾಗವಾಗಿರಲಿಲ್ಲ. ಲಕ್ಷ್ಮೇಶ್ವರವನ್ನು ಆಗ ಪುರಿಕರನಗರ ಎಂದಷ್ಟೇ ಕರೆಯಲಾಗಿದೆ. ನಂತರದಲ್ಲಿ ಇದು ಪುಲಿಗೆರೆ-೩೦೦ ಎಂದಾಗಿದೆ. ಒಟ್ಟಾರೆಯಾಗಿ ಈ ಭಾಗದಲ್ಲಿ ಬಾದಾಮಿ ಚಾಲುಕ್ಯರ ಹಲವಾರು ಶಾಸನಗಳು ನಮಗೆ ದೊರೆಯುವುದರಿಂದ ಈ ಭಾಗವು ನೇರವಾಗಿ ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೇಳಬಹುದು.

ಶಾಸನಗಳಲ್ಲಿ ಈ ವಂಶಜರನ್ನು ಮಾನವ್ಯಗೋತ್ರದವರು, ಹಾರತಿಪುತ್ರರು, ಸಪ್ತಮಾತೃಕೆಯರಿಂದ ರಕ್ಷಿಸಲ್ಪಟ್ಟವರು, ಕಾರ್ತಿಕೇಯನಿಂದ ರಕ್ಷಣೆಗೆ ಒಳಗಾದವರು, ಭಗವಂತನಾದ ನಾರಾಯಣನ ಅನುಗ್ರಹದಿಂದ ಪಡೆದ 'ವರಾಹ' ಲಾಂಛನವನ್ನು ಹೊಂದಿ ಅದರ ಅಡಿಯಲ್ಲಿ ಎಲ್ಲಾ ರಾಜರನ್ನು ಅಧೀನಗೊಳಿಸಿದವರು, ಅಶ್ವಮೇದ ಯಜ್ಞವನ್ನು ಮಾಡಿ ಕೃತಾರ್ಥನಾದವನು ಪುಲಕೇಶಿ. ಇವನ ಪ್ರೀತಿಯ ಮಗ ಕೀರ್ತಿವರ್ಮ. ಇವನ ಆತ್ಮಜ ಸತ್ಯಾಶ್ರಯಪೃಥ್ವೀವಲ್ಲಭ. ಈತನ ಪ್ರಿಯತನಯ

ಪಾಂಡ್ಯ, ಚೋಳ, ಕೇರಳ, ಕದಂಬ, ಕಾಂಚೀಪತಿ, ವಿಕ್ರಮಾದಿತ್ಯ. ಇವನ ಪ್ರಿಯಾಸುನಃ ಸಕಳೋತ್ತರಾಪಥನಾಥ ಮಥನೋಪಾರ್ಜ್ಜಿತ ಪಾಳಿಧ್ವಜಾದಿ ಸಮಸ್ತ ಪರಮೇಶ್ವರ್ಯ ಚಿಹ್ನಸ್ಯ ವಿನಯಾದಿತ್ಯ, ಈತನ ಪ್ರಿಯಆತ್ಮಜ ಸ್ಸಾಹಸರಸಿಕ ವಿಜಯಾದಿತ್ಯ, ಈತನ ಪ್ರಿಯಸೂನು, ಪ್ರತಿದಿನ ಪ್ರವರ್ದ್ಧಮಾನ ಯೌವನೋರಿಪ್ರಮಂಡಲಾಕ್ರಾನ್ತರಾಜ್ಯಾಭ್ಯುದಯ ಕೇಸರಿ ಕಿಶೋರ ವಿಕ್ರಮ್ಯೆಕರಸೋ ವಿಕ್ರಮಾದಿತ್ಯ ಈ ತೆರನಾಗಿ ರಾಜರುಗಳನ್ನು ಹೊಗಳುತ್ತವೆ. ಅಲ್ಲದೆ ಅವರ ಬಹಳಷ್ಟು ಹೋರಾಟಗಳನ್ನು ಅವರಿಗೆ ಇದ್ದ ಬಿರುದುಗಳನ್ನು ತಿಳಿಸುತ್ತವೆ. ಬಹುತೇಕವಾಗಿ ಚಾಲುಕ್ಯ ವಂಶದ ಎಲ್ಲಾದೊರೆಗಳಿಗೂ ಪ್ರಥ್ವಿವಲ್ಲಭ, ಮಹಾರಾಜಾಧಿರಾಜ, ರಾಜಪರಮೇಶ್ವರ ಎಂಬ ಬಿರುದುಗಳಿರುವುದು ಕಂಡುಬರುತ್ತದೆ. ಕ್ರಿ.ಶ.೬೮೩ರ ವಿನಯಾದಿತ್ಯನ ಶಾಸನ,[೨೩] ಕ್ರಿ.ಶ.೭೨೩[೨೪]ರ ವಿಜಯಾದಿತ್ಯನ ಶಾಸನ ಮತ್ತು ೭೩೦ರ ವಿಕ್ರಮಾದಿತ್ಯನ ಶಾಸನ[೨೫] ೨ನೇಪುಲೀಕೇಶಿಯನ್ನು ಸಮರಸಂಸಕ್ತಸಕಳೋತ್ತರಾಪಥೇಶ್ವರ ಶ್ರೀಹರ್ಷವರ್ಧನಪರಾಜಂಯೋಪಲಬ್ದ ಪರಮೇಶ್ವರಾಪರನಾಮದೇಯಸ್ಯ ಸತ್ಯಾಶ್ರಯ ಎಂಬುದಾಗಿ ಕರೆಯಲಾಗಿದೆ. ಈ ಎಲ್ಲಾ ಶಾಸನಗಳು ಬಹಳವಾಗಿ ಸಂಸ್ಕೃತ ಭೂಹಿಷ್ಠವಾಗಿವೆ. ನಂತರ ರಾಜರುಗಳು ಅಸಮರ್ಥರಾದ್ದರಿಂದ ರಾಷ್ಟ್ರಕೂಟರು ಪ್ರಬಲರಾಗುತ್ತ ಬಂದಿದ್ದರಿಂದ ಬಾದಾಮಿ ಚಾಲುಕ್ಯರು ರಾಷ್ಟ್ರಕೂಟರ ಸಾಮಂತರಾದರೆಂದು ಹೇಳಬಹುದು.

**೪.೧.೬. ರಾಷ್ಟ್ರಕೂಟರು**

೮ನೇ ಶತಮಾನದ ಮಧ್ಯಭಾಗದಲ್ಲಿ ಚಾಲುಕ್ಯರನ್ನು ಸೋಲಿಸಿ ರಾಷ್ಟ್ರಕೂಟರು ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು. ಇವರ ಆಳ್ವಿಕೆ ಕಾಲವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ 'ಸುವರ್ಣಯುಗ'ವೆಂದೇ ಹೇಳಬೇಕು. ಇವರ ವಂಶಗಳು ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಪ್ರವರ್ಧಮಾನಕ್ಕೆ ಬಂದವು. ಅವುಗಳಲ್ಲಿ ಖ್ಯಾತಿಪಡೆದ ಮಾನ್ಯಖೇಟದ ರಾಷ್ಟ್ರಕೂಟರು ಬಹಳ ಪ್ರಮುಖರು. ಇವರ ರಾಜಧಾನಿ ಮಾನ್ಯಖೇಟವು ಈಗಿನ ಕಲಬುರ್ಗಿ ಜಿಲ್ಲೆಯಲ್ಲಿದೆ. ಇವರು ತಮ್ಮ ಪತಾಕೆಯಲ್ಲಿ ವಿಷ್ಣುವಿನ ವಾಹನವಾದ ಆದಿಗರುಡನ ಲಾಂಛನವನ್ನು ಹೊಂದಿ ಉತ್ತರಭಾರತದವರೆಗೂ ಅದನ್ನು ಹಾರಿಸಿದರು. ಇವರ ತಾಮ್ರಶಾಸನಗಳಲ್ಲಿ ಲಾಂಛನವನ್ನು ಕಾಣಬಹುದು.

ಇವರ ಕಾಲದ ಬಹುತೇಕ ಶಾಸನಗಳು ಗದಗ ಜಿಲ್ಲೆಯಾದ್ಯಂತ ಕಾಣಸಿಗುತ್ತವೆ. ಅವುಗಳಲ್ಲಿ ಮೇವುಂಡಿ, ಹೆಬ್ಬಾಳ, ಲಕ್ಷ್ಮೇಶ್ವರ, ಸೊರಟೂರು, ಅಸುಂಡಿ, ಚಿಂಚಲಿ, ಕುರ್ತಕೋಟಿ, ಗಾವರವಾಡ, ನಾಗಾವಿ, ನೀಲಗುಂದ, ಬೆಂತೂರು, ಮುಳಗುಂದ, ಬೆಳಹೋಡ, ವೆಂಕಟಾಪುರ, ಶಿರುಂಜ, ಹರ್ಲಾಪುರ, ರೋಣ, ಕರಮಡಿ, ಕವಜಗೇರಿ, ನರೇಗಲ್ಲ, ಸವಡಿ, ಕೊಣ್ಣೂರು, ದಂಡಾಪುರ, ಗ್ರಾಮಗಳಲ್ಲಿ ದೊರೆಯುತ್ತವೆ.

ಚಾಲುಕ್ಯರ ಕೊನೆಯ ದೊರೆಯಾದ ೨ನೇ ಕೀರ್ತಿವರ್ಮನನ್ನು ದಂತಿದುರ್ಗನು ಸೋಲಿಸಿ ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಭದ್ರ ಬುನಾದಿಯನ್ನು ಹಾಕಿದನು. ಇವನ ಕಾಲದ ಶಾಸನಗಳು ಈ ಭಾಗದಲ್ಲಿ ಯಾವುವೂ ದೊರೆಯುವುದಿಲ್ಲ. ಈತನಿಗೆ ಪೃಥ್ವೀವಲ್ಲಭ, ಖಡ್ಗಾವಲೋಕನ ಎಂಬ ಬಿರುದುಗಳಿರುವುದಾಗಿ ತಿಳಿದುಬರುತ್ತದೆ. ಇವನ ತಂದೆ ತಾತರಾದ ಇಂದ್ರ, ಕರ್ಕ, ೧ನೇ ಗೋವಿಂದ, ೧ನೇ ಇಂದ್ರ, ದಂತಿವರ್ಮ, ಇವರು ಬಾದಾಮಿ ಚಾಲುಕ್ಯರ ಸಾಮಂತರಾಗಿ ರಾಜ್ಯಬಾರ ಮಾಡುತ್ತಾ ಬಂದಿದ್ದರು.

ದಂತಿದುರ್ಗನ ಮರಣಾನಂತರ ಆತನ ಚಿಕ್ಕಪ್ಪನಾದ ೧ನೇ ಕೃಷ್ಣನು ಅಧಿಕಾರಕ್ಕೆ ಬಂದನು. ಇವನು ಬಾದಾಮಿ ಚಾಲುಕ್ಯರನ್ನು ಸಂಪೂರ್ಣವಾಗಿ ಸೋಲಿಸಿ ರಾಜ್ಯವನ್ನು ತನ್ನದಾಗಿಸಿಕೊಂಡನು ಅಲ್ಲದೆ ತನ್ನ ಮಗನಾದ ಗೋವಿಂದನಿಂದ ಕ್ರಿ.ಶ.೭೬೬ರಲ್ಲಿ ವೆಂಗಿ ಚಾಲುಕ್ಯರ ಮೇಲೆ ದಾಳಿ ಮಾಡಿಸಿ, ಅವರನ್ನು ಇತ್ತ ಬರದಂತೆ ಮಾಡುವಲ್ಲಿ ಯಶಸ್ವಿಯಾದನು. ೧ನೇ ಕೃಷ್ಣನ ಮರಣಾನಂತರ ಆತನ ಮಗನಾದ ಯುವರಾಜ ೨ನೇ ಗೋವಿಂದನು ಕ್ರಿ.ಶ.೭೭೩ರಲ್ಲಿ ಪಟ್ಟಕ್ಕೆ ಬಂದನು. ಆದರೆ ಅವನ ಸೋದರನಾದ ಧೃವನು ಇವನ ವಿರುದ್ಧ ಹೋರಾಡಿ ಸಮ್ರಾಜ್ಯವನ್ನು ತನ್ನ ಕೈವಶ ಮಾಡಿಕೊಳ್ಳುವಲ್ಲಿ ಕ್ರಿ.ಶ.೭೮೦ಲ್ಲಿ ಯಶಸ್ವಿಯಾದನು. ಇವನು ಗಂಗರ ಮೇಲೆ ದಾಳಿ ಮಾಡಿ ಅವರನ್ನು ಸೋಲಿಸಿ ಗಂಗವಾಡಿಯನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಇವನು ತನ್ನ ಮೂರನೇ ಮಗನಾದ ೩ನೇ ಗೋವಿಂದನನ್ನು ಕ್ರಿ.ಶ.೭೯೨ರಲ್ಲಿ ತನ್ನ ಉತ್ತರಾದಿಕಾರಿಯನ್ನಾಗಿ ಘೋಷಿಸಿದನು. ಆದರೆ ಇಲ್ಲಿ ಇವನ ಅಣ್ಣನಾದ ಸ್ತಂಭನು ಬಂಡಾಯ ಹೂಡಿದನಾದರೂ ಅದು ೩ನೇ ಗೋವಿಂದನ ಮುಂದೆ ನಡೆಯಲಿಲ್ಲ. ಇವನು ಉತ್ತರದಲ್ಲಿ ಗುಜರಾತದ ಮಾಳವರನ್ನು ಸೋಲಿಸಿದನು. ಇವನನ್ನು ಸಂಜನಾ ತಾಮ್ರಪಲಕದಲ್ಲಿ "ಗೋವಿಂದನ ಕುದುರೆಗಳು ಹಿಮಾಲಯದ ತೊರೆಗಳಲ್ಲಿ ಝುಳು ಝುಳು ಎಂದು ಶಬ್ದ ಮಾಡುವ ಶೀತಲ ಜಲವನ್ನು ಕುಡಿದವು ಮತ್ತು ಅವನ ಆನೆಗಳು ಗಂಗಾನದಿಯಲ್ಲಿ ಪುಣ್ಯತೀರ್ಥದ ರುಚಿ ಸವಿದವು, ಮತ್ತು ಅವನ ಮಂಗಳ ಸ್ನಾನಕಾಲದಲ್ಲಿ ಭಾರಿಸಿದ ತುತ್ತೂರಿಗಳ ನಿನಾದವು ಆ ಮಹಾಪರ್ವತದ ಕಣಿವೆಗಳಲ್ಲಿ ಅತೀವವಾಗಿ ಮಾರ್ದನೆಗೆಯ್ದಿತ್ತು" ಎಂಬುದಾಗಿ ವರ್ಣಿಸಲಾಗಿದೆ.

ಇವನ ನಂತರ ಇವನ ಮಗನಾದ ೧ನೇ ಅಮೋಘವರ್ಷನು ಕ್ರಿ.ಶ.೮೧೪ರಲ್ಲಿ ಈ ಸಾಮ್ರಾಜ್ಯದ ಅಧಿಕಾರ ಸೂತ್ರವನ್ನು ಹಿಡಿದನು. ಇವನು ಆಗಿನ್ನು ೧೪ವರ್ಷದ ಬಾಲಕ. ಆಗ ಆಡಳಿತವೆಲ್ಲವನ್ನು ೩ನೇ ಗೋವಿಂದನ ಸೋದರನಾದ ಇಂದ್ರನ ಮಗ ಕರ್ಕನು ನಿರ್ವಹಿಸಿದನು. ಈ ಸಂದರ್ಭದಲ್ಲಿ ಅನೇಕ ಸಾಮಂತರು ಸ್ವತಂತ್ರ ಘೋಷಿಸಿಕೊಂಡರು. ಆದರೆ ಇವೆಲ್ಲವನ್ನು ಅರಿತ ಅಮೋಘವರ್ಷನು ಮೊದಲು ಜಯಕಾಣದೇ ಹೋದನು. ಆಗ ಕೆಲವು ಕಾಲ ಅಜ್ಞಾತವಾಗಿದ್ದು ನಂತರ ಅಧಿಕಾರಾರೂಢನಾದನು ಮತ್ತು ಪರಿಸ್ಥಿತಿಯನ್ನು ತಿಳಿದು ಬುದ್ಧಿವಂತಿಕೆಯಿಂದ ವ್ಯವಹರಿಸುತ್ತ ಶತೃಗಳ

ಪ್ರಾಬಲ್ಯವನ್ನು ಅಡಗಿಸಿ ರಾಜ್ಯದಲ್ಲಿ ಶಾಂತಿ ನೆಲೆಸುವಂತೆ ಮಾಡಿದನು. ಆದರೆ ಗಂಗರ ನಡುವೆ ಯುದ್ಧಗಳು ಸುಮಾರು ೨೦ವರ್ಷಗಳ ಕಾಲ ನಡೆಯಿತು. ಇವನ ಸೇನಾನಿ ಬಂಕೇಶನು ಶೌರ್ಯದಿಂದಲೇ ಹೋರಾಡಿದರೂ ಸಂಪೂರ್ಣಜಯ ಸಾಧಿಸಲು ಸಾಧ್ಯವಾಗಲಿಲ್ಲ. ಕೊನೆಯಲ್ಲಿ ಅಮೋಘವರ್ಷನು ತನ್ನ ಮಗಳಾದ ಚಂದ್ರೋಬಲಬ್ಬೆಯನ್ನು ಗಂಗರ ರಾಜಕುಮಾರ ೧ನೇ ಬೂತುಗನಿಗೆ ಮದುವೆ ಮಾಡಿಕೊಡುವ ಮೂಲಕ ರಕ್ತ ಸಂಬಂಧಿಗಳಾಗಿ ಮಾಡಿಕೊಂಡನು. ತನ್ನ ಇನ್ನೊಬ್ಬ ಮಗಳಾದ ಶೀಲಮಹಾದೇವಿಯನ್ನು ವೆಂಗಿಯ ಚಾಲುಕ್ಯರ ರಾಜ ವಿಜಯಾದಿತ್ಯನ ಮಗ ವಿಷ್ಣುವರ್ಧನನಿಗೆ ವಿವಾಹ ಮಾಡಿಕೊಟ್ಟು ಆ ರಾಜಮನೆತನದನರೊಂದಿಗೆ ಸಂಬಂಧವನ್ನು ಮಾಡಿಕೊಂಡನು ಮತ್ತು ಪಲ್ಲವರ ಅರಸ ನಂದಿವರ್ಮನಿಗೆ ಮತ್ತೊಬ್ಬ ಮಗಳಾದ ಸಮ್ಮಳನ್ನು ಕೊಟ್ಟು ಪಲ್ಲವರ ಜೊತೆಯೂ ಸಹ ಸಂಬಂಧದ ಬೆಸುಗೆಹಾಕಿ, ಶಾಂತಿಯನ್ನು ಕಾಪಾಡಿ ರಾಜ್ಯದಲ್ಲಿ ಶಾಂತಿ ನೆಲೆಸುವಂತೆ ಮಾಡಿದನು. ಇವನ ಬಗ್ಗೆ ತಿಳಿಸುವ ಶಾಸನಗಳು ಈ ಭಾಗದಲ್ಲಿ ಮೇವುಂಡಿ, ನೀಲಗುಂದ, ಬೆಂತೂರು, ಸೊರಟೂರು, ಗ್ರಾಮಗಳಲ್ಲಿ ದೊರೆಯುತ್ತವೆ.

ಇವನ ನಂತರ ಈತನ ಮಗನಾದ ೨ನೇ ಕೃಷ್ಣನು ಕ್ರಿ.ಶ.೮೮೦ರಲ್ಲಿ ಅಧಿಕಾರರೂಢನಾದನು. ಇವನ ಕಾಲದ ಶಾಸನವು ಚಿಂಚಲಿ ಮತ್ತು ಶಿರುಂಜದಲ್ಲಿ ದೊರೆಯುತ್ತವೆ. ಇವು ವೀರಗಲ್ಲುಗಳಾಗಿದ್ದು ಐವತ್ತಾರು ಮಹಾಜನರ ಸಮ್ಮುಖದಲ್ಲಿ ನಿಲ್ಲಿಸಲಾಯಿತು ಮತ್ತು ಎರೆಯನ ವೀರ ಮರಣವನ್ನು ತಿಳಿಸುತ್ತವೆ. ಇವನು ಪೂರ್ವಚಾಲುಕ್ಯ, ಗುರ್ಜರ, ಪ್ರತಿಹಾರ ಮತ್ತು ಚೋಳರೊಡನೆ ಬಹಳ ಯುದ್ಧಗಳನ್ನು ಮಾಡಬೇಕಾಯಿತು.

ಇವನ ನಂತರ ಈತನ ಮಗನಾದ ಜಗತ್ತುಂಗನು ಅಕಾಲ ಮರಣ ಹೊಂದಲಾಗಿ, ಮೊಮ್ಮಗನಾದ ೩ನೇ ಇಂದ್ರನು ಕ್ರಿ.ಶ.೯೧೬ರಲ್ಲಿ ಪಟ್ಟಕ್ಕೆ ಬಂದನು. ಈತನ ಬಗ್ಗೆ ಲಕ್ಷ್ಮೇಶ್ವರದ ಕ್ರಿ.ಶ.೯೧೮ರ ಶಾಸನ ಉಲ್ಲೇಖಿಸುತ್ತದೆ.[೨೬]

ಈತನ ನಂತರ ಇವನ ಮಗ ೨ನೇ ಅಮೋಘವರ್ಷನು ಕ್ರಿ.ಶ.೯೨೯ರಲ್ಲಿ ಅಧಿಕಾರಾರೂಢನಾದನು. ಇವನ ಕಾಲದ ಶಾಸನಗಳಾವುವೂ ಈ ಭಾಗದಲ್ಲಿ ದೊರೆಯುವುದಿಲ್ಲ. ಇವನ ನಂತರ ಕ್ರಿ.ಶ.೯೩೦ರಲ್ಲಿ ಅವನ ಸಹೋದರ ೪ನೇ ಗೋವಿಂದನು ಪಟ್ಟವೇರಿದನು. ಇವನಿಗೆ ಅವನ ತಂದೆಯಂತೆಯೆ ನಿತ್ಯವರ್ಷ ಎಂಬ ಬಿರುದು ಇದ್ದುದಾಗಿ ಕ್ರಿ.ಶ.೯೨೫ರ ಅಸುಂಡಿ ಶಾಸನ ತಿಳಿಸುತ್ತದೆ.[೨೭] ಇವನ ನಂತರ ಈತನ ಚಿಕ್ಕಪ್ಪನಾದ ೩ನೇ ಅಮೋಘವರ್ಷನು ಕ್ರಿ.ಶ.೯೩೫ರಲ್ಲಿ ರಾಷ್ಟ್ರಕೂಟರ ದೊರೆಯಾದನು. ಇವನ ಕಾಲದ ಯಾವುದೇ ಶಾಸನಗಳು ಈ ಭಾಗದಲ್ಲಿ ದೊರೆತಿಲ್ಲ. ಇವನ ನಂತರ ೩ನೇ ಕೃಷ್ಣನು ಅಧಿಕಾರಕ್ಕೆ ಬಂದನು. ಇವನ ಕಾಲದ ಶಾಸನಗಳು ಸೊರಟೂರು, ಕುರ್ತಕೋಟಿಗಳಲ್ಲಿ ಲಭ್ಯವಾಗುತ್ತವೆ. ಇವನ ನಂತರ ಅವನ ಸಹೋದರ ಖೊಟ್ಟಿಗನು ಕ್ರಿ.ಶ.೯೬೭ರಲ್ಲಿ

ಪಟ್ಟಕ್ಕೆ ಬಂದನು. ಇವನ ಕಾಲದ ಶಾಸನಗಳು ಹಿರೇಹಂದಿಗೋಳ ಮತ್ತು ಸವಡಿಯಲ್ಲಿ ದೊರೆಯುತ್ತವೆ. ನಂತರ ೨ನೇ ಕರ್ಕನು ಅಧಿಕಾರಕ್ಕೆ ಬಂದನು. ಇವನು ಅಸಮರ್ಥನಾಗಿದ್ದರಿಂದ ಇವನನ್ನು ಚಾಲುಕ್ಯರ ೨ನೇ ತೈಲಪನು ಕ್ರಿ.ಶ.೯೭೩ರಲ್ಲಿ ಸೋಲಿಸಿ ಪುನ: ಚಾಲುಕ್ಯ ವಂಶವನ್ನು ಸ್ಥಾಪಿಸಿದನು.

ಒಟ್ಟಾರೆ ಈ ಭಾಗದಲ್ಲಿ ಮೂರನೇ ಗೋವಿಂದನಿಂದ ಪ್ರಾರಂಭವಾಗಿ ಮುಂದಿನ ರಾಜರುಗಳ ಕಾಲದ ಬಹುತೇಕ ಶಾಸನಗಳು ನಮಗೆ ದೊರೆಯುತ್ತವೆ. ಇವರ ಕಾಲದಲ್ಲಿ ನಡೆದ ಭೂದಾನ, ಗೊಸಹಸ್ರದಾನ ಮುಂತಾದ ಹಲವು ವಿಷಯಗಳನ್ನು ತಿಳಿಸುತ್ತವೆ. ಒಂದನೇ ಅಮೋಘವರ್ಷನ ಕಾಲದ ಹಲವು ಶಾಸನಗಳು ದೊರೆತಿದ್ದು, ಇವು ಅವರ ಬಗ್ಗೆ ತಿಳಿಯಲು ನಮಗೆ ನೆರವಾಗುತ್ತವೆ. ರಾಷ್ಟ್ರಕೂಟರ ಶಾಸನಗಳು ಈ ಭಾಗದ ಮೇವುಂಡಿ, ಚಿಂಚಲಿ, ಲಕ್ಷ್ಮೇಶ್ವರ, ಸೊರಟೂರು, ಬೆಂತೂರು, ನೀಲಗುಂದ, ಮುಳಗುಂದ, ಎಲೆಶಿರೂರು, ಅಸುಂಡಿ, ಕುರ್ತುಕೋಟಿ, ಗ್ರಾಮಗಳಲ್ಲಿ ದೊರೆಯುತ್ತವೆ. ಬೆಂತೂರು ಮತ್ತು ಮೇವುಂಡಿಗಳಲ್ಲಿ ದೊರೆಯುವ ಎರಡು ವೀರಗಲ್ಲುಗಳು ಒಂದನೇ ಅಮೋಘವರ್ಷನ ಕಾಲದ್ದಾಗಿವೆ. ಅಲ್ಲದೆ ಸುಂಕದಾನ, ಸಿರಿವಾಗಿಲ ನಿಲ್ಲಿಸಿದ ಉಲ್ಲೇಖ, ದೇವಾಲಯಕ್ಕೆ ಬಿಟ್ಟ ಭೂದಾನ, ಬಸದಿ ನಿರ್ಮಾಣ ಮತ್ತು ಅದಕ್ಕೆ ಬಿಟ್ಟ ದಾನ, ಗೊಸಹಸ್ರ ದಾನ ಮಾಡಿದ ಉಲ್ಲೇಖಗಳು, ಶಿಕ್ಷಣಕ್ಕಾಗಿ ಬಿಟ್ಟ ದಾನವಿಚಾರಗಳನ್ನು ತಿಳಿಸುವ ಶಾಸನಗಳು ದೊರೆಯುತ್ತವೆ. ಈ ಭಾಗಗಳು ಇವರ ಕಾಲದಲ್ಲಿ ನೇರವಾಗಿ ಆಳ್ವಿಕೆಗೆ ಒಳಪಟ್ಟಿದ್ದು, ಈ ದೊರೆಗಳ ಹೆಸರಿನಲ್ಲಿ ಶಾಸನಗಳು ದೊರೆಯುವುದರಿಂದ ಈ ಭಾಗ ರಾಷ್ಟ್ರಕೂಟರಿಗೆ ಸೇರಿತ್ತು ಎಂದು ಹೇಳಬಹುದು. ಇವರ ಕಾಲದಲ್ಲಿ ಬೆಳ್ವೊಲ-೩೦೦, ಪುಲಿಗೆರಿ-೩೦೦, ಮಾಸವಾಡಿ-೧೪೦ ಎಂಬುದಾಗಿ ವಿವಿಧ ರೀತಿಯ ಭಾಗಗಳಾಗಿ ಹೊರಹೊಮ್ಮಿರುವುದನ್ನು ಈ ಶಾಸನಗಳಲ್ಲಿ ಕಾಣಬಹುದು. ಇವರ ಕಾಲಕ್ಕಾಗಲೆ ಡಂಬಳ, ಡೋಣಿ, ಚಿಕ್ಕವಡ್ಡಟ್ಟಿ, ಮುಳಗುಂದ, ಚಿಂಚಲಿ, ಸೊರಟೂರು, ಎಲೆಶಿರೂರು, ಬೆಳ್ಳಟ್ಟಿ, ಮೇವುಂಡಿ, ಮುಂತಾದ ಊರುಗಳು ಪ್ರಸಿದ್ಧಿಗೆ ಬಂದಿರುವುದು ತಿಳಿಯುತ್ತದೆ.

## ರಾಷ್ಟ್ರಕೂಟರ ವಂಶಾವಳಿ



## ೪.೧.೨. ಕಲ್ಯಾಣದ ಚಾಲುಕ್ಯರು

ಬಾದಾಮಿ ಚಾಲುಕ್ಯರನ್ನು ಕ್ರಿ.ಶ.೮ನೇ ಶತಮಾನದಲ್ಲಿ ಸೋಲಿಸಿದ ರಾಷ್ಟ್ರಕೂಟರು ಮುಂದಿನ ದಿನಗಳಲ್ಲಿ ಕಲ್ಯಾಣಚಾಲುಕ್ಯರಿಂದ ಸೋಲನ್ನು ಅನುಭವಿಸಿದರು. ಈ ಪ್ರದೇಶವು ಸಂಪೂರ್ಣವಾಗಿ ಕಲ್ಯಾಣಚಾಲುಕ್ಯರ ಆಡಳಿತಕ್ಕೆ ಸೇರಿತ್ತು. ಇವರ ಅನೇಕ ಸಾಮಂತರು, ಮಂಡಳೇಶ್ವರರು, ದಂಡನಾಯಕರು ಆಳುತ್ತಿದ್ದುದು ನಮಗೆ ಇಲ್ಲಿಯ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಇವರ ಕಾಲದಲ್ಲಿ ಶಾಸನಗಳ ಸುವರ್ಣಯುಗವೇ ನಡೆಯಿತೆಂದರೆ ತಪ್ಪಾಗುವುದಿಲ್ಲ, ಶಾಸನಗಳ ಹುಟ್ಟು ದಾನದಿಂದ ಎಂಬುದು ಇಲ್ಲಿ ಉಲ್ಲೇಖಾರ್ಹ. ಇವರ ಕಾಲದಲ್ಲಿ ನಡೆದ ದಾನಧರ್ಮ, ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ನಂದಾದೀಪಕ್ಕೆ, ನಿತ್ಯ ನೈವೇದ್ಯಕ್ಕೆ, ಅಂಗಭೋಗ, ರಂಗಭೋಗಕ್ಕೆ, ಹೂದೋಟ ಮುಂತಾದವಕ್ಕೆ ದಾನಗಳನ್ನು ಬಿಟ್ಟ ಉಲ್ಲೇಖಗಳಿರುವ ಅನೇಕ ಶಾಸನಗಳು ನಮಗೆ ದಕ್ಷಿಣ ಗದಗು ಜಿಲ್ಲೆಯಲ್ಲಿ ದೊರೆಯುತ್ತವೆ.

೨ನೇ ತೈಲಪನು ಕ್ರಿ.ಶ.೯೭೩ರಲ್ಲಿ ರಾಷ್ಟ್ರಕೂಟರ ಕೊನೆಯ ದೊರೆ ಕರ್ಕನನ್ನು ಸೋಲಿಸಿ, ಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಂಡು, ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನೆಂದು ತಿಳಿಯುತ್ತದೆ. ಆದರೆ ತೈಲಪನು ಕ್ರಿ.ಶ.೯೭೭ ರಲ್ಲಿ ೪ನೇ ಕನ್ನರನನ್ನು ಸೋಲಿಸಿ ತನ್ನ ರಾಜ್ಯ ಸ್ಥಾಪಿಸಿದುದಾಗಿ ರೋಣದಲ್ಲಿ ದೊರೆತ ವೀರಗಲ್ಲುಗಳಿಂದ ತಿಳಿದುಬರುತ್ತದೆ. ಎರಡನೇ ತೈಲನ ಕಾಲದ ಎರಡು ಶಾಸನಗಳು ದಕ್ಷಿಣ ಗದಗು ಜಿಲ್ಲೆಯ ಭಾಗದಲ್ಲಿ ಹೊಸೂರು ಮತ್ತು ನೀಲಗುಂದದಲ್ಲಿ ದೊರೆಯುತ್ತವೆ. ಬಾದಾಮಿ ಚಾಲುಕ್ಯರಂತೆ ಇವರೂ ಸಹ ಸತ್ಯಾಶ್ರಯ, ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ ಮುಂತಾದ ಬಿರುದುಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವರು ಮೊದಲು ರಾಷ್ಟ್ರಕೂಟರ ಸಾಮಂತರಾಗಿ ಇದ್ದುದಾಗಿ ತಿಳಿದುಬರುತ್ತದೆ. ಬಾದಾಮಿ ಚಾಳುಕ್ಯರಂತಯೇ ಇವರು ಅಹವಮಲ್ಲ ಎಂಬ ಬಿರುದನ್ನು ಧರಿಸಿದ್ದರು. ಇವೆಲ್ಲ ಕಾರಣಗಳಿಂದ ಬಾದಾಮಿ ಚಾಲುಕ್ಯರ ಮುಂದುವರೆದ ರಾಜವಂಶ ಈ ಕಲ್ಯಾಣಚಾಲುಕ್ಯ ವಂಶವೆಂದು ಹೇಳಬಹುದು. ಎರಡನೇ ತೈಲನು ಮೊದಲಿಗೆ ಚೋಳ, ಆಂದ್ರ, ಪಾಂಡ್ಯ, ಇವರುಗಳನ್ನು ಸೋಲಿಸಿದನೆಂಬುದು ತಿಳಿಯುತ್ತದೆ.

ಇವನ ನಂತರ ಇರಿವಬೆಡಂಗ ಸತ್ಯಾಶ್ರಯ ಕ್ರಿ.ಶ.೯೭ರಲ್ಲಿ ಚಾಳುಕ್ಯ ದೊರೆಯಾಗಿ ಸಾಮ್ರಾಜ್ಯವನ್ನು ಮುಂದುವರೆಸಿಕೊಂಡು ಬಂದನು. ಕ್ರಿ.ಶ.೧೦೦೨ರ ಗದಗ ಶಾಸನದಲ್ಲಿ ಇವನನ್ನು ಅಹವಮಲ್ಲ.[೨೮] ಸಾಹಸಭೀಮ, ಚಾಲುಕ್ಯ ಮಾರ್ತಾಂಡ, ಇರಿವಬೆಡಂಗ, ಎಂಬ ಬಿರುದುಗಳಿಂದ ಕರೆಯಲಾಗಿದೆ. ಎಲೆಶಿರೂರು, ಲಕ್ಕುಂಡಿಗಳಲ್ಲಿ ಇವನ ಶಾಸನಗಳು ಈ ಭಾಗದಲ್ಲಿ ದೊರೆಯುತ್ತವೆ. ಲಕ್ಕುಂಡಿ ಶಾಸನ ಇವನು ಗುಜರಾತದ ಮೇಲೆ ದಾಳಿ ಮಾಡಿದ ಬಗ್ಗೆ ತಿಳಿಸುತ್ತದೆ.

ನಂತರ ಐದನೇ ವಿಕ್ರಮಾದಿತ್ಯನು ಕ್ರಿ.ಶ.೧೦೦೯ರಲ್ಲಿ ಆಳ್ವಿಕೆಗೆ ಬಂದನು. ಇವನ ಬಗ್ಗೆ ಮುಂಡರಗಿ ತಾಲೂಕಿನ ಕ್ರಿ.ಶ.೧೦೧೦ರ ಪೇಠಾಆಲೂರು[೨೯] ಮತ್ತು ಸೂಡಿ ಶಾಸನ ಹಾಗೂ ಕ್ರಿ.ಶ.೧೦೧೨ರ ಕೋಟುಮಚಗಿ ಶಾಸನಗಳು ತಿಳಿಸುತ್ತವೆ.[೩೦]

ಇವನ ನಂತರ ದೊರೆಯಾಗಿ ಬಂದ ೫ನೇ ವಿಕ್ರಮಾದಿತ್ಯನ ಸಹೋದರ ಜಗದೇಕಮಲ್ಲದೇವ ಅಥವ ೨ನೇ ಜಯಸಿಂಹ ಕ್ರಿ.ಶ.೧೦೧೮ರಲ್ಲಿ ರಾಜ್ಯಸೂತ್ರವನ್ನು ಹಿಡಿದನು. ಇವನ ಬಗ್ಗೆ ಹೇಳುವ ಶಾಸನಗಳು ಗದಗ, ಅಸುಂಡಿ, ಮುಳಗುಂದ, ಶಿರೂರು, ಹೊಸೂರು, ನಾಗರಹಳ್ಳಿ, ಬರದೂರು ಗ್ರಾಮಗಳಲ್ಲಿ ದೊರೆಯುತ್ತವೆ.

ಇವನ ನಂತರ ಜಯಸಿಂಹನ ಮಗ ೧ನೇ ಸೋಮೇಶ್ವರ ಕ್ರಿ.ಶ.೧೦೪೨ರಿಂದ ೧೦೬೮ರವರೆಗೂ ಆಳಿದ. ಒಂದನೇ ಸೋಮೇಶ್ವರನ ಕಾಲದ ಶಾಸನಗಳು ಕ್ರಿ.ಶ.೧೦೫೩ರ ಅಸುಂಡಿ ಶಾಸನ, ಎಲಿಶಿರೂರ ಶಾಸನ, ಮುಳಗುಂದದ ಕ್ರಿ.ಶ.೧೦೫೩ರ ಶಾಸನ, ಪೇಠಾಆಲೂರಿನ ಕ್ರಿ.ಶ.೧೦೬೮ರ ಶಾಸನ, ಕೊರಲಹಳ್ಳಿಯ ಕ್ರಿ.ಶ.೧೦೫೦ರ ಶಾಸನ, ಕ್ರಿ.ಶ.೧೦೫೪ರ ತಾಮ್ರಗುಂಡಿ ಶಾಸನ, ಶಿರೂರಿನ ಕ್ರಿ.ಶ.೧೦೪೮ರ ಶಾಸನಗಳು ಈ ಭಾಗದಲ್ಲಿ ದೊರೆಯುತ್ತವೆ. ಈತನಿಗೆ ತ್ರೈಲೋಕ್ಯಮಲ್ಲದೇವ, ಸಮಸ್ತ ಭುವನಾಶ್ರಯ, ಸತ್ಯಾಶ್ರಯಕುಳತಿಳಕ ಎಂಬ ಬಿರುದುಗಳಿದ್ದುದಾಗಿ ಬೆಂತೂರಿನ ಶಿಲಾಶಾಸನ ತಿಳಿಸುತ್ತದೆ. ತಾಮ್ರಗುಂಡಿಯ ಶಾಸನ ಇವನನ್ನು ದ್ವಾರವತೀಪುರವರೇಶ್ವರ, ಯಾದವ ವಂಶೋದ್ಬವಂ, ಯುವತಿ ಜನವಿತ್ತೋದ್ಬವಂ, ಸುವರ್ಣಗರುಡಧ್ವಜಂ ಎಂದು ಶಾಸನಗಳು ಹೊಗಳಿವೆ. ಅಲ್ಲದೆ ಈತನು ಚೋಳರ ಮೇಲೆ ಹೋರಾಟ ನಡೆಸಿದ್ದ ಎಂಬುದರ ಬಗ್ಗೆ ತಿಳಿಸುತ್ತದೆ.

ನಂತರ ಇವನ ಮಗನಾದ ಎರಡನೇ ಸೋಮೇಶ್ವರನು ಅಧಿಕಾರಕ್ಕೆ ಬಂದನು. ಇವನ ಕಾಲದ ಶಾಸನಗಳು ಚಿಂಚಲಿ, ಲಕ್ಕುಂಡಿ, ಸೊರಟೂರು, ಲಕ್ಷ್ಮೇಶ್ವರ ಮುಂತಾದ ಕಡೆ ಕ್ರಿ.ಶ.೧೦೬೮ರಿಂದ ೧೦೭೬ರವರೆಗಿನ ಶಾಸನಗಳು ಈ ಭಾಗದಲ್ಲಿ ದೊರೆಯುತ್ತವೆ. ಈ ಶಾಸನಗಳು ಇವನನ್ನು 'ಭುವನೈಕಮಲ್ಲ' ಎಂಬ ಬಿರುದಿನಿಂದ ಕರೆದಿವೆ.

ಇವನ ನಂತರ ಆತನ ಸಹೋದರನಾದ ಆರನೇ ವಿಕ್ರಮಾದಿತ್ಯನು ತನ್ನ ಅಣ್ಣನ ವಿರುದ್ಧ ದಂಗೆ ಎದ್ದು ರಾಜ್ಯವನ್ನು ತನ್ನ ಕೈವಶ ಮಾಡಿಕೊಂಡು, ಕ್ರಿ.ಶ.೧೦೭೬ರಿಂದ ೧೧೨೬ರವರೆಗೆ ಆಳಿದನು. ಇವನ ಕಾಲದ ಶಾಸನಗಳು ಈ ಭಾಗದಲ್ಲಿ ಬಹಳಷ್ಟು ಸಿಗುತ್ತವೆ. ಇವನಷ್ಟು ಶಾಸನಗಳನ್ನು ಹಾಕಿಸಿರುವ ಮತ್ತಾವ ದೊರೆಯೂ ಸಿಗಲಾರರು. ಕಲ್ಯಾಣ ಚಾಲುಕ್ಯರ ಕಾಲವನ್ನು **'ಶಾಸನಗಳ ಕಾಲದ ಸುವರ್ಣಯುಗ'** ಎಂದರೆ ತಪ್ಪಲ್ಲ. ಅವರ ಕಾಲದ ಬಹಳಷ್ಟು ಶಾಸನಗಳು ಈ ಭಾಗದಲ್ಲಿ ಸಿಗುತ್ತವೆ. ಎಲಿಶಿರೂರ, ಕಣವಿ, ಮುಳಗುಂದ, ನೀಲಗುಂದ, ಶಿರೋಳ, ಗದಗ, ಕುರ್ತಕೋಟಿ, ಲಕ್ಷ್ಮೇಶ್ವರ, ಕಕ್ಕೂರು, ಡಂಬಳ, ಡೋಣಿ, ಶಿರೂರು, ಶಿಂಗಾಟಾಲೂರು, ಮಾಚೆನಹಳ್ಳಿ,

ತಗ್ಗಿನಭವೆನೂರು, ಕಪ್ಪಲಟ್ಟಿ, ಗ್ರಾಮಗಳಲ್ಲಿ ಇವನ ಕಾಲದ ಶಾಸನಗಳು ದೊರೆಯುತ್ತವೆ. ಇವನನ್ನು 'ತ್ರಿಭುವನಮಲ್ಲ' ಎಂಬ ಬಿರುದಿನಿಂದ ಕರೆಯಲಾಗಿದೆ. ಗದಗಿನ ವೀರನಾರಾಯಣ ಗುಡಿಯ ರಂಗ ಮಂಟಪದ ಬಳಿಯ ಕ್ರಿ.ಶ.೧೦೯೯ರ ಒಂದು ಶಾಸನ ಇವನು ವಿಕ್ರಮವರ್ಷ ಪ್ರಾರಂಭಿಸಿದ ಉಲ್ಲೇಖವನ್ನು ಹೇಳುತ್ತದೆ.[೩೧] ಕ್ರಿ.ಶ.೧೦೭೭–೧೦೭೮ರ ಲಕ್ಷ್ಮೇಶ್ವರದ ಒಂದು ಶಾಸನ ಇವನ ಕಾಲದ್ದಾಗಿದ್ದು, ಇವನ ಆಳ್ವಿಕೆಯ ಎರಡನೇ ವರ್ಷದ ಪಿಂಗಳನಾಮ ಸಂವತ್ಸರದ ಆಷಾಢ ಶುದ್ಧ ದ್ವಾದಶಿ ಬುಧವಾರದಂದು ಪುರಿಕರ ನಗರಿಯಲ್ಲಿ ಪಾದಾನೆ ಸಜ್ಜೆಯ ಬಸದಿಯಲ್ಲಿ ಶ್ರೀನಂದಿಪಂಡಿತದೇವನು ಸಲ್ಲೇಖನ ವ್ರತ ಕೈಗೊಂಡು ಮರಣಹೊಂದಿದ ಉಲ್ಲೇಖವನ್ನು ಹೇಳುತ್ತದೆ. ಕ್ರಿ.ಶ.೧೦೮೨ರ ಲಕ್ಷ್ಮೇಶ್ವರದ ಶಾಸನವು "ಸ್ಥಿರ ಸಿಂಹಾಸನಮಾದುದು ಧರೆಯಾಳ್ಚಾಳುಂಕ್ಯವಂಶಮ ತ್ರೈಲಪನಿಂಪೊರೆದುದು" ಎಂದು ಈ ವಂಶ ಸ್ಥಾಪಕ ತ್ರೈಲನಿಂದ ಆಯಿತು ಎಂಬುದಾಗಿ ಸ್ಪಷ್ಟವಾಗಿ ತಿಳಿಸುತ್ತದೆ. ಇವನ ಬಗ್ಗೆ ಕ್ರಿ.ಶ.೧೦೮೧ರ ಲಕ್ಷ್ಮೇಶ್ವರದ ಶಾಸನವು[೩೨]

"ಧರೆಯಂ ವಾರಾಶಿಪರ್ಯನ್ತಮನವಯವದಿಂದುರ್ವ್ವಿನೀತಾಮನೀಪಾ
ಳರ ಬೇರಂ ಕಿರ್ತ್ತು ನೀರೊಳ್ಗಲಗಲನಲೆದೀಡಾಡಿ ಮುನ್ನಿನ್ತು ಚಕ್ರೇ
ಶ್ವರರಾರ್ ನಿಷ್ಕಂಟಕಂ ಮಾಡಿದರೆನೆ ಮಹಿ ನಿಷ್ಕಂಟಕಂ ಮಾಡಿ ಚಕ್ರೇ
ಶ್ವರರತ್ನಂ ಸನ್ತತಂ ಪಾಳಿಸಿದನತಿಬಳಂ ವಿಕ್ರಮಾದಿತ್ಯದೇವಂ ॥"

ಎಂದು ಉಲ್ಲೇಖಿಸುತ್ತದೆ. ಅಂದರೆ ಧರೆಯಲ್ಲಿ ಬಂಡೆದ್ದ ರಾಜರುಗಳ ಬೇರುಗಳನ್ನು ಕಿತ್ತು ಅದನ್ನು ಪರಪರನೆ ಹರಿದು ನೀರಿನಲ್ಲಿ ಕಲಕಿ ಭೂಮಿಯನ್ನು ನಿಷ್ಕಂಟಕವಾಗಿ ಮಾಡಿದನು ಅಲ್ಲದೇ ಚಕ್ರೇಶ್ವರನಾಗಿ ಭೂಮಿಯನ್ನು ಪ್ರತಿಪಾಲಿಸಿದ ಎಂಬುದಾಗಿ ಸ್ಪಷ್ಟಪಡಿಸುತ್ತದೆ.

"ರಾಜಾ ಬಹುಪತ್ನಿ ವಲ್ಲಭ" ಎಂಬುದು ೬ನೇ ವಿಕ್ರಮಾದಿತ್ಯನಿಗೆ ಸರಿ ಹೊಂದುತ್ತದೆ. ಪ್ರಾಚೀನ ಮಹಿಳೆಯರ ಸ್ಥಾನಮಾನದಲ್ಲಿ ಬಹುಪತ್ನಿತ್ವ ರಾಜನಿಗೆ ಪ್ರತಿಷ್ಠೆ ಮತ್ತು ಶೋಭೆಯನ್ನು ಹೆಚ್ಚಿಸುತ್ತಿತ್ತು. ಇವನಿಗೆ ಬಹಳಷ್ಟು ಜನ ರಾಣಿಯರಿದ್ದುದಾಗಿ ತಿಳಿಯುತ್ತದೆ. ನಮ್ಮ ಸಂಸ್ಕೃತಿಯಲ್ಲಿ ಹಿರಿಯ ಪತ್ನಿಗೆ ಮಕ್ಕಳು ಜನಿಸದಿದ್ದಾಗ ಮತ್ತೊಬ್ಬ ಪತ್ನಿಯನ್ನು ಮದುವೆ ಮಾಡಿಕೊಳ್ಳುವ ಸಂಪ್ರದಾಯವಿದೆ. ಆದರೆ ರಾಜರು ಸ್ವಪ್ರತಿಷ್ಠೆಗಾಗಿ ಮತ್ತು ಸುತ್ತಲಿನ ರಾಜರ ಜೊತೆ ಶಾಂತಿಯಿಂದಿರಲು ಸಹ ಹೆಚ್ಚೆಚ್ಚು ವಿವಾಹಗಳನ್ನು ಆಗುತ್ತಿದ್ದರು. ಈ ಪದ್ಧತಿ ಸರ್ವೆಸಾಮನ್ಯವಗಿತ್ತು. ಚಕ್ರವರ್ತಿ ಮತ್ತು ಸಾಂಮತರ ಪತ್ನಿಯರನ್ನು 'ರಾಣಿ' 'ಅರಸಿ' ಎಂದು ಕರೆಯಲಾಗುತ್ತಿತ್ತು. ಈ ರಾಣಿಯರನ್ನು ಪಿರಿಯರಸಿ, ಪಿರಿಯರಸಿ ಪಟ್ಟಮಹಾದೇವಿ ಮತ್ತು ರಾಣಿಯರೆಂದು ವಿಂಗಡಿಸಲಾಗಿತ್ತು. ಇದರಲ್ಲಿ ಪಿರಿಯರಸಿ ಎಂದರೆ ಹಿರಿಯರಾಣಿ. ಮೊದಲು ವರಿಸಿದ ಪತ್ನಿ ಸಂತಾನ ಪಡೆದವರಾದರೆ ಈಕೆಯನ್ನು ಪಿರಿಯರಸಿ ಪಟ್ಟಮಹಾದೇವಿಯೆನಿಸಿಕೊಳ್ಳುತ್ತಿದ್ದಳು. ಉಳಿದವರು ಕೇವಲ ರಾಣಿಯರೆನಿಸಿರುತ್ತಿದ್ದರು. ಭಾರತದ

ಸಾಂಸ್ಕೃತಿಕ ಅಭಿವೃದ್ಧಿಗೆ ನೆಲೆಗಟ್ಟಾಗಿ ನಿಂತವರು ಸಣ್ಣ, ದೊಡ್ಡ ಅರಸು ಮನೆತನಗಳ ರಾಜಾಡಳಿತವಾಗಿದೆ. ಇವರಲ್ಲಿ ಒಬ್ಬನೆಂದರೆ ಕಲ್ಯಾಣ ಚಾಲುಕ್ಯ ಮನೆತನದ ದೊರೆ ಆರನೇ ವಿಕ್ರಮಾದಿತ್ಯ. ಈತನು ಶೌರ್ಯದಲ್ಲಿ ನಾರಾಯಣನೆಂತಲೂ, ವಿವಾಹದಲ್ಲಿ ಶ್ರೀಕೃಷ್ಣನಾಗಿದ್ದನೆಂದು ಶಾಸನಗಳಲ್ಲಿ ಬಣ್ಣಿಸಲಾಗಿದೆ. ಚಾಲುಕ್ಯರ ಚರಿತ್ರೆಯಲ್ಲಿ ವಿಕ್ರಮಾದಿತ್ಯನನ್ನು ಪೆರ್ಮಡಿ, ಬಲ್ಲವರಸ ಮತ್ತು ತ್ರಿಭುವನಮಲ್ಲ ಎಂದು ಕರೆಯಲಾಗಿದೆ. ಈತನು ಮೊದಲನೇ ಸೋಮೇಶ್ವರ ಮತ್ತು ಬಾಚಲದೇವಿಯರ ಮೂವರು ಮಕ್ಕಳಲ್ಲಿ ಎರಡನೆಯವನು. ಈತನು ತನ್ನ ಬಹುಸಂಖ್ಯಾತ ರಾಣಿಯರನ್ನು ಒಂದೆಡೆ ಇಟ್ಟುಕೊಂಡು ಜೀವನ ನಡೆಸುವ ಬದಲು ಸಾಧ್ಯವಾದಷ್ಟು ಇವರನ್ನು ದೂರವಿಟ್ಟು ಆಡಳಿತವನ್ನು ಜಾಣ್ಮೆಯಿಂದ ನಡೆಸಿದನು. ಇದು ಸವತಿಮತ್ಸರ ತಪ್ಪಿಸುವ ತಂತ್ರವಾಗಿತ್ತು ಹಾಗೂ ರಾಜಕೀಯ ಭದ್ರತೆಗೆ ನೆರವಾಗಿದ್ದಿತು. ಅನೇಕ ರಾಣಿಯರನ್ನು ಅಡಳಿತ ಕೇಂದ್ರಗಳಿಗೆ ಅಧಿಕಾರಿಗಳನ್ನಾಗಿ ನೇಮಕ ಮಾಡಿದ್ದನು. ಏಕೆಂದರೆ ಅರಿಷಡ್ವರ್ಗಗಳನ್ನು ಗೆಲ್ಲುವಂಥ ವಾತವರಣ ಇಲ್ಲಿರುತ್ತಿತ್ತು. ಈ ಅಗ್ರಹಾರಗಳು ಸುರಕ್ಷಿತ ಸ್ಥಳಗಳಾಗಿದ್ದವು. ಅಂತಹ ನಿಪುಣನಾದ ವಿಕ್ರಮಾದಿತ್ಯನು ೨೦ ಜನ ರಾಣಿಯರನ್ನು ಹೊಂದಿದ್ದನು. ಅದರಲ್ಲಿ ೧) ಕದಂಬ ಜಯಕೇಶಿಯ ೧ನೇ ಮಗಳು ೨) ಲಕ್ಷ್ಮೀದೇವಿ ೩) ಚಂಗಾದೇವಿ ೪) ಕೇತಲಾದೇವಿ ೫) ಸವಳಾದೇವಿ ೬) ಅಂಗಬ್ಬರಸಿ ೭) ಪದ್ಮಲಾದೇವಿ ೮) ಅಬ್ಬಲಾದೇವಿ ೯) ಸುಗ್ಗಲಾದೇವಿ ೧೦) ಮೈಳಲಾದೇವಿ ೧೧) ಇಂಗುಳಿಗೆಯ ಬಾಕಲದೇವಿ ೧೨) ಚೋಳರಾಜಕುಮಾರಿ ೧೩) ಪಿರಿಯ ಕೇತುದೇವಿ ೧೪) ಶ್ರೀಯದೇವಿ ೧೫) ಮನ್ನಾದೇವಿ ೧೬) ಮಲಯಮತಿದೇವಿ ೧೭) ಮಲ್ಲಣಿದೇವಿ ೧೮) ಜಾಕಲಾದೇವಿ ೧೯) ಬಾಗಲಾಮಹಾದೇವಿ ಹೀಗೆ ಹಲವಾರು ಜನ ಪತ್ನಿಯರಿದ್ದರು. ಇವರು ವಿಕ್ರಮಾದಿತ್ಯನಿಗೆ ನೆರವಾಗಿ ಆಡಳಿತವನ್ನು ಹಲವು ಭಾಗಗಳಲ್ಲಿ ನಡೆಸಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ವಿಕ್ರಮಾದಿತ್ಯನು ಚೋಳ ರಾಜಕುಮಾರಿ ಜೊತೆ ಲಗ್ನ ಮಾಡಿಕೊಂಡು ತಾನು ಅರಸನಾಗುವ ಜೊತೆ ವಂಶಪರಂಪರೆಯಿಂದ ಬಂದಿದ್ದ ಹಗೆತನವನ್ನು ಹೋಗಲಾಡಿಸಿ ಶಾಶ್ವತ ಶಾಂತಿ ಸಂಬಂಧವನ್ನು ಏರ್ಪಡಿಸಿದನು. ಕಳಚುರಿ ಮನೆತನದ ಜೋಗಮ ಮತ್ತು ತಾರಾದೇವಿಯರ ಮಗಳಾದ ಸಾವಳದೇವಿಯನ್ನು ಲಗ್ನವಾದನು, ಈಕೆ ಗದಗ ಜಿಲ್ಲೆಯ ರೋಣ ತಾಲೂಕಿನ ಅಗ್ರಹಾರ ನರೆಯಂಗಲ್ಲಿನ ಆಳ್ವಕೆಯನ್ನು ನಡೆಸುತ್ತಿದ್ದಳು. ವಿಕ್ರಮಾದಿತ್ಯನು ಧಾರಾನಗರವನ್ನು ಸುಟ್ಟು ಪರಮಾರರ ಉದಯಾದಿತ್ಯನನ್ನು ಸೋಲಿಸಿ ಮರಳಿ ಬರುವಾಗ ಕೊಲ್ಲಾಪುರ ಶಿಲಾಹಾರ ಭೋಜನಮೇಲೆ ಯುದ್ಧಕ್ಕೆ ಹೋದನು. ಆಗ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಕೊಂಗಜರಸನ ಕಡೆಯ ಚಂಡರಸನು ಭೋಜನ ಆನೆಯ 'ಪಾಳಿಮೊಗಮ' ಕಿತ್ತು ಹಲವರನ್ನು ಸಾಯಿಸಿ ತಾನೂ ಮಡಿದನು. ಈ ಯುದ್ಧದಲ್ಲಿ ಜಯಶಾಲಿಯಾದ ವಿಕ್ರಮಾದಿತ್ಯ ಶಾಸನಯುಕ್ತ ವಿಜಯಸ್ಥಂಭವನ್ನು ನಿಲ್ಲಿಸಿದನು. ಇದರಲ್ಲಿ ಕೊಂಗಜರಸನ ಪ್ರಶಸ್ತಿಯಲ್ಲಿ "ಭಾವನಂಕಕರ

ಪದ್ಮಲದೇವಿಯ ನಿಜಗಂಥವಾರ್‌ಣದ ಉಲ್ಲೇಖವಿದೆ. ಈಕೆಯೇ ಬಿಜ್ಜಳನ ಮುತ್ತಬ್ಬೆ. ಈ ಸಂದರ್ಭದಲ್ಲಿ ವಿಕ್ರಮಾದಿತ್ಯನು ಯುವರಾಜನಾಗಿದ್ದಾಗ ಮದುವೆಯಾಗಿದ್ದು ಪದ್ಮಲಾದೇವಿಯನ್ನು. ಬೆಳಗಾವಿ ಜಿಲ್ಲೆಯ ರಾಯಬಾಗ ಪ್ರದೇಶದ ಮಹಾಮಂಡಲೇಶ್ವರನಾಗಿದ್ದ ಕೊಂಗಜರಸನ ಸಹೋದರಿಯೇ ಈ ಪದ್ಮಲಾದೇವಿ, ಈಕೆ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಅಗ್ರಹಾರ ಮಾಗಳವನ್ನು ಆಳುತ್ತಿದ್ದಳು. ಕೇತಲಾದೇವಿ ಎಂಬುವಳನ್ನು ಈತನು ಮದುವೆಯಾಗಿದ್ದ. ಈಕೆ ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕುಳೇಕೆ ಮಟ್ಟಿಗೆಯವಳಾಗಿದ್ದಳು. ಜನಪ್ರಿಯಳೂ ಧಾರ್ಮಿಕ ಮನೋಭಾವದವಳಾಗಿದ್ದ ಪಿರಿಯರಸಿ ಲಕ್ಷ್ಮಾದೇವಿ. ವಿಕ್ರಮಾದಿತ್ಯನು ತನ್ನ ಜೀವಮಾನದ ಮೊದಲ ದಿನಗಳಲ್ಲಿ ಮದುವೆಯಾಗಿದ್ದ ರಾಣಿಯರಲ್ಲಿ ಮೊದಲಿಗಳು, ಇವಳನ್ನು ಕುಮಾರ ವೃತ್ತಿಯಿಂದ ಆಳೂವಾಗಲೇ ಮದುವೆ ಆಗಿರಬೇಕು, ಈಕೆ ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಖೇಡೆಯ ಬಹುಶಃ ಶಿಲ್ಪಿ ಮನೆತನದ ಕಂಡೋಜ ಮತ್ತು ಮಸಣಿಕವೆ ನಾಯಕಿತಿಯರ ಮಗಳು. ಈಕೆ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಡೋಣಿ, ಡಂಬಳ ಮತ್ತು ೧೪ ಅಗ್ರಹಾರಗಳನ್ನು ಆಳುತ್ತಿದುದಾಗಿ ಶಾಸನಗಳಲ್ಲಿ ದೊರೆಯುತ್ತದೆ. ಗೋವೆಯ ಕದಂಬರ ಮೊದಲ ಜಯಕೇಶಿಯೂ ತನ್ನ ಪುತ್ರಿಯನ್ನು ವಿಕ್ರಮಾದಿತ್ಯನಿಗೆ ಧಾರೆಎರೆದು ಕೊಟ್ಟು ಅತನಿಗೆ ಸಂಪತ್ತನ್ನು ಕೊಟ್ಟನು. ಚಂದಲಾದೇವಿಯು ವಿಕ್ರಮಾದಿತ್ಯನ ಪ್ರಿಯರಾಣಿಯಾಗಿದ್ದಳು ಅಲ್ಲದೆ ಶ್ರೇಷ್ಠ ನೃತ್ಯಗಾರ್ತಿಯಾಗಿದ್ದಳು. ಬಿಲ್ಲಣನು ತನ್ನ ಕಾವ್ಯದಲ್ಲಿ ಇವರೀರ್ವರ ಲಗ್ನ, ಮಧುಚಂದ್ರವಿಹಾರ ಇತ್ಯಾದಿ ವಿವರಗಳನ್ನು ನೀಡಿದ್ದಾನೆ. ಈಕೆಯು ಪಿರಿಯರಸಿ ಎನಿಸಿದ್ದು, ಗುಲ್ಬರ್ಗ ಪ್ರದೇಶದ ಅಳಂದ ಭಾಗದಲ್ಲಿದ್ದ ಭತ್ತ ಗ್ರಾಮಗಳನ್ನು ಈಕೆ ನೋಡಿಕೊಳ್ಳುತ್ತಿದ್ದಳು. ಈಕೆಯ ಕೈಕೆಳಗೆ ಹಲವಾರು ಅಧಿಕಾರಿಗಳಿದ್ದರು. ಅವರಲ್ಲಿ ಒಬ್ಬವನು ಕಲಿಯಮರಸ. ಈತನು ಬಂಕಾಪುರದವನಾಗಿದ್ದ. ಈಕೆಯ ಉದರದಿಂದ ಮೂರನೇ ಸೋಮೇಶ್ವರನು, ತೈಲಪ ಮತ್ತು ಜಯಕರ್ಣರು ಹುಟ್ಟಿದರು, ಒಬ್ಬ ಪುತ್ರಿಯು ಜನಿಸಿದಳು. ಅಂಗಬ್ಬರಸಿ ಎಂಬುವಳು ಈತನ ಮತ್ತೊಬ್ಬ ರಾಣಿ ರಾಜನನ್ನು ಇಲ್ಲಿ ಬಲ್ಲವರಸ ಎನ್ನಲಾಗಿದೆ. ಈಕೆ ವಿಜಾಪುರ ಜಿಲ್ಲೆಯ ದೇವರ ಗೆಣ್ಣೂರಿನವಳಿರಬೇಕು. ಪ್ರಿಯಾಂಗನೆ ಎನಿಸಿದ್ದ ಈತನ ಒಬ್ಬ ರಾಣಿ ಕೇತಲಾದೇವಿ ಎಂಬುವಳು ಹಿರಿಯ ರಾಣಿ ಎನಿಸಿದ್ದಳು. ಈಕೆ ಬಳ್ಳಾರಿ ಜಿಲ್ಲಾ ಶಿರಗುಪ್ಪ ತಲೂಕಿನ ೩ ಭತ್ತ ಗ್ರಾಮಗಳನ್ನು ಆಳುತ್ತಿದ್ದಳು. ಈಕೆಯ ಅಧಿಕಾರಿ ಸಿಂಧವಂಶದ ಸಾಮಂತ ಮನ್ನೆಯ ಚೊಕ್ಕರಸನಾಗಿದ್ದನು. ಈತನ ಮತ್ತೊಬ್ಬ ರಾಣಿ ಜಾಕಲಾದೇವಿ ಜೈನಧರ್ಮಿಯಾಳಾಗಿದ್ದು ಈಕೆ ಕದಂಬ ಚೂಡಾಮಣಿ ಎನಿಸಿದ್ದ ಚಿಕ್ಕನ ಮಗಳಾಗಿದ್ದು ಅರಸನ ಜೊತೆ ಯುದ್ಧಕ್ಕೆ ಹೋಗುತ್ತಿದ್ದಳೆಂದು ಕಾಣುತ್ತದೆ, ಈಕೆ ಗುಲ್ಬರ್ಗ ಜಿಲ್ಲೆಯ ಸೇಡಂ ತಾಲೂಕಿನ ಇಂಗುಣಿಗಿಯನ್ನು ಆಳುತ್ತಿದ್ದಳು. ಮೈಳಲಮಹಾದೇವಿ ಎಂಬುವಳು ಈತನ ಪಿರಿಯರಸಿ ಪಟ್ಟಮಹಾದೇವಿಯಾಗಿದ್ದಳು. ಈಕೆಯು ವಿಜಾಪುರ ಜಿಲ್ಲೆಯ ಸಿಂದಗಿಯಲ್ಲಿ ಕಾಣಿಸಿದ್ದಾಳೆ. ಶ್ರೀಯಾದೇವಿ ಎಂಬ ಈತನ ಒಬ್ಬ ರಾಣಿಯು

ಬೀದರ ಜಿಲ್ಲೆಯ ಬಗದಾಳದಿಂದ, ಮತ್ತೊಬ್ಬ ರಾಣಿ ಮನ್ನಾದೇವಿ ಎಂಬವಳು ಅಳಂಪುರದಲ್ಲಿ ಕಾಣಿಸಿದ್ದಾಳೆ. ಮಲೆಯಮತಿದೇವಿ ಈತನ ಪಿರಿಯರಸಿ ಪಟ್ಟಮಹಾದೇವಿ ಸ್ಥಾನ ಪಡೆದಿದ್ದಳು. ಈಕೆಯ ಪೂರ್ಣ ಹೆಸರು ಗೂರ್ಜ್ಜರ ಮಲಯಮತಿದೇವಿ, ಈಕೆ ಗುಲ್ಬರ್ಗ ಜಿಲ್ಲೆಯ ದಿಗ್ಗಾವಿಯನ್ನು ಮತ್ತು ಸಿಂದೆವಾಡಿಯ ಅಗ್ರಹಾರ ತುಂಬಳವನ್ನು ಆಳುತ್ತಿದ್ದಳು. ಮಹಾಮಂಡಳೇಶ್ವರ ಮನ್ನೆಯ ಲೋಕರಸ ಮತ್ತು ಹೈಹಯ ವಂಶದ ಮಹಾಮಂಡಳೇಶ್ವರ ಅಯ್ಯಣದೇವ ಈಕೆಯ ಸೇವಕರಾಗಿದ್ದರು. ಮಲ್ಲಣದೇವಿ ಈತನ ಮತ್ತೊಬ್ಬ ಪತ್ನಿಯಾಗಿದ್ದಳು. ಇನ್ನೋರ್ವ ರಾಣಿ ಸುಗ್ಗಲಾದೇವಿ ಎಂಬುವಳು ಮಲ್ಲಣದೇವಿಯ ಸಹೋದರಿಯಾಗಿದ್ದು ಈಕೆಯು ಮಹಾರಾಷ್ಟ್ರದ ನಾಂದೇಡ ಜಿಲ್ಲೆಯ ಬಿಮ್ರಾದಲ್ಲಿ ಆಳುತ್ತಿದ್ದಳು. ಬಾಗಲಮಹಾದೇವಿ ಎಂಬ ರಾಣಿಯು ಮಂಡಳಿಕ ರಾಜರಸನ ಸೊಸೆಯಾಗಿದ್ದು, ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಸಿರೂರಿನ ಶಾಸನದಲ್ಲಿ ಈಕೆಯ ಬಗ್ಗೆ ಉಲ್ಲೇಖಿಸುತ್ತದೆ. ಅಬ್ಬಲಾದೇವಿ ಎಂಬುವಳು ರಾಯಚೂರು ಜಿಲ್ಲೆಯ ಭತ್ತಗ್ರಾಮ 'ಲಿಂಗ' ಅಂದರೆ ಲಿಂಗಸೂಗೂರನ್ನು ಆಳುತ್ತಿದ್ದಳು. ಜಾಕಲಮಹಾದೇವಿ ಈತನ ರಾಣಿಯರಲ್ಲಿ ಒಬ್ಬಳಾಗಿದ್ದಳಲ್ಲದೆ ಈಕೆ ಜೈನಧರ್ಮಿಯಾಳಾಗಿದ್ದಳು. ಈಕೆಯು ಹಾವೇರಿ ಜಿಲ್ಲೆಯ ಹಿರೇಲಿಂಗದಹಳ್ಳಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು. ಇವರಲ್ಲದೆ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ತೇಲ್ಸಂಗದಲ್ಲಿ ಒಬ್ಬರಾಣಿ ಮತ್ತು ಆಂಧ್ರದ ತೆಲಂಗಾಣ ಪ್ರದೇಶದಲ್ಲಿ ಒಬ್ಬರಾಣಿ ಇದ್ದುದಾಗಿ ತಿಳಿದುಬರುತ್ತಾದಾದರು ಅವರ ಹೆಸರುಗಳು ತಿಳಿಯುವುದಿಲ್ಲ.

ಈತನು ಚೋಳರ ಜೊತೆ ನಿರಂತರವಾಗಿ ಯುದ್ಧಗಳನ್ನು ನಡೆಸಬೇಕಾಯಿತು. ಚೋಳ ದೊರೆ ೧ನೇ ರಾಜರಾಜನ ವಿರುದ್ಧ ಕಂಪಿಲೆ ಮತ್ತು ಕೊಪ್ಪಂ ಯುದ್ಧಗಳನ್ನು ನಡೆಸಿದನು. ೧ನೇ ರಾಜೇಂದ್ರನ ಜೊತೆ ಕೊಲ್ಲಾಪುರದಲ್ಲಿ ಯುದ್ಧ ಮಾಡಿದನು. ಇದು ಇನ್ನು ಮುಂದುವರೆದು ವೀರರಾಜೇಂದ್ರ ಮತ್ತು ರಾಜೇಂದ್ರರವರೆಗೂ ಮುಂದುವರೆಯಿತು. ಮುಂದೆ ವಿಕ್ರಮಾದಿತ್ಯನು ಚೋಳ ರಾಜಕುಮಾರಿ ಜೊತೆ ಲಗ್ನ ಮಾಡಿಕೊಂಡು ತಾನು ಅರಸನಾಗುವ ಜೊತೆ ವಂಶಪರಂಪರೆಯಿಂದ ಬಂದಿದ್ದ ಹಗೆತನವನ್ನು ಹೋಗಲಾಡಿಸಿ ಶಾಶ್ವತ ಶಾಂತಿ ಸಂಬಂಧವನ್ನು ಏರ್ಪಡಿಸಿದನು. ನಂತರ ಪಾರಮಾರರ ದೊರೆ ಉದಯಾದಿತ್ಯನನ್ನು ಸೋಲಿಸಿ, ಧಾರಾನಗರವನ್ನು ಸುಟ್ಟಿದ್ದಾಗಿ ತಿಳಿದುಬರುತ್ತದೆ. ಈತನು ಆಳ್ವಿಕೆ ನಡೆಸುವವರೆಗೂ ದಕ್ಷಿಣದಲ್ಲಿ ಪ್ರವರ್ಧಮಾನಕ್ಕೆ ಬಂದ ಹೊಯ್ಸಳರು ಈತನ ಸಾಮಂತರಾಗಿಯೇ ಇದ್ದರು. ವಿಷ್ಣುವರ್ಧನನು ಸ್ವತಂತ್ರನಾಗಲು ಎಷ್ಟೆ ಹಂಬಲಿಸಿದರೂ ಅದು ಸಾಧ್ಯವಾಗಿಲ್ಲ, ಅಲ್ಲದೆ ಇವನ ತಮ್ಮ ಜಯಸಿಂಹ ಪುಲಗೇರಿ-೩೦೦, ಬೆಳ್ವೊಲ-೩೦೦, ಬನವಾಸಿ-೧೨೦೦ ಕನ್ನೂರ್ಡಸಾಸಿರವನ್ನು ಆಳುತ್ತಿದ್ದುದಾಗಿ ತಿಳಿಸುತ್ತದೆ. ಒಟ್ಟಾರೆ ವಿಕ್ರಮಾದಿತ್ಯನ ಶಾಸನಗಳು ಈ ಭಾಗದಲ್ಲಿ ಬಹಳಷ್ಟು

ದೊರೆತಿದ್ದು, ಇವನ ಆಳ್ವಿಕೆಯಲ್ಲಿ ದಾನ, ಧರ್ಮ, ಇವನ ಕೈಕೆಳಗೆ ಆಳುತ್ತಿದ್ದ ಬಹಳಷ್ಟು ಸಾಮಂತ ದೊರೆಗಳ ವಿಚಾರವನ್ನು ಈ ಶಾಸನಗಳು ಹೊರಹಾಕುತ್ತವೆ.

ಇವನ ನಂತರ ಪಟ್ಟಕ್ಕೆ ಬಂದ ಮೂರನೇ ಸೋಮೇಶ್ವರನನ್ನು 'ಭೂಲೋಕಮಲ್ಲ' ಬಿರುದಿನಿಂದ ಕರೆಯಲಾಗಿದೆ. ಇವನು ಶಾಂತಿಪ್ರಿಯನಾಗಿದ್ದು, ಹಳೆಯ ಕೆಲವು ದಾನಗಳನ್ನು ಪುನಃ ಪುನರ್ದತ್ತಿಬಿಟ್ಟು, ಒಡೆದ ಶಾಸನಗಳನ್ನು ಮತ್ತೆ ಹಾಕಿಸಿದ ಬಗ್ಗೆ ತಿಳಿಸುತ್ತದೆ. ಇವನನ್ನು ಸರ್ವಜ್ಞ ಚಕ್ರವರ್ತಿ ಎಂಬ ಬಿರುದಿನಿಂದ ಕರೆಯಲಾಗುತ್ತದೆ. ಇವನ ಕಾಲದ ಶಾಸನಗಳು ಈ ಭಾಗದಲ್ಲಿ ಗದಗ, ಕುರ್ತುಕೊಟಿ, ಲಕ್ಷ್ಮೇಶ್ವರ, ಗ್ರಾಮಗಳಲ್ಲಿ ದೊರೆಯುತ್ತವೆ. ಇವು ಕ್ರಮವಾಗಿ ವಾಮಣಯ್ಯನಾಯಕನ ಸ್ತುತಿಯನ್ನು, ಬೊಪಯ್ಯ ನಾಯಕನಿಂದ ನಂದಾದೀವಿಗೆ ದಾನ ಬಿಟ್ಟಿದ್ದನ್ನು ಮತ್ತು ಕದಂಬದೊರೆ ಜಯಕೇಶಿಯು ೧೧೨೮ರಲ್ಲಿ ಕೊಂಕಣ-೯೦೦, ಪಲಸಿಗೆ-೧೨೦೦೦ ಆಳುತ್ತಿದ್ದ ಉಲ್ಲೇಖ ಮತ್ತು ಸೋಮೇಶ್ವರ ದೇವರಿಗೆ ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ. ಈತನು ಸಾಹಿತ್ಯಾಭಿಮಾನಿಯಾಗಿದ್ದು, 'ಮಾನಸೋಲ್ಲಾಸ' (ಅಭಿಲಾಷಿತಾರ್ಥ ಚಿಂತಾಮಣಿ) ಎಂಬ ಗ್ರಂಥವನ್ನು ರಚಿಸಿರುತ್ತಾನೆ. ಕ್ರಿ.ಶ.೧೧೩೮ರಲ್ಲಿ ಮರಣಹೊಂದಿದನು.

ಇವನ ತರುವಾಯ ೩ನೇ ಸೋಮೇಶ್ವರನ ಮಗನಾದ ೨ನೇ ಜಗದೇಕಮಲ್ಲನು ಅಧಿಕಾರಕ್ಕೆ ಬಂದನು. ಇವನನ್ನು 'ಪೆರ್ಮ' ಎಂದು ಕರೆಯಲಾಗಿದೆ. ಇವನ ಬಗ್ಗೆ ಎಲಿಶಿರೂರ, ಮುಳಗುಂದ, ಲಕ್ಕುಂಡಿ, ಲಕ್ಷ್ಮೇಶ್ವರ, ಶಾಸನಗಳು ಉಲ್ಲೇಖಿಸುತ್ತವೆ. ಇವನ ಕಾಲದಲ್ಲಿ ಇವನ ಮಾಂಡಳೀಕರು ಸ್ವತಂತ್ರರಾದರು. ಇಲ್ಲಿಂದ ಇವರ ಅವನತಿ ಪ್ರಾರಂಭವಾಯಿತು. ಹೊಯ್ಸಳರು ದಕ್ಷಿಣ ಭಾಗದಲ್ಲಿ ಪ್ರಬಲರಾಗಿ ಚಾಲುಕ್ಯರ ರಾಜ್ಯವನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಳ್ಳುವಲ್ಲಿ ಯಶಸ್ವಿಯಾದರು.

ಇವನ ತರುವಾಯ ಜಗದೇಕಮಲ್ಲನ ಸಹೋದರ ೩ನೇ ತೈಲಪನು ಕ್ರಿ.ಶ.೧೧೪೯ರಲ್ಲಿ 'ತ್ರೈಲೋಕಮಲ್ಲ' ಎಂಬ ಬಿರುದಿನಿಂದ ಪಟ್ಟವೇರಿದನು. ಇವನು ಅಸಮರ್ಥನಾಗಿದ್ದುದರಿಂದ ಉತ್ತರದಲ್ಲಿ ಸೇವುಣರು, ದಕ್ಷಿಣದಲ್ಲಿ ಹೊಯ್ಸಳರು ಈ ರಾಜ್ಯವನ್ನು ವಶಪಡಿಸಿಕೊಂಡರು. ಇವನ ಕಾಲದ ಶಾಸನಗಳು ಲಕ್ಕುಂಡಿ, ಲಕ್ಷ್ಮೇಶ್ವರ ಗ್ರಾಮಗಳಲ್ಲಿ ಭೂದಾನ ಮಾಡಿದ ಬಗ್ಗೆ ತಿಳಿಸುತ್ತವೆ. ೨ನೇ ಜಗದೇಕಮಲ್ಲನ ಕಾಲಕ್ಕಾಗಲೇ ಕಳಚುರಿ ಬಿಜ್ಜಳನು ಖ್ಯಾತನಾಗಿದ್ದು ಇವರನ್ನು ಮೂಲೆಗೊತ್ತಿ ತಾನೇ ಸ್ವತಂತ್ರ ಆಡಳಿತ ಮಾಡಹತ್ತಿದನು.

೩ನೇ ತೈಲಪನ ನಂತರ ಅವನ ಮಗ ೪ನೇ ಸೋಮೇಶ್ವರ ಕ್ರಿ.ಶ.೧೧೮೨ರಲ್ಲಿ ಪಟ್ಟಕ್ಕೆ ಬಂದು, ತನ್ನ ರಾಜ್ಯವನ್ನು ಉಳಿಸಿಕೊಳ್ಳಲು ಕಳಚುರಿ ದೊರೆಗಳನ್ನು ಸೋಲಿಸಿ, ಆಡಳಿತ ಸೂತ್ರವನ್ನು ಹಿಡಿದನು. ಇವನ ಕಾಲದ ಶಾಸನಗಳು ಚಿಂಚಲಿ, ಗದಗ, ಲಕ್ಕುಂಡಿ, ಲಕ್ಷ್ಮೇಶ್ವರ, ಡಂಬಳ, ಗ್ರಾಮಗಳಲ್ಲಿ

ದೊರೆಯುತ್ತವೆ. ಇವು ಇವನ ಆಡಳಿತಕ್ಕೆ ಪುಷ್ಟಿ ನೀಡುತ್ತವೆ. ಇವನನ್ನು ತ್ರಿಭುವನಮಲ್ಲ, ಚಾಲುಕ್ಯ ಚಕ್ರವರ್ತಿ, ಚಾಲುಕ್ಯ ಪ್ರತಾಪಚಕ್ರವರ್ತಿ ಎಂಬ ಬಿರುದುಗಳಿಂದ ಕರೆಯಲಾಗಿದೆ.

ಕ್ರಿ.ಶ. ಸುಮಾರು ೧೧೩೭-೧೧೩೮ರಿಂದ ಮುಂದೆ ಎರಡನೇ ಜಗದೇಕಮಲ್ಲನ ಕೆಲವು ಶಾಸನಗಳು ದೊರೆಯುತ್ತವೆ. ಈತನು ಕ್ರಿ.ಶ.೧೧೪೮ರ ವರೆಗೆ ಆಳ್ವಿಕೆ ಮಾಡಿದಂತೆ ಕಂಡು ಬರುತ್ತದೆ. ಈ ಕಾಲಕ್ಕಾಗಲೇ ಚಾಲುಕ್ಯ ಸಾಮ್ರಾಜ್ಯ ಸ್ವಲ್ಪ ಅವನತಿಯತ್ತ ನಡೆಯುತ್ತಿರುವುದು ಕಂಡುಬರುತ್ತದೆ. ಈತನ ತರುವಾಯ ಮೂರನೇ ತೈಲ 'ತ್ರಿಭುವನಮಲ್ಲ' ಎಂಬ ಬಿರುದು ಧರಿಸಿ ಪಟ್ಟಕ್ಕೆ ಬಂದಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಈತನ ಕಾಲಕ್ಕೆ ಕಳಚೂರಿಗಳು ಪ್ರಬಲವಾಗುತ್ತಿರುವುದು ಕಂಡುಬರುತ್ತದೆ. ಈತನು ಕ್ರಿ.ಶ.೧೧೪೯-೫೦ರಿಂದ ೧೧೮೦-೮೧ರವರೆಗೆ ಆಳ್ವಿಕೆ ನಡೆಸಿರಬಹುದು. ಇಲ್ಲಿ ಕಳಚುರಿಗಳ ಆಡಳಿತ ಪ್ರಬಲವಾಗಿರುವುದರಿಂದ ಚಾಲುಕ್ಯರು ನೇಪತ್ಯಕ್ಕೆ ಸೇರಿರಲೂಬಹುದು. ಈತನ ಕಾಲದ ಶಾಸನಗಳು ಈ ಭಾಗದಲ್ಲಿ ಕ್ರಿ.ಶ.೧೧೫೭ರವರೆಗೆ ದೊರೆಯುತ್ತವೆ. ಈ ಕಾಲಕ್ಕೆ ದಕ್ಷಿಣದಲ್ಲಿ ಹೊಯ್ಸಳರು ಪ್ರಬಲರಾದ್ದರಿಂದ ಇವರ ಅವನತಿಗೆ ಕಾರಣವಾಗಿದೆ. ಕ್ರಿ.ಶ.೧೧೮೪ರಿಂದ ಮುಂದೆ ನಾಲ್ಕನೇ ಸೋಮೇಶ್ವರನ ಶಾಸನಗಳು ಕ್ರಿ.ಶ.೧೧೮೭ರವರೆಗೆ ದೊರೆಯುತ್ತವೆ. ಕ್ರಿ.ಶ.೧೧೮೪ರ ಲಕ್ಷ್ಮೇಶ್ವರದ ಶಾಸನವು ಸೋಮೇಶ್ವರದೇವ ವರ್ಷದ ೩ನೇ ಕ್ರೋದಿಸಂವತ್ಸರ ಎಂದು ಹೇಳಿರುವುದರಿಂದ ಕ್ರಿ.ಶ.೧೧೮೧-೮೨ರಲ್ಲಿ ಈತನು ಪಟ್ಟಕ್ಕೆ ಬಂದಂತೆ ತಿಳಿಯುತ್ತದೆ. ಆದರೆ ಈ ಕಾಲಕ್ಕಾಗಲೇ ಸೇವುಣರು ಉತ್ತರ ಕರ್ನಾಟಕದಲ್ಲಿ ಪ್ರಬಲವಾದ ಕಾರಣ ಚಾಳುಕ್ಯ ಸಾಮ್ರಾಜ್ಯ ಕಾಲವಶವಾಗಿರುವುದು ಕಾಣುತ್ತದೆ. ಒಟ್ಟಾರೆ ಶಾಸನಗಳ ದೃಷ್ಟಿಯಿಂದ ಕಲ್ಯಾಣ ಚಾಲುಕ್ಯರ ಕಾಲ 'ಸುವರ್ಣ ಯುಗ'ವಾಗಿತ್ತು. ಅವರ ಕಾಲದ ಬಹಳಷ್ಟು ಶಾಸನಗಳು ದಾನ, ಧರ್ಮ, ರಾಜಕೀಯ ಪರಿಸ್ಥಿತಿಗಳನ್ನು, ಅವರ ಆಡಳಿತವನ್ನು ತಿಳಿಯಲು ಬಹಳ ಸಹಕಾರಿಯಾಗಿವೆ.

**ಕಲ್ಯಾಣ ಚಾಲುಕ್ಯರ ವಂಶಾವಳಿ**

೨ನೇ ತೈಲಪ ತ್ರೈಲೋಕಮಲ್ಲ(ಕ್ರಿ.ಶ.೯೭೩ರಿಂದ ೯೯೭)

ಇರಿವಬೆಡಂಗ ಸತ್ಯಾಶ್ರಯ(ಕ್ರಿಶ.೯೯೭ರಿಂದ ೧೦೦೮) ದಶವರ್ಮ

೫ನೇ ವಿಕ್ರಮಾದಿತ್ಯ (ಕ್ರಿ.ಶ.೧೦೦೯ರಿಂದ೧೦೧೮)

ಅಯ್ಯಣ

೨ನೇ ಜಯಸಿಂಹ(ಜಗದೇಕಮಲ್ಲ) (ಕ್ರಿ.ಶ.೧೦೧೮ರಿಂದ ೧೦೪೨)

೧ನೇ ಸೋಮೇಶ್ವರ

೩ನೇ ಜಯಸಿಂಹ(ಕ್ರಿ.ಶ.೧೦೪೨ರಿಂದ ೧೦೬೮)

೨ನೇಸೋಮೇಶ್ವರ (ಕ್ರಿ.ಶ.೧೦೬೮ರಿಂದ ೧೦೭೬)

೬ನೇ ವಿಕ್ರಮಾದಿತ್ಯ (ಕ್ರಿ.ಶ.೧೦೭೬ರಿಂದ ೧೧೨೭)

೪ನೇಜಯಸಿಂಹ

೩ನೇ ಸೋಮೇಶ್ವರ (ಕ್ರಿ.ಶ.೧೧೨೭ರಿಂದ ೧೧೩೮)

೨ನೇ ಜಗದೇಕಮಲ್ಲ (ಕ್ರಿ.ಶ. ೧೧೩೮ರಿಂದ ೧೧೪೯) ೩ನೇ ತೈಲಪ (ಕ್ರಿ.ಶ.೧೧೪೯ರಿಂದ ೧೧೬೨)

೪ನೇ ಸೋಮೇಶ್ವರ (ಕ್ರಿ.ಶ.೧೧೫೮ರಿಂದ ೧೧೯೮)

೨ನೇ ಭೂಲೋಕಮಲ್ಲ

೩ನೇ ಜಗದೇಕಮಲ್ಲ

**೪.೧.೮. ಕಲಚುರಿಗಳು**

ಕಲ್ಯಾಣ ಚಾಲುಕ್ಯರ ಅವನತಿಗೆ ಬಹಳಷ್ಟು ಕಾರಣರಾದವರು ಈ ಕಲಚುರಿಗಳು. ಇವರು ಮೊದಲಿಗೆ ಕಲ್ಯಾಣ ಚಾಲುಕ್ಯರ ಮಾಂಡಲಿಕರಾಗಿ ಮುಂದೆ ಕ್ರಿ.ಶ.೧೧೬೨ರಲ್ಲಿ ಸ್ವತಂತ್ರ ದೊರೆಗಳೆಂದು ಘೋಷಿಸಿಕೊಂಡರು. ಇವರನ್ನು ಶಾಸನಗಳಲ್ಲಿ ಕಲಚೂರ್ಯ, ಕಲಸ್ತೂರಿ, ಕಲಚ್‌ಚೂರಿ, ಎಂಬುದಾಗಿ ಕರೆಯಲಾಗಿದೆ. ಇವರು ಉತ್ತರ ಭಾರತದ ಕಟಚ್ಚುರಿ ಮನೆತನಕ್ಕೆ ಸೇರಿದ ಹೈಹಯ ಕುಲಕ್ಕೆ ಸೇರಿದವರು. ಇವರ ಉಲ್ಲೇಖ ಮೊದಲಿಗೆ ನೆರೂರು ತಾಮ್ರ ಶಾಸನದಲ್ಲಿ ಮತ್ತು ಮಹಾಕೂಟದ ಮಂಗಳೇಶನ ಕ್ರಿ.ಶ. ೬೦೨ರ ಶಾಸನ ಮತ್ತು ಕ್ರಿ.ಶ.೬೪೩ರ ಎರಡನೇ ಪುಲಕೇಶಿಯ ಐಹೊಳೆ ಪ್ರಶಸ್ತಿ

ಶಾಸನದಲ್ಲಿ ಕಂಡುಬರುತ್ತದೆ. ಶಾಸನಗಳ ದೃಷ್ಟಿಯಿಂದ ಈ ಭಾಗದಲ್ಲಿ ಗದಗ, ಎಲೆಶಿರೂರ, ಕಣಿವೆ, ಮುಳಗುಂದ, ಹರ್ತಿ, ಲಕ್ಕುಂಡಿ, ಡೋಣಿ, ಲಕ್ಷ್ಮೇಶ್ವರ ಗ್ರಾಮಗಳಲ್ಲಿ ಬೆರಳೆಣಿಕೆಯಷ್ಟು ದೊರೆಯುತ್ತವೆ.

ಕಲ್ಯಾಣ ಚಾಲುಕ್ಯರ ಮಾಂಡಳೀಕನಾಗಿದ್ದ ಬಿಜ್ಜಳನು ಸ್ವತಂತ್ರ ಆಳ್ವಿಕೆಗೆ ಕ್ರಿ.ಶ.೧೧೫೭ರಲ್ಲಿ ಅಡಿಪಾಯ ಹಾಕಿದನು. ಇವನು ಮೂರನೇ ತೈಲಪನನ್ನು ಕೊಂದು ತಾನೇ ಸಾರ್ವಭೌಮನಾದನು. ಲಕ್ಷ್ಮೇಶ್ವರದಲ್ಲಿ ದೊರೆಯುವ ಇವನ ಶಾಸನವು ಕ್ರಿ.ಶ.೧೧೬೧ರದಾಗಿದ್ದು ಶಕವರ್ಷ ೧೦೮೩ನೆಯ 'ಶ್ರೀಮದ್ಭುಜಬಳ ಚಕ್ರವರ್ತಿ ತ್ರಿಭುವನಮಲ್ಲ ವೀರಬಿಜ್ಜಳ ದೇವ' ವರ್ಷದ ೬ನೆಯ ವಿಷ ಸಂವತ್ಸರದ ಎಂದು ಹೇಳುತ್ತದೆ.[೩೩] ಅಂದರೆ ಈತನು ಕ್ರಿ.ಶ.೧೧೫೫ರ ವೇಳೆಗಾಗಲೆ ಪ್ರಬಲನಾಗುತ್ತ ಬಂದಿರುವುದು ಕಂಡುಬರುತ್ತದೆ. ಮೂರನೇ ತೈಲನನ್ನು ಈತನು ಲೆಕ್ಕಿಸದೇ ಸ್ವತಂತ್ರ ಆಡಳಿತಕ್ಕೆ ಹವಣಿಸುತ್ತಿರುವುದು ನಮಗೆ ತಿಳಿಯುತ್ತದೆ. ಕ್ರಿ.ಶ.೧೧೫೭ರಿಂದ ೧೧೭೪ರ ಮಧ್ಯದ ಅವಧಿಯಲ್ಲಿ ಕಲ್ಯಾಣ ಚಾಲುಕ್ಯರ ಶಾಸನಗಳು ಈ ಭಾಗದಲ್ಲಿ ನಮಗೆ ದೊರೆಯುವುದಿಲ್ಲ. ಕ್ರಿ.ಶ.೧೧೬೨ರ ಗದಗದ ಶಾಸನವು ಇವನನ್ನು ಸಮಸ್ತ ಭುವನಾಶ್ರಯ, ಶ್ರೀಪೃಥ್ವಿವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ, ಕಾಳಂಜರಪುರವರಾದೀಶ್ವರ, ಸುವರ್ಣವೃಷಭಧ್ವಜ, ಡಮರುಗ ತೋರ್ಯನಿರ್ಘೋಶಣ, ಕದನಪ್ರಚಂಡ, ಸುಭಟರಾಧಿತ್ಯ, ಛಲದಂಕರಾಮ, ಕಲಚುರಿಚಕ್ರವರ್ತಿ, ಭುಜಭಳಮಲ್ಲದೇವ ಎಂದು ಉಲ್ಲೇಖಿಸಿದೆ. ಆದರೂ ಇವನ ಆಡಳಿತವನ್ನು ಹೊಯ್ಸಳರು, ಪಾಂಡ್ಯರು ವಿರೋಧಿಸಿದರು. ಈ ವೇಳೆಗಾಗಲೇ ಬಸವಣ್ಣನವರ ವಿಚಾರಧಾರೆಗಳು ಇವನಿಗೆ ಸಮಸ್ಯೆಗಳನ್ನು ಸೃಷ್ಟಿಸಿದವು. ಹೀಗಾಗಿ ಇವನ ಕಾಲದ ಶಾಸನಗಳು ವಿರಳ. ದೊರೆತ ಕೆಲವು ಶಾಸನಗಳು ದಾನಕೊಟ್ಟ ಮತ್ತು ಗ್ರಾಮನಿರ್ಮಾಣ ಮಾಡಿದ ಬಗ್ಗೆ ತಿಳಿಸುತ್ತವೆ. ಆದ್ದರಿಂದ ಈ ಭಾಗವು ಕಲಚುರಿಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದು. ಮೊದಲು ಇವರ ಕಾಲದ ಶಾಸನಗಳಲ್ಲಿ ಕಲ್ಯಾಣಚಾಲುಕ್ಯರ ವಂಶಾವಳಿಯನ್ನು ಹೇಳಿ "ತತ್ಕಾಲದೊಳ್ ಶ್ರೀಮತ್ಕಳಚುರಿಯಕುಳೋದ್ದಾಮಂ ನೆಗಳ್ದಂ ಧರಿತ್ರಿಯೋಳ್, ಜಯಲಕ್ಷ್ಮೀದಾಮಂ ಪಾಲಿತ ವಿಬುಧಸ್ತೋಮಂ ಬಿಜ್ಜಳನೃಪಾಳ"[೩೪] ಎಂದು ಹೇಳುವುದರಿಂದ ಮೊದಲ ಭಾಗದಲ್ಲಿ ಇವರು ಕಲ್ಯಾಣಚಾಲುಕ್ಯರ ಸಾಮಂತರಾಗಿದ್ದು, ನಂತರ ಸ್ವತಂತ್ರರಾಗಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಈತನು ಕ್ರಿ.ಶ.೧೧೫೫ರಿಂದಲೇ ತೈಲಪನನ್ನು ಕಡೆಗಣಿಸಿ ಆಡಳಿತ ಸೂತ್ರವನ್ನು ಹಿಡಿದಿರುವಂತೆ ತಿಳಿದುಬರುತ್ತದೆ.

ಬಿಜ್ಜಳನ ೬ ಜನ ಮಕ್ಕಳಾದ ವಜ್ರದೇವ, ರಾಯಮುರಾರಿಸೋವಿದೇವ, ಮಲ್ಲಿಕಾರ್ಜುನ, ಸಂಕಮ, ಅಹವಮಲ್ಲ ಮತ್ತು ಸಿಂಘಣ. ಇವರಲ್ಲಿ ರಾಯಮುರಾರಿ ಸೋವಿದೇವನು ಕ್ರಿ.ಶ.೧೧೬೭ರಿಂದ ೧೧೭೭ರ ಆಸುಪಾಸಿನವರೆಗೆ ಆಡಳಿತ ಮಾಡಿರುವುದು ತಿಳಿಯುತ್ತದೆ. ಈತನು ಹಲವಾರು ದಾನಧರ್ಮಗಳನ್ನು ಮಾಡಿರುವುದು ತಿಳಿದುಬರುತ್ತದೆ. ಲಕ್ಷ್ಮೇಶ್ವರದ ಶಾಸನವು ಇವನ

ಬಿರುದುಗಳನ್ನು.[೩೫] ಹಾಗೂ ರಾಣಿ ಧಾರಲಾದೇವಿ, ಪಟ್ಟದರಸಿ ಸವಲಾದೇವಿಯರ ಬಗ್ಗೆ ತಿಳಿಸುತ್ತದೆ. ಇವನ ಕಾಲದ ಶಾಸನಗಳು ಲಕ್ಕುಂಡಿ, ಕಣಿವಿ, ಚಿಕ್ಕಹಂದಿಗೋಳ, ಬೆಳಹೋಡ, ನಿಡಗುಂದಿಯಲ್ಲಿ ದೊರೆಯುತ್ತವೆ. ಕ್ರಿ.ಶ.೧೧೭೭ರ ಜನವರಿ ೧೬ರಂದು ರಾಯಮುರಾರಿಸೋವಿದೇವನು ಮರಣಹೊಂದಲಾಗಿ ಇವನ ಮಗ ಮಲ್ಲುಗಿದೇವನು ಕ್ರಿ..ಶ.೧೧೭೩ ರಿಂದ ೭೬ವರೆಗೆ ಆಳಿದನು. ಇವನ ನಂತರ ಸಂಕಮನು ಕ್ರಿ.ಶ.೧೧೭೬ರಲ್ಲಿ ಪಟ್ಟಕ್ಕೆ ಬಂದನು. ಇವನು ಕೇವಲ ೪-೫ ವರ್ಷಗಳು ಮಾತ್ರ ಆಳ್ವಿಕೆಯನ್ನು ಮಾಡಿದ್ದಾನೆ. ಈ ಭಾಗದಲ್ಲಿ ಇವನ ಕಾಲದ ಶಾಸನಗಳು ಕ್ರಿ.ಶ.೧೧೭೮ ರಿಂದ ೧೧೮೪ರ ವರೆಗೆ ದೊರೆಯುತ್ತವೆ. ಕ್ರಿ.ಶ.೧೧೭೯ರ ಲಕ್ಕುಂಡಿ ಶಾಸನ ಅಗ್ರಹಾರದ ಅಭಿನವಪ್ರಸನ್ನಕೇಶವದೇವ ಮತ್ತು ಶಂಕರದೇವರಿಗೆ ಮಲೆಯಗಿರಿಯ ೧೦೦ರ ಪ್ರತಿನಿಧಿಗಳು ವ್ಯಾಪಾರದಿಂದ ಬಂದ ಆದಾಯವನ್ನು ದಾನಬಿಟ್ಟ ಬಗ್ಗೆ ತಿಳಿಸುತ್ತದೆ. ಲಕ್ಷ್ಮೇಶ್ವರದ ಕ್ರಿ.ಶ.೧೧೭೯ರ ಶಾಸನವು ಲಕ್ಷ್ಮಣೇಶ್ವರ ದೇವಾಯದ ಜೀರ್ಣೋದ್ದಾರಕ್ಕಾಗಿ ತ್ರಿಲೋಚನ ಪಂಡಿತದೇವರಿಗೆ ದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೩೬] ಇವನು ಹೊಯ್ಸಳ ದೊರೆ ವೀರ ಬಲ್ಲಾಳನಿಂದ ಸೋತ ಮೇಲೆ ಇವರು ಅವನತಿಯತ್ತ ಸಾಗಿದರು. ಅನಂತರ ಈ ಕಲಚುರಿಗಳ ಶಾಸನಗಳು ದೊರೆಯುವುದಿಲ್ಲ. ಇವೆಲ್ಲವುಗಳನ್ನು ನೋಡಿದರೆ ಕ್ರಿ.ಶ.೧೧೫೫ ರಿಂದ ೧೧೮೩-೮೪ರವರೆಗೆ ಈ ಪ್ರದೇಶ ಕಲಚುರಿಗಳ ಆಳ್ವಿಕೆಗೆ ಒಳಪಟ್ಟಿರುವುದು ದೃಢಪಡುತ್ತದೆ. ಕೇವಲ ೨೬ ವರ್ಷಗಳ ಆಳ್ವಿಕೆಯನ್ನು ನಡೆಸಿದ್ದರೂ ಸಹ ಕರ್ನಾಟಕದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ.

**ಕಲಚುರಿ ವಂಶ**

ರಾಜ(ಉಚಿತ) (ಕ್ರಿ.ಶ.ಸು.೯೨೫)
|
೧ನೇ ಅಸಗ (ಕ್ರಿ.ಶ.ಸು.೯೫೦)
|
೧ನೇ ಕನ್ನಮ (ಕ್ರಿ.ಶ.ಸು.೯೭೫)
|
ಕಿಯಸಗ (ಕ್ರಿ.ಶ.ಸು.೧೦೦೦)
|
೨ನೇ ರಾಜ (ಕ್ರಿ.ಶ.ಸು.೧೦೨೫)
|
-------------------------------------
| | |
ಅಮ್ಮಗಿ ಶಂಜವರ್ಮ(ಸಂಕಮ) ೧ನೇ ಬಿಜ್ಜಳ (ಕ್ರಿ.ಶ.೧೦೫೭)
|
ಕೃಷ್ಣ (೨ನೇ ಕನ್ನಮ) ( ಕ್ರಿ.ಶ.೧೦೬೭)
|
ಜೋಗ (ಕ್ರಿ.ಶ.೧೦೮೦-೧೧೧೮)
|
ಪೆರ್ಮಾಡಿ (ಕ್ರಿ.ಶ.೧೧೧೮-೧೧೩೦)
|
-------------------------------------
| | |
೨ನೇ ಬಿಜ್ಜಳ(ಕ್ರಿ.ಶ.೧೧೩೦-೬೭) ೩ನೇ ರಾಜ ಮೈಲುಗಿ(ಕ್ರಿ.ಶ.೧೧೬೭)
|
-------------------------------------------------------------------------
| | | | | |
ವಜ್ರದೇವ
ರಾಯಮುರಾರಿ ಸೋವಿದೇವ (ಕ್ರಿ.ಶ.೧೧೬೭-೭೬)
ಮಲ್ಲಿಕಾರ್ಜುನ (ಮೈಳುಗಿ) (ಕ್ರಿ.ಶ.೧೧೭೫-೭೬)
೨ನೇಸಂಕಮ (ಕ್ರಿ.ಶ.೧೧೭೫-೮೦)
ಆಹವಮಲ್ಲ (ಕ್ರಿ.ಶ೧೧೮೦-೮೩)
ಸಿಂಘಣ (ಕ್ರಿ.ಶ೧೧೮೩-೮೪)

**೪.೧.೯. ಸೆವುಣರು**

ಸುಮಾರು ಕ್ರಿ.ಶ.೧೨ನೇ ಶತಮಾನದ ಕೊನೆಯವೇಳೆಗೆ ದೇವಗಿರಿಯ ಸೇವುಣರು ಕರ್ನಾಟಕದಲ್ಲಿ ಪ್ರವರ್ಧಮಾನರಾದರು. ಇವರು ಮೊದಲಿಗೆ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದುದು ಕಂಡುಬರುತ್ತದೆ. ಇವರ ಉಚ್ಛ್ರಾಯ ಕಾಲದಲ್ಲಿ ಕರ್ನಾಟಕದ ಬಹಳಷ್ಟು ಪ್ರದೇಶಗಳನ್ನು ಆಳುತ್ತಿದ್ದರು. ಇವರು ಈ ಭಾಗದಲ್ಲಿ ಆಳ್ವಿಕೆ ಮಾಡಿರುವ ಕುರುಹಾಗಿ ಲಕ್ಕುಂಡಿ, ಲಕ್ಷ್ಮೇಶ್ವರ, ಡೋಣಿ, ಗದಗ, ನಾಗಾವಿ, ಮುಳಗುಂದ, ಬೆಂತೂರು, ಹರ್ತಿ, ನಿಡಗುಂದಿ, ಸೂಡಿ, ಕಳಕಪ್ಪನಗುಡ್ಡ ಗ್ರಾಮಗಳಲ್ಲಿ ಶಾಸನಗಳು ದೊರೆಯುತ್ತವೆ.

ಕಲ್ಯಾಣ ಚಾಲುಕ್ಯರ ಮಾಂಡಲೀಕನಾಗಿದ್ದ ೫ನೇ ಭಿಲ್ಲಮನು ದೇವಗಿರಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ಕ್ರಿ.ಶ.೧೧೭೩ರಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು.

ಕ್ರಿ.ಶ.೧೧೯೦ರಲ್ಲಿ ಈತನು ಹೊಯ್ಸಳರೊಡನೆ ಹೋರಾಟ ಮಾಡಿರುವುದು ತಿಳಿದುಬರುತ್ತದೆ. ಭಿಲ್ಲಮನು ಸೋತು ಬಲ್ಲಾಳನ ಕೈಸೆರೆಯಾದನು. ಕ್ರಿ.ಶ.೧೨೧೩ರ ಗದಗ ಶಾಸನವು ಈತನು ಎರೂರಿನಲ್ಲಿ ಬೀಡುಬಿಟ್ಟಾಗ ತ್ರಿಕುಟೇಶ್ವರ ದೇವರಿಗೆ ಬೆಳ್ವಲ-೩೦೦ರಲ್ಲಿಯ ಹಿರೇಹಂದಿಗೋಳ ಗ್ರಾಮವನ್ನು ದಾನವಾಗಿ ಬಿಟ್ಟ ಉಲ್ಲೇಖ ಸಿಗುತ್ತದೆ.[೩೭] ಇವನ ನಂತರ ದೊರೆಯಾದ ಜೈತುಗಿಯ ಯಾವುದೇ ಶಾಸನಗಳು ಈ ಭಾಗದಲ್ಲಿ ದೊರೆಯುವುದಿಲ್ಲ. ಈ ವೇಳೆಗಾಗಲೇ ಈ ಭಾಗ ಹೊಯ್ಸಳರ ದೊರೆ ಎರಡನೇ ಬಲ್ಲಾಳನು ಭಿಲ್ಲಮನನ್ನು ಸೋಲಿಸಿ ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿದ್ದಾನೆ. ನಂತರ ಇವನ ಮಗ ಜೈತುಗಿಯು ಕ್ರಿ.ಶ.೧೧೯೩ರಲ್ಲಿ ಪಟ್ಟವೇರಿದನು. ಇವನು ದುರ್ಬಲ ದೊರೆಯಾಗಿದ್ದರಿಂದ ಇವನ ಮರಣಾನಂತರ ಕ್ರಿ.ಶ.೧೨೦೦ರಲ್ಲಿ ಸಿಂಘಣನು ಅಧಿಕಾರಕ್ಕೆ ಬಂದನು. ಇವನು ಸೆವುಣ ರಾಜರಲ್ಲಿಯೇ ಅತ್ಯಂತ ಪ್ರಸಿದ್ಧನಾದ ದೊರೆಯಾಗಿದ್ದಾನೆ. ಇವನ ಕಾಲದಲ್ಲಿ ಯಾದವ ಸಾಮ್ರಾಜ್ಯ ವಿಸ್ತಾರವಾಯಿತು, ಇವನ ಕಾಲದ ಶಾಸನಗಳು ಈ ಭಾಗದಲ್ಲಿ ಗದಗ, ಲಕ್ಕುಂಡಿ, ನಾಗಾವಿ, ಮುಳಗುಂದ, ಬೆಂತೂರು, ಹರ್ತಿ, ಲಕ್ಷ್ಮೇಶ್ವರ, ಡೋಣಿ, ಸೂಡಿ, ನಿಡಗುಂದಿ, ಕಳಕಪ್ಪನಗುಡ್ಡ ಇಲ್ಲಿ ದೊರೆಯುತ್ತವೆ, ಗದಗ ಶಾಸನದಲ್ಲಿ ಜನಮೇಜಯನ ಸರ್ಪಯಾಗದ ಬಗ್ಗೆ ಉಲ್ಲೇಖಿಸಲಾಗಿದೆ.[೩೮] ಸಿಂಘಣನ ಶಾಸನಗಳು ಈ ಭಾಗದಲ್ಲಿ ಬಹಳಷ್ಟು ದೊರೆಯುತ್ತವೆ. ಗದಗ, ಬೆಂತೂರು, ಲಕ್ಷ್ಮೇಶ್ವರ, ನಾಗಾವಿ, ಲಕ್ಕುಂಡಿ, ಮುಳುಗುಂದ, ಹರ್ತಿ ಮುಂತಾದ ಕಡೆಗಳಲ್ಲಿ ದೊರೆಯುತ್ತವೆ. ಈತನು ತಮ್ಮ ವಂಶಜರಿಂದ ಕೈತಪ್ಪಿ ಹೋದ ಈ ಪ್ರದೇಶವನ್ನು ಪುನಃ ತಾನು ಪಡೆದುಕೊಂಡಿರಬಹುದು. ಇದರಿಂದಾಗಿ ತುಂಗಾಭದ್ರಾನದಿ ಹೊಯ್ಸಳ ಮತ್ತು ಯಾದವರ ಸೆವುಣ ರಾಜ್ಯದ ಗಡಿಯಾಗಿರುವುದು ತಿಳಿಯುತ್ತದೆ. ಈತನು ಪರಾಕ್ರಮಿಯಾದಂತೆ ದಕ್ಷ ಆಡಳಿತಗಾರನಾಗಿದ್ದನು. ಇವನಿಗೆ ಬೆಳಗುತ್ತಿಸಿಂಧರು, ಹಾನಗಲ್ಲು ಕದಂಬರು ಮಾಂಡಲೀಕರಾಗಿದ್ದರು. ಕ್ರಿ.ಶ.೧೨೧೩ರಿಂದ ೧೨೪೭ರ ವರೆಗೆ ಈತನ ಶಾಸನಗಳು ಈ ಭಾಗದಲ್ಲಿ ದೊರೆತಿರುವದರಿಂದ ಈತನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿರುವುದು ಖಚಿತವಾಗುತ್ತದೆ. ಅಲ್ಲದೆ ಈತನನ್ನು ಶಾಸನಗಳಲ್ಲಿ "ಹೊಯ್ಸಳರಾಯ ಸಮುಚ್ಚಾಟನಚುಟುಳ" ಎಂದು ಕರೆದಿರುವುದು ಇಲ್ಲಿ ಸ್ತುತ್ಯಾರ್ಹ. ಅಲ್ಲದೆ ಶಾಸನಗಳಲ್ಲಿ ಇವರ ವಂಶಾವಳಿಯನ್ನು ನಿರೂಪಿಸಲಾಗಿದೆ. ಸಿಂಘಣನ ನಂತರ ಬಂದ ಕನ್ನರನ ಬಗ್ಗೆ ಕ್ರಿ.ಶ.೧೨೫೫ರ ನಾಗಾವಿ ಶಾಸನ[೩೯] ಮತ್ತು ಕ್ರಿ.ಶ.೧೨೫೯ರ ಲಕ್ಷ್ಮೇಶ್ವರದ ಶಾಸನಗಳು ಹೇಳುತ್ತವೆಯಾದರೂ.[೪೦] ಹೆಚ್ಚಿನ ವಿಷಯಗಳಿಲ್ಲ. ನಂತರ ರಾಮಚಂದ್ರ ದೊರೆಯ ಶಾಸನಗಳು ಈ ಭಾಗದಲ್ಲಿ ಲಕ್ಷ್ಮೇಶ್ವರ, ಡಂಬಳ, ಅಸುಂಡಿಯಲ್ಲಿ ದೊರೆಯುತ್ತವೆಯಾದರೂ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ನಂತರ ಸೆವುಣರು, ಕಾಕತೀಯರು, ಹೊಯ್ಸಳರು ಹಾಗೂ ಮುಸ್ಲಿಂ ದೊರೆಗಳ ಜಗಳದಿಂದ, ಉತ್ತರದ ಮುಸ್ಲಿಂ ದಾಳಿಕಾರರಿಂದ ಈ ಅರಸು ಮನೆತನಗಳು ಅವನತಿಯ ದಾರಿ ಹಿಡಿದವು.



**ಸೇವುಣರ ವಂಶಾವಳಿ**

ಸೇವುಣ ಚಂದ್ರ
|
೧ನೇ ಧಾಡಿಯಪ್ಪ
|
೧ನೇ ಬಿಲ್ಲಮ
|
ರಾಜುಗಿ
|
ವಾಡುಗಿ(೧ನೇ ವಡ್ಡಿಗ)।
|
೨ನೇ ಭಿಲ್ಲಮ
|
ವೇಸುಗಿ
|
೩ನೇ ಭಿಲ್ಲಮ
|
೨ನೇ ವಾಡುಗಿ
|
ವೇಸುಗಿ(೪ನೇ ಭಿಲ್ಲಮ)
|
೨ನೇ ಸೇವುಣಚಂದ್ರ
|
ಐರಮದೇವ
|
೧ನೇ ಸಿಂಘಣ(ಸೇವುಣದೇವ)
|
ಮಲ್ಲುಗಿ
|
ಅಮರಗಾಂಗೇಯ
|
ಗೋವಿಂದರಾಜು
|
ಅಮರಮಲ್ಲುಗಿ
|
ಕರ್ಣ
|
ಕಾಲಿಯ ಬಲ್ಲಾಳ
|
೫ನೇ ಬಿಲ್ಲಮ ಕ್ರಿ.ಶ.೧೧೮೫–೯೧
|
ಜೈತುಗಿ ಕ್ರಿ.ಶ.೧೧೯೧–೧೨೧೦
|
ಸಿಂಘಣ ಕ್ರಿ.ಶ.೧೨೧೦–೧೨೪೭
|
ಜೈತುಗಿ

ಕೃಷ್ಣ ಕ್ರಿ.ಶ.೧೨೪೬–೧೨೬೦
|
ರಾಮಚಂದ್ರ ಕ್ರಿ.ಶ.೧೨೭೧–೧೩೧೧

ಮಹಾದೇವ ಕ್ರಿ.ಶ.೧೨೬೦–೧೨೭೦
|
ಅಮ್ಮಣ ಕ್ರಿ.ಶ.೧೨೭೦–೧೨೭೧

| ಶಂಕರದೇವ | ಬಲ್ಲಾಳ ಕ್ರಿ.ಶ.೧೩೧೧-೧೩೧೨ | ಬಿಂಬ |
| --- | --- | --- |

### ೪.೧.೧೦. ಹೊಯ್ಸಳರು

ಹೊಯ್ಸಳರು ಮೂಲತಃ ಚಿಕ್ಕಮಗಳೂರು ಜಿಲ್ಲೆಯ ಮೂಡಗೆರೆ ತಾಲೂಕಿನ (ಸೊಸೆಯೂರು) ಈಗಿನ ಅಂಗಡಿ ಗ್ರಾಮದವರು. ಇವರ ಮೂಲ ಪುರುಷ ಸಳ. ಇವನ ಬಗ್ಗೆ ಒಂದು ಐತಿಹ್ಯವಿದೆ. ಒಮ್ಮೆ ಆ ಊರಿನಲ್ಲಿ ಸುದತ್ತಮುನಿಗಳು ತನ್ನ ಶಿಷ್ಯರಿಗೆ ವಾಸಂತಿಕ ದೇವಾಲಯದಲ್ಲಿ ಪಾಠ ಬೋಧನೆ ಮಾಡುತ್ತಿದ್ದಾಗ ಹುಲಿಯೊಂದು ಆ ಪ್ರದೇಶಕ್ಕೆ ನುಗ್ಗಿಬರಲು ಆಗ ಸುದತ್ತಮುನಿಗಳು ಸಳನಿಗೆ ಪೊಯ್‌ಸಳ ಎಂದು ಅಜ್ಞಾಪಿಸಲು, ಆತನು ಆ ಹುಲಿಯನ್ನು ಕೊಂದನೆಂದು, ಅದರಿಂದ ಇವರಿಗೆ ಪೊಯ್ಸಳ ಎಂಬ ಹೆಸರಾಯಿತೆಂದು, ಬಸರಾಳು ಶಾಸನವು ತಿಳಿಸುತ್ತದೆ. ಇದೇ ಮುಂದೆ ಹೊಯ್ಸಳ ಆಯಿತೆಂದು ವಿದ್ವಾಂಸರ ಅಭಿಪ್ರಾಯ. ಆದರೆ ಇವನ ಬಗ್ಗೆ ಯಾವುದೇ ದಾಖಲೆಗಳು ಲಭ್ಯವಿರುವುದಿಲ್ಲ. ಇವನ ನಂತರ ನೃಪಕಾಮ, ಇವನ ಮಗ ವಿನಯಾದಿತ್ಯ ಅಳ್ವಿಕೆ ಮಾಡಿರುವುದಾಗಿ ತಿಳಿಯುತ್ತದೆ. ಇವನು ಸೊಸೆಯೂರಿನಿಂದ ರಾಜಧಾನಿಯನ್ನು ದ್ವಾರಸಮುದ್ರ (ಈಗಿನ ಹಳೇಬೀಡು)ಕ್ಕೆ ಸ್ಥಳಾಂತರಿಸಿದನು. ಇವನ ಮಗ ಎರೆಯಂಗ ಚಾಲುಕ್ಯರ ಬಲಗೈಯಿದ್ದಂತೆ ಎಂದು ಶಾಸನಗಳು ಹೊಗಳಿವೆ. ಆದರೆ ಇವರ ಆಳ್ವಿಕೆ ತುಂಗಭದ್ರ ನದಿಯನ್ನು ದಾಟಿರಲಿಲ್ಲ. ಇವನ ನಂತರ ಅವನ ಹಿರಿಯ ಮಗನಾದ ೧ನೇ ಬಲ್ಲಾಳನು ಕ್ರಿ.ಶ.೧೧೦೨ರಲ್ಲಿ ಪಟ್ಟವೇರಿದನು. ಇವನು ಪುತ್ರ ಸಂತಾನವಿಲ್ಲದೆ ಮರಣ ಹೊಂದಲಾಗಿ, ಇವನ ತಮ್ಮನಾದ ಬಿಟ್ಟಿದೇವನು ಕ್ರಿ.ಶ.೧೧೦೮ರಲ್ಲಿ ಅಧಿಕಾರಾರೂಢನಾದನು. ಇವನ ಆಳ್ವಿಕೆಯು ಸುಮಾರು ೩೪ ವರ್ಷಗಳ ಕಾಲ ನಡೆಯಿತು. ಅಲ್ಲದೆ ನಾಡು ಸಾಂಸ್ಕೃತಿಕವಾಗಿ, ವಾಸ್ತುಶಿಲ್ಪಕಲೆ, ಸಾಹಿತ್ಯಕವಾಗಿ ಬೆಳೆಯಿತು. ಶಿಲ್ಪಕಲೆಯಲ್ಲಿ ಜಗದ್ವಿಖ್ಯಾತಿ ಪಡೆಯುವಂತಾಯಿತು. ಇವನು ಮೊದಲಿಗೆ ಜೈನನಾಗಿದ್ದು ಮುಂದೆ ಇವನ ಮಗಳ ಭೂತಚೇಷ್ಟೆಯನ್ನು ಕರ್ನಾಟಕಕ್ಕೆ ಬಂದ ರಾಮಾನುಜಾಚಾರ್ಯರು ನಿವಾರಿಸಿದ್ದರಿಂದ ಮುಂದೆ ವೈಷ್ಣವಧರ್ಮವನ್ನು ಅವಲಂಬಿಸಿದನೆಂದು ಐತಿಹ್ಯವಿದೆಯಾದರೂ ಇವನು ಎಂದಿಗೂ ಯಾವುದೇ ಧರ್ಮವನ್ನು ಕಡೆಗಣಿಸಲಿಲ್ಲ. ಇವನ ಪಟ್ಟಮಹಿಷಿಯಾದ ಶಾಂತಲೆಯು ತಾನು ಸಾಯುವವರೆಗೂ ಜೈನಳಾಗಿದ್ದುದೆ ಇದಕ್ಕೆ ಸಾಕ್ಷಿ. ಇವನು ಆಡಳಿತ ಸೂತ್ರವನ್ನು ಹಿಡಿದು ವಿಜಯಯಾತ್ರೆಯನ್ನು ಕೈಗೊಂಡು ತಲಕಾಡು, ಕಂಚಿಗಳನ್ನು ಗೆದ್ದುದಾಗಿ ಆತನ ಶಾಸನಗಳು ತಿಳಿಸುತ್ತವೆ. ಮುಂದುವರೆದು ಕ್ರಿ.ಶ.೧೧೩೦ರಲ್ಲಿ ಬಂಕಾಪುರ, ಬನವಾಸಿ, ಹಾನಗಲ್ಲನ್ನು ವಶಪಡಿಸಿಕೊಂಡನು. ಈ ವಿಜಯದ ನೆನಪಿಗಾಗಿ ತಲಕಾಡಿನಲ್ಲಿ ಕೀರ್ತಿನಾರಾಯಣ, ಬೇಲೂರಿನಲ್ಲಿ ಚನ್ನಕೇಶವ, ಮೇಲುಕೋಟೆಯಲ್ಲಿ ಚಲುವನಾರಾಯಣ, ಗದಗಿನ

ವೀರನಾರಾಯಣ, ಬಂಕಾಪುರದಲ್ಲಿ ನಾರಾಯಣ ದೇವಾಲಯಗಳನ್ನು ಕಟ್ಟಿಸಿದನು. ಇವನು ಕ್ರಿ.ಶ.೧೧೪೨ರಲ್ಲಿ ಬಂಕಾಪುರದಲ್ಲಿ ಸಾವನ್ನಪ್ಪಿದನು. ಪುಲಗೆರಿ-೩೦೦ ಇವನ ಆಳ್ವಿಕೆಗೆ ಒಳಪಟ್ಟಿತ್ತು. ಆದರೂ ಈ ಭಾಗದಲ್ಲಿ ಇವನ ಯಾವುದೇ ಶಾಸನಗಳು ದೊರೆಯುವುದಿಲ್ಲ. ಇವನ ತರುವಾಯ ಇವನ ಮಗ ೮ ವರ್ಷದ ೧ನೇ ನರಸಿಂಹನು ಪಟ್ಟಕ್ಕೆ ಬಂದನಾದರೂ ಇವನು ಅಪ್ರಾಪ್ತನಾಗಿದ್ದ. ಪ್ರಾಪ್ತ ವಯಸ್ಸಿಗೆ ಬಂದಾಗ ಅತಿಸುಖಭೋಗಿಯಾಗಿದ್ದ. ಆ ವೇಳೆಗಾಗಲೆ ಇವರಲ್ಲಿ ಗರುಢಪದ್ಧತಿ ಬೆಳೆದಿದ್ದುದರಿಂದ ಅವರ ನೆರವಿನಿಂದ ರಾಜ್ಯಭಾರ ಮಾಡಿದನು. ಇವನು ತನ್ನ ೪೦ನೇ ವಯಸ್ಸಿನಲ್ಲಿ ಮರಣಹೊಂದಿದನು. ಇವನ ನಂತರ ೨ನೇ ವೀರಬಲ್ಲಾಳನು ಕ್ರಿ.ಶ.೧೧೭೩ರಲ್ಲಿ ಅಧಿಕಾರಕ್ಕೆ ಬಂದನು. ಇವನು ತನ್ನ ಅಜ್ಜನಂತೆ ಮಹಾತ್ವಕಾಂಕ್ಷಿಯಾಗಿದ್ದನು. ಪುಲಿಗೇರಿ-೩೦೦, ಬೆಳ್ವೊಲ-೩೦೦ ಮತ್ತು ಮಾಸವಾಡಿ-೧೪೦ ಪ್ರದೇಶವು ಇವನ ಅಧಿಪತ್ಯಕ್ಕೆ ಒಳಗಾಗಿರುವುದು ಕೆಲವು ಶಾಸನಗಳಿಂದ ದೊರೆಯುತ್ತವೆ. ಎರಡನೇ ವೀರಬಲ್ಲಾಳನ ನೇರ ಆಳ್ವಿಕೆಗೆ ಈ ಪ್ರದೇಶ ಸೇರಿದ್ದು, ಲಕ್ಕುಂಡಿಯು ಇವನ ಎರಡನೇ ರಾಜಧಾನಿಯಾಗಿರುವುದು ತಿಳಿದುಬರುತ್ತದೆ. ಕ್ರಿ.ಶ.೧೧೯೨ ರಿಂದ ೧೨೧೨ರವರೆಗೆ ದೊರೆಯುವ ಶಾಸನಗಳೆಲ್ಲವೂ ಎರಡನೇ ಬಲ್ಲಾಳನ ಹೆಸರಿನಲ್ಲಿ ಸಿಗುತ್ತವೆ. ಇವನು ಸೊರಟೂರು ಹತ್ತಿರ ಕ್ರಿ.ಶ.೧೧೯೨ರಲ್ಲಿ ನಡೆದ ಕದನದಲ್ಲಿ ಯಾದವ ದೊರೆ ಭಿಲ್ಲಮನನ್ನು ಸೋಲಿಸಿ, ಈ ಪ್ರದೇಶದ ಆಡಳಿತದ ಸೂತ್ರವನ್ನು ಹಿಡಿದಿದ್ದಾನೆ. ಇವನ ಕಾಲದ ಶಾಸನಗಳು ಮೇವುಂಡಿ, ಹೊಸೂರು, ನಾಗಾವಿ, ಗದಗ, ಬೆಂತೂರು, ಮುಳಗುಂದ, ಲಕ್ಕುಂಡಿ, ನರೇಗಲ್ಲ, ಬಳಗಾನೂರು, ಗ್ರಾಮಗಳಲ್ಲಿ ದೊರೆಯುತ್ತವೆ. ಹೊಸೂರಿನಲ್ಲಿಯ ಶಾಸನವು ಅಲ್ಲಿ ಬೀಡುಬಿಟ್ಟಾಗ ಆ ಊರಿಗೆ ಆದ ಹಾನಿಯನ್ನು ತುಂಬಿಕೊಡಲು ಎಲೆಅಡಕೆ ಮೇಲಿನ ಸುಂಕವನ್ನು ಮನ್ನಾಮಾಡಿದ ಬಗ್ಗೆ ತಿಳಿಸುತ್ತದೆ.[೪೧] ಮೇವುಂಡಿಯ ಶಾಸನವು ನಬರರು ಮತ್ತು ಮುಮ್ಮರಿದಂಡಗಳು ದೇಹುತಗೆರೆಯ ಬಿಲ್ಲೇಶ್ವರ ದೇವರಿಗೆ ನೀಡಿದ ದಾನವನ್ನು ತಿಳಿಸುತ್ತದೆ.[೪೨] ಗದಗಿನ ಶಾಸನವು ಬಲ್ಲಾಳನು ತ್ರಿಕೂಟೇಶ್ವರ ದೇವಾಲಯಕ್ಕೆ ದಾನಬಿಟ್ಟ ವಿಚಾರವನ್ನು ತಿಳಿಸುತ್ತದೆ.[೪೩] ಲಕ್ಕುಂಡಿಯು ಇವನ ಎರಡನೇ ರಾಜಧಾನಿಯಾಗಿತ್ತು. ಇವನು ಕ್ರಿ.ಶ.೧೨೨೦ರಲ್ಲಿ ಮರಣ ಹೊಂದಿದನು. ನಂತರ ಇವನ ಮಗ ೨ನೇನರಸಿಂಹ. ವೀರನರಸಿಂಹ ಮತ್ತು ೩ನೇ ನರಸಿಂಹ ಕ್ರಿ.ಶ.೧೨೨೦ರಿಂದ ೧೨೯೨ರವರೆಗೆ ಕ್ರಮವಾಗಿ ಆಳಿದರಾದರೂ ಸಹ ನರಸಿಂಹದೇವನ ಒಂದು ಶಾಸನ ಮಾತ್ರ ದೊರೆಯುತ್ತದೆ. ನಂತರದ ಕಾಲದಲ್ಲಿ ಯಾದವ ದೊರೆ ಸಿಂಘಣನು ಈ ಪ್ರದೇಶವನ್ನು ವಶಪಡಿಸಿಕೊಂಡಿದ್ದಾನೆ. ಹೆಚ್ಚುಕಾಲ ಈ ಪ್ರದೇಶವನ್ನು ಹೊಯ್ಸಳರು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಲಾಗಲಿಲ್ಲ ಎಂದು ಹೇಳಬಹುದು. ೩ನೇ ನರಸಿಂಹನ ನಂತರ ೩ನೇ ವೀರಬಲ್ಲಾಳನು ರಾಜ್ಯವನ್ನು ಒಂದುಗೂಡಿಸಲು ಪ್ರಯತ್ನಿಸಿದನಾದರೂ ಸೆವುಣರ ವಿರೋಧವನ್ನು ಎದುರಿಸಬೇಕಾಯಿತು. ಅಲ್ಲದೆ ಕ್ರಿ.ಶ.೧೩೧೦ಮತ್ತು ೧೩೧೮ ರಲ್ಲಿ ಅಲ್ಲಾವುದ್ದಿನ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನು

ದಾಳಿಮಾಡಿದನು. ನಂತರ ಕ್ರಿ.ಶ.೧೩೪೨ರಲ್ಲಿ ಮಹಮ್ಮದ್ ಬಿನ್ ತೊಘಲಕ್‌ನು ಮೋಸದಿಂದ ಸೆರೆಹಿಡಿದು ಕೊಲ್ಲಿಸಿದನು. ಇದರಿಂದ ಹೊಯ್ಸಳ ಸಾಮ್ರಾಜ್ಯ ನಾಶವಾಯಿತು.

**ಹೊಯ್ಸಳ ವಂಶಾವಳಿ**




**೪.೧.೧೧. ವಿಜಯನಗರಅರಸರು**

ದಕ್ಷಿಣ ಭಾರತದ ಮೇಲೆ ಮುಸ್ಲಿಮರ ದಾಳಿ ಅಧಿಕವಾಗಿ ದಕ್ಷಿಣ ಭಾರತದ ರಾಜ್ಯಗಳೆಲ್ಲವು (ದೇವಗಿರಿಯ ಸೇವುಣರು, ವಾರಂಗಲ್ಲಿನ ಕಾಕತಿಯರು, ಹೊಯ್ಸಳರು, ಮಧುರೆಯ ಪಾಂಡ್ಯರು,) ದಕ್ಷಿಣ ಭಾರತದ ರಾಜಮನೆತನಗಳೆಲ್ಲವೂ ಚೇತರಿಕೆಯನ್ನು ಕಾಣಲು ಸಾಧ್ಯವಾಗದಷ್ಟು ಅವನತಿಯ ದಾರಿಹಿಡಿದಿದ್ದವು. ಅದರಲ್ಲಿ ಹೊಯ್ಸಳ ಸಾಮ್ರಾಜ್ಯ ಪತನವಾದ ನಂತರ ಹಿಂದೂಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸಲು ಕ್ರಿ.ಶ.೧೩೩೬ರಲ್ಲಿ ವಿದ್ಯಾರಣ್ಯರ ಆಶೀರ್ವಾದದಿಂದ ಹರಿಹರ ಬುಕ್ಕರು

ವಿಜಯನಗರ ಸಾಮ್ರಾಜ್ಯವನ್ನು ತುಂಗಭದ್ರಾದಂಡೆಯ ಮೇಲೆ ಸ್ಥಾಪನೆಮಾಡಿದರು. ಈ ಸಾಮ್ರಾಜ್ಯವನ್ನು ನಾಲ್ಕುಮನೆತನಗಳು ಆಳಿದವು.

೧) ಸಂಗಮವಂಶ-ಕ್ರಿ.ಶ.೧೩೩೬-೧೪೮೫

೨) ಸಾಳ್ವವಂಶ-ಕ್ರಿ.ಶ.೧೪೮೫-೧೫೦೫

೩) ತುಳುವಂಶ-ಕ್ರಿ.ಶ.೧೫೦೫-೧೫೬೫

೪) ಅರವೀಡುವಂಶ-ಕ್ರಿ.ಶ.೧೫೭೦-೧೬೪೬

ಅದಕ್ಕೆ ಸಾಕ್ಷಿಯಾಗಿ ಕಣವಿ, ಗದಗ, ಸೊರಟೂರು, ಲಕ್ಷ್ಮೇಶ್ವರಗಳಲ್ಲಿ ಎರಡನೇ ಹರಿಹರ, ಒಂದನೇ ದೇವರಾಯ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯರ ಕಾಲದ ಶಾಸನಗಳು ನಮಗೆ ಕ್ರಮವಾಗಿ ದೊರೆಯುತ್ತವೆ. ಗದಗ ತಾಲೂಕಿನ ಕಣವಿಯಲ್ಲಿ ದೊರೆಯುವ ಎರಡನೇ ದೇವರಾಯನ ಕಾಲದ ಕ್ರಿ.ಶ.೧೪೦೭ರ ಶಾಸನವು ಒಂದು ಮಹಾಸತಿಕಲ್ಲಾಗಿದ್ದು, ಇದು "ಸ್ವಸ್ತಿ ಶ್ರೀ ಸಕವರುಶ ೧೩೨೯ನೆಯ ಸರ್ವ್ವಜಿತು ಸಂವತ್ಸರದ ಸ್ರವಣ ಬಹ ಆ ಶ್ರೀ ವೀರಹರಿಹರಮಹಾರಾಯರ ಕಿಲಾರಿ ಸಾಯಿನಾಯ್ಕನ ಮಗ [ದೇವೆ]ನಾಯಕ ಅವನ ಮದುವಳಿಗೆ ನಾಗಾಯಿ ದೇಮಾಯಿಗಳು ಮಹಾಸತಿಯರಾಗಿ ಆತನ ಸಂಘಾತ ಸ್ವರ್ಗ್ಗಸ್ಥರಾದರು ಬೀರಗಲ್ಲಿಗೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಅಂದು ನಾಗಾಯಿ ದೇಮಾಯಿಗಳು ಮಹಾಸತಿಯರಾದ ವಿಷಯವನ್ನು ತಿಳಿಸುತ್ತದೆ.[೪೪]

ಕ್ರಿ.ಶ.೧೪೧೨ರ ಒಂದನೇ ದೇವರಾಯನ ಕಾಲದ ಶಾಸನವು ಲಕ್ಷ್ಮೇಶ್ವರದಲ್ಲಿದ್ದು, ಇದು ಜೈನ ಮತ್ತು ಶೈವರಿಗೆ ನಡೆದ ಜಗಳವನ್ನು ಬಗೆಹರಿಸಿದ ಬಗ್ಗೆ ತಿಳಿಸುತ್ತದೆ. "ಸ್ವಸ್ತಿ ಶ್ರೀವಿಜಯಾಭ್ಯುದಯ ಶಕವರ್ಷ ೧೩೩೪ನೇ ನಂದನ ಸಂವತ್ಸರದ ಮಾರ್ಗ್ಗಸಿರ ಶು[೨] ಆ ಶ್ರೀಮದ್ರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ಹರಿಹರಮಹಾರಾಯರ ಕುಮಾರರು ದೇವರಾಯ ಮಹಾರಾಯರು ಪೃಥ್ವೀರಾಜ್ಯಂಗೈವಲ್ಲಿ ತತ್ಪಾದಪದ್ಮೋಪಜೀವಿ ಶ್ರೀಮನ್ಮಾಹಾಪ್ರಧಾನ ನಾಗಂಣ ದಂ[ಣಾ]ಯ್ಕರಿಗೆ ಹುಲಿಗೆಱೆಯ ಶಂಕ(ರ) ಬಸ್ತಿಯ ಹೇಮದೇವಾಚಾರ್ಯ್ಯ[ರ್ಗಂ] ಆ ಹುಲಿಗೆಱೆಯ[ಸೋಮ್ಯ]ದೇವರ ಸ್ಥಾನದಾಚಾರ್ಯ್ಯರು ಶಿವರಾಮೈಯ್ಯಗಳಿಗೆಯು ಆ ಊರ ತಂಮ ತಂಮ ದೇವಸ್ಥಾನಂಗಳ ಭೂಮಿಯ ವಿವಾದವಾದಲ್ಲಿ ಆ ಯೆರಡು ಸ್ಥಾನದಾಚಾರ್ಯ್ಯರು ನಾಂಗಣದಂಣಾಯ್ಕರಿಗೆ ಬಿಂನಾಹಂ ಮ[ಡಲಾಗಿ] ಪುರೋಹಿತ ಸಂಗಮದೇವಗಳು ಅರಮನೆಯ ವಿದ್ವಾಂನುಗಳು ಕೂಡಿಕೊಂಡು ಯಿತ್ತಂಡದ ಶಾಸನವನು ವೋದಿಸಿ ನಡಿ ತಿದ್ದಿ ಕೊಡ. . .. . ರಾಜಾಧ್ಯಕ್ಷ. . . . ಕಳಿ[ಹಿದಲ್ಲಿ ಹೇ]ಮದೇವವಾಚಾರ್ಯ್ಯರಿಗೆ ನಿರ್ನೇಸಿ ಕೊಟ್ಟ ಜಯಪತ್ರದ ಕ್ರಮವಂತೆಂದೊಡೆ ನೀಉ ಯಿತ್ತಂಡ ವಿದ್ವಾನುಗಳು ಹೇಳಿದ ಹಾಗೆ ಕೇಳುವೆಉ ಯೆಂದು ದಂಣಾಯ್ಕರ ಹೆಸರ ಆಣೆ ವೋಲೆಗಳ[ನು] ಕೊಟ್ಟಲ್ಲಿ ತಿದ್ದಿದ ಪ್ರಕಾರ ಆ ಹೇಮದೇವಾಚಾರ್ಯ್ಯರ ಕೈಯಲ್ಲಿ ಯಿದ್ದ ಶಾಸನಂಗಳನು ವೋದಿ

ನೋಡಲಾಗಿ ಆ ಭೂಮಿಯ ವನಯವನು ಪಟದಲ್ಲಿ ಬಂದು ನೋಡಿ ಆ ಹೇಮದೇವಾಚಾರ್ಯ್ಯರ ಕೈಯಲಿ ಯಿದ್ದ ಶಾಸ[ನ*]ಸ್ತಿತಿಯನು ಕಂಡು ಆ ಸಿವರಾಮೈಯಗಳ ಆಂಣ ಗಂಗಂಣಯ್ಯಗಳ ಕೈಯಲಿದ್ದ ಶಾಸನಂಗಳನು ವೋದಿ ನೋಡಲಾಗಿ ಆ ಹುಲಿಗೆಱೆ ಯೀಶಾಂನ್ಯದ ಮುಂನೆಯ ಒಲನೊಳಗೆ ನಾಲ್ವತ್ತು ಮತ್ತರದ ಭೂಮಿಯ ಚತ್ಸೀಮೆಯನು ಬರದು ನೋಡಲಾಗಿ ತೆಂಕಲು [ಬೆಳ್ಳ]ನೂ[ರ] ಮೂಡ[ದ] ಪಡುವಲು ಶಂಕ[ರ] ಬಸ್ತಿಯ ಶಾಸನಸ್ಥವಹ ಯೇಕ ನಿವರ್ತ್ತನಾಂತರವಹ. . ಯುಗಲಪ್ರಮಾಣಿನ ವಳೆಯವೆ ಆವಧಿಯಾಗಿ ಯಿನಿತು ಬಡಗ ಮೂಡಲು ಶಂಖ[ರ]ಬಸ್ತಿಯ ಸೀಮೆಯ ನಾಲ್ವಾತು ಮತರ ಭೂಮಿಯ ಚತುಸ್ಸೀಮೆಯ ವಳಿಯ. ಶಂಕ[ರ]ಬಸ್ತಿಯ ಭೂಮಿಯ ವಳೆಯನು. . . . ಯಹ ಕಂಡದಿಲ್ಲ ಆ ವಿಷಯವಾ[ಗಿಸಂ]ವಾಜವ ಮಾಡಸಲ್ಲದು. . . .ಱು ಸಾವಿರ ಮೂಡನಲದೊಳು [ಆ] ಹದಿನಲ್ಕು ಮತರ ಭುಮಿ ಶಂಖ[ರ]ಬಸ್ತಿಯ [ಶಾಸನ] ಪ್ರಮಾಣಿನ ಭುಮಿಯ ಬಡಗ . . . . .ಕಂಡದಿಲ್ಲ. . . . . ಮಾಡಸಲ್ಲದು ಆ ಹೇಮದೇವಾಚಾರ್ಯ್ಯರುಗಳ. . . . ಡಗಿ ಸಂವಾಜವ ಮಾಡಿತಯುದಾರೆಂದು ಕೇಳಾಲಾಗಿ ಕುದನೂರು ಗಿರಿಯಂಣಗಳು ಬೊ[ಮ್ಮೈ]ಯನ ಶವಪ್ಪ ದೇಹರದ ಸೋವಪ್ಪ . . . ಆರ್ಗ್ಗದ ಮೂಱು ಕಯ್ಯನು ಅವರು ವ್ಯವಸಾಯವ ಮಾಡಿವೆಂದರೆ ನಾಉ ಮಾ. . .ಸದ ಆಣೆಯಿಡುತ ಬಹೆಉ ಆಣೆ ಮೀಱೆ ಬಲಮೆಯಿಣದ ಸಿವರಾಮೈಯ್ಯಗಳವರು ಮಾಡುತ್ತ ಬಹರು ನಾಉ ನಂಮ ಕೈಗೆ [ಸಿಕ್ಕಿದ] ಅಷ್ಟನು ಕೊಂಬೆಉ ಕಾಲಕಾಲದ ಬೆಳೆಯನು ನಂಮ ಕೈಗೆ ಸಿಕ್ಕಿದಷ್ಟನು ಕೊಂಬೆಉ ಯೀಸ್ಥಿತಿಯನು ಹುಲಿಗೆಱೆಯ ನಾಗಗೌಡ ಸಮಸ್ತ ನಾಗಿಸೆಟ್ಟಿ ಮುಂಡದ ಕಾಇಸೆಟ್ಟಿ ಗಡ್ಡದ ಕೇತಿಸೆಟ್ಟಿಯ . . . .ಸೆಟ್ಟಿ [ಮುಂ]ತಾದ ಗೌಡು ಪ್ರಜೆಗಳು ನಾಉ ಆಣೆಯಿಡುವದ[ನು] ಸಿವರಾಮ. . . . . ಬೆಳೆಯ ಕೊಂಬ . . . . ಹುಲಿಗೆಱೆಯ . . . ಡ.[೬೫] ಮುಂತಾದ ವಿಚಾರಗಳನ್ನು ತಿಳಿಸುತ್ತ ವಿವಾದವನ್ನು ಬಗೆಹರಿಸಿದ ಬಗ್ಗೆ ತಿಳಿಸುತ್ತದೆ. ಕೃಷ್ಣದೇವರಾಯ ಮತ್ತು ಅಚ್ಯುತರಾಯರು ಅರವಟ್ಟಿಗೆಗಾಗಿ ಮತ್ತು ಆನಂದನಿಧಿಯೆಂಬ ದಾನವನ್ನು ಭೂಸುರರಿಗೆ ಕೊಟ್ಟು ತೃಪ್ತಿಪಡಿಸಿದ ಬಗ್ಗೆ ತಿಳಿಸುವ ಶಾಸನಗಳಿವೆ. ಶುಭಮಸ್ತು ನಮಸ್ತುಂಗಶಿರರ[ಶು]ಞ್ಚುಂಬಿಚಂದ್ರಚಾಮರ[ಚಾ]ರವೇ ತ್ರೈಲೋಕ್ಯನಗರಾ[ರ]ಂಭ ಮೂಲಸ್ತಂಭಾಯ ಶಂಭವೇ॥ ಸ್ವಸ್ತಿ ಶ್ರಿಜಯಾಭ್ಯುದಯ ಶಾಲಿವಾಹನ ಶಕವರುಷ ೧೪೪೨ನೆಯ ಪ್ರಮಾದಿಸಂವಛರದ ಜೇಷ್ಟ ಶುದ್ಧ ೧೫ಲು ಶ್ರಿಮನ್ಮಾಹಾರಾಜಾಧಿರಾಜ ಪರಮೇಶ್ವರ, ಶ್ರೀವೀರಪ್ರತಾಪ ಶ್ರೀಕೃಷ್ಣರಾಯಮಹಾರಾಯರು ಪ್ರುಥ್ವೀರಾಜ್ಯಗೆಯಿಉತ್ತಿರಲು" ಬಾಗಿಲ ನಾಗಿನಾಯ್ಕನ ಮಗ ನಯನಪ್ಪ ನಾಯಕರು ಪರುವತ್ತೊಡೆಯರಿಗೆ ತಿಮ್ಮಪ್ಪನಾಯಕಯ್ಯನವರು ಉಂಬಳಿಯಾಗಿ ಗದುಗಿನ ಸೀಮೆಯೊಳಗಿನ ಬಟ್ಟಕೆಱೆಯ ಗ್ರಾಮದ ಬೆನಕನಕೊಪ್ಪದ ನಡುವೆ ತ್ರಿಯಂಬಕದೇವರಿಗೆ ಹಾಗೂ ವೀರನಾರಾಯಣದೇವರಿಗೆ, ಗದುಗಿನ ತೇರಬೀದಿಯ ವೊಳಗಣ ಕೋಟೆಯ ಮುಂದೆ ಒಂದು

ಅರವಂಟಿಗೆಗಳನ್ನು ನಿರ್ಮಿಸಿ, ಅವುಗಳಿಗೆ ನೀರನ್ನು ಹಾಕಿಕೊಂಡು ಸೇವೆಯನ್ನು ಪರುವತ್ತೊಡೆಯರಿಗೆ ದಾನವಾಗಿ ನೀಡಲಾಗಿದೆ. ಅದಕ್ಕಾಗಿ ಹತ್ತುಕೊಳಗ ಹೊಲವನ್ನು ನೀಡಲಾಗಿದೆ. ಬಟ್ಟಕೆರೆಯಿಂದ ಪೂರ್ವ, ನಾಗಸಮುದ್ರದ ಉತ್ತರ, ಲಕ್ಷ್ಮೀನಾರಾಯಣಪುರಕ್ಕೆ ಹೋಗುವ ಕಾಲುದಾರಿಯ ದಕ್ಷಿಣ ಈ ಭಾಗದ ನಡುವೆ ಹೊಲವನ್ನು ವಿರೂಪಾಕ್ಷನ ಸನ್ನಿಧಿಯಲ್ಲಿ ದಾನ ನೀಡಲಾಗಿದೆ.[೪೬] ಇನ್ನು ಅಚ್ಯುತ್ತರಾಯರ ಕಾಲದ ಕ್ರಿ.ಶ.೧೫೩೯ರ ಶಾಸನವು ಸ್ವಸ್ತಿ ಸಮಸ್ತಭುವನಾಶ್ರಯ, ಪ್ರುಥ್ವೀವಲ್ಲಭ, ಮಹಾರಾಜಾಧಿರಾಜ, ರಾಜಪರಮೇಶ್ವರ, ಶ್ರೀವೀರಪ್ರತಾಪ, ಶ್ರೀ ಅಚ್ಯುತರಾಯಮಹಾರಾಯರೂ ವಿಜಯನಗರಿಯ ನೆಲೆವೀಡಿನೊಳು ಸುಖಸಂಕಥಾವಿನೋದದಿಂರಾಜ್ಯಗೆಯ್ಯುತ್ತಮಿರ್ದ್ದು ಶಕವರ್ಷ೧೪೬೧ನೆಯ ವಿಕಾರಿಸಂವತ್ಸರದ ಭಾದ್ರಪದ ಶುಧ ಶ್ರವಣ ೧೨ ಮಂಗಳವಾರ ಪುಣ್ಯಕಾಲದೊಳು ಭಾಸ್ಕರಕ್ಷೇತ್ರ ತುಂಗಭದ್ರಾತೀರದ ವಿಠ. . .ಸಂನಿದಿಯಲ್ಲಿ ಮಾಧವ ಪ್ರೀತ್ಯರ್ಥವಾಗಿ ಆನಂದನಿಧಿಯೆಂಬ . . ಕೊಟ್ಟು ಸಮಸ್ತ ಭೂಸುರರನು ಸಂತೋಷ ಪಡಿಸಿದ" ಎಂದು ತಿಳಿಸುತ್ತದೆ. ಸದಾಶಿವರಾಯನ ಕ್ರಿ.ಶ.೧೫೪೭ನೆಯ ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಶ್ರೀ ಸದಾಶಿವರಾಯರು ಹುಲಿಗೆಜಿಯ ನಾಡ ಮದುವೆಯ ಸುಂಕ ಪಾ. . ಬಿಟ್ಟರು ಅಳುಪಿದವನ ವಂಶ ಕ್ಷಯ ಸುಡುಗಾಡ ಲಿಂಗಸೆಟ್ಟಿ ಬರೆಸಿದ"[೪೭] ಎಂದು ಮದುವೆ ಸುಂಕ ಬಿಟ್ಟ ಸುದ್ದಿ ತಿಳಿಸುತ್ತದೆ. ಮತ್ತೊಂದು ಶಾಸನ ಶ್ರೀ ಮನ್ಮಹಾಮಂಡಲೇಶ್ವರ ರದೇಶಿನಾಯಕರು, ರಾಮರಾಜಯ್ಯನವರು ತಿಮೋಜಗೆ ಪಾಲಿಸಿದರೆಂದು ಸರ್ವಮಾಂನ್ಯ ಸೊರಟೂರ ತಿಮೋಜಗೆ"[೪೮] ಎಂದು ನಾವಿಲರಿಗೆ ಬಿಟ್ಟ ದಾನದ ಬಗ್ಗೆ ತಿಳಿಸುವ ಶಾಸನಗಳು ದೊರೆಯುವದರಿಂದ, ಈ ಭಾಗವು ವಿಜಯನಗರ ಅರಸರ ಕಾಲದಲ್ಲಿ ಅವರ ಆಳ್ವಿಕೆಗೆ ಒಳಪಟ್ಟಿರುವುದು ಸ್ಪಷ್ಟವಾಗುತ್ತದೆ.

## ವಿಜಯನಗರ ವಂಶಾವಳಿ

### ೧ನೇ ಸಂಗಮ ವಂಶ




### ಸಾಳ್ವ ವಂಶ

ಗುಂಡ

೧ನೇನರಸಿಂಹ (ಕ್ರಿ.ಶ.೧೪೮೫–೧೪೯೧)

ತಿಮ್ಮ

೨ನೇ ನರಸಿಂಹ (ಕ್ರಿ.ಶ.೧೪೯೧–೧೫೦೫)

### ತುಳುವ ವಂಶ

ನರಸನಾಯಕ



## ಅರವಿಡು ವಂಶ

ತಿರುಮಲರಾಯ(ಕ್ರಿ.ಶ.೧೫೬೫-೧೫೭೨)

ಶ್ರೀರಂಗರಾಯ(ಕ್ರಿ.ಶ.೧೫೭೨-೧೫೮೨) ವೆಂಕಟಪತಿ(ಕ್ರಿ.ಶ.೧೫೮೬- )

೨ನೇ ಶ್ರೀರಂಗರಾಯ

ರಾಮದೇವರಾಯ(ಕ್ರಿ.ಶ.೧೬೧೬-೧೬೩೦)

೩ನೇ ವೆಂಕಟರಾಯ (ಕ್ರಿ.ಶ.೧೬೩೦-೧೬೪೨)

೩ನೇ ಶ್ರೀರಂಗರಾಯ (ಕ್ರಿ.ಶ.೧೬೪೨-೧೬೭೮)

### ೪.೨. ಸಾಮಂತರು

ಗದಗ ಜಿಲ್ಲೆಯನ್ನು ಪ್ರಾಚೀನ ಕಾಲದಲ್ಲಿ ಪ್ರಮುಖವಾಗಿ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಮಾಸವಾಡಿ-೧೪೦, ಬೆಳ್ವೊಲ-೩೦೦, ಪುಲಗೇರಿ-೩೦೦. ಈ ಭಾಗಗಳನ್ನು ರಾಷ್ಟ್ರಕೂಟರಿಂದ ಹಿಡಿದು ವಿಜಯನಗರದ ಅರಸರ ಆಳ್ವಿಕೆಯ ಕಾಲದವರೆಗೂ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಗದಗ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ವ್ಯಾಪಾರ, ವಾಣಿಜ್ಯ ಕ್ಷೇತ್ರಗಳಂತೆ ಆಡಳಿತ ಕ್ಷೇತ್ರದಲ್ಲಿಯೂ ಐತಿಹಾಸಿಕ ಮಹತ್ವ ಪಡೆದಿತ್ತು. ಕಲ್ಯಾಣ ಚಾಲುಕ್ಯರ ಆಡಳಿತಾವಧಿಯಲ್ಲಿ ಆಡಳಿತದ ಅನುಕೂಲಕ್ಕಾಗಿ ತಮ್ಮ ಸಾಮ್ರಾಜ್ಯವನ್ನು ಅನೇಕ ವಿಭಾಗ, ಉಪವಿಭಾಗಗಳನ್ನಾಗಿ ವಿಂಗಡಿಸಿರುವುದು ಕಂಡುಬರುತ್ತದೆ. ಪ್ರಾಂತ, ಮಂಡಲ, ಕಂಪಣ, ದೇಶ, ವಿಷಯ, ನಾಡು ಎಂದು ಮುಂತಾಗಿ ವಿಂಗಡಿಸಿದ ಅಂಶಗಳು ಶಾಸನಗಳಲ್ಲಿ ಉಕ್ತವಾಗಿವೆ.

### ೪.೨.೧.ಮಾಸವಾಡಿ ಸಾಮಂತರು

ಗದಗ ಜಿಲ್ಲೆಯ ದಕ್ಷಿಣಭಾಗಕ್ಕೆ ಇರುವ ಮುಂಡರಗಿ ತಾಲೂಕಿನ ಬಹುತೇಕ ಎಲ್ಲಾ ಹಳ್ಳಿಗಳು ಮಾಸವಾಡಿ-೧೪೦ರಲ್ಲಿ ಸೇರಿರುವುದು ತಿಳಿಯುತ್ತದೆ. ಮಾಸವಾಡಿ ನೂರನಲವತ್ತು ಹಳ್ಳಿಗಳ ನಾಡಾಗಿರುವುದನ್ನು ಆಲೂರು ಶಾಸನ ಮತ್ತು ಹಿರೇವಡ್ಡಟ್ಟಿ ಶಾಸನಗಳು ಸ್ಪಷ್ಟವಾಗಿ ಹೇಳುತ್ತವೆ. ಶಾಸನಗಳಲ್ಲಿ "ಮಾಸವಾಡಿನೂರನಾಲ್ವತ್ತರ" "ಮಾಸವಾಡಿನೂರನಾಲ್ವತ್ತುಮಂ" "ಮಾಸೆಯವಾಡಿನೂರನಾಲ್ವತ್ತುಮಂ" "ಮಾಸವಾಡಿನೂರನಲವತ್ತು" "ಮಾಸವಾಡಿನೂರನಾಲ್ವತ್ತರ", ಮಾಸವಾಡಿ ನಾಡು, ಮಾಸವಾಡಿ ಎಂಬ ಹೆಸರಿನಿಂದ ಕರೆಯುವ ಹಲವು ರೂಪಗಳು

ಕಾಣಿಸಿಕೊಳ್ಳುತ್ತವೆ. ಆದರೆ ಈ ಮಾಸವಾಡಿನಾಡು ಯಾವಾಗ ಒಂದು ಆಡಳಿತ ವಿಭಾಗವಾಗಿ ರೂಪುಗೊಂಡಿತು ಎಂದು ಹೇಳುವುದು ಸ್ವಲ್ಪ ಕಷ್ಟಸಾಧ್ಯ.

ಮಾಸವಾಡಿ ನಾಡಿನಲ್ಲಿ ದೊರೆಯುವ ಪ್ರಾಚೀನ ಶಾಸನವೆಂದರೆ ರಾಷ್ಟ್ರಕೂಟರ ದೊರೆ ಅಮೋಘವರ್ಷನ ಕ್ರಿ.ಶ.೮೬೫ರ ಶಾಸನ.[೪೯] ಇದರಲ್ಲಿ ಮಾಸವಾಡಿ ನಾಡಿನ ಯಾವುದೇ ಉಲ್ಲೇಖ ದೊರೆಯುವುದಿಲ್ಲ. ಅಲ್ಲದೆ ಇದು ಒಂದು ವೀರಗಲ್ಲು ಆಗಿರುವುದರಿಂದ ವಿಷಯಕ್ಕೆ ಮಾತ್ರ ಪ್ರಾಧಾನ್ಯತೆ ಕೊಟ್ಟಿರಲೂಬಹುದು. ನಂತರ ಆಳ್ವಿಕೆ ಮಾಡಿದ ಎರಡನೇ ಕೃಷ್ಣನ ಕಾಲದಲ್ಲಿ ಕ್ರಿ.ಶ.೮೯೭ರ ಮೇವುಂಡಿ ಶಾಸನದಲ್ಲಿ[೫೦] ಮಾಸವಾಡಿಯ ಉಲ್ಲೇಖ ಬರುತ್ತದೆ. ಇದರಿಂದ ಅಮೋಘವರ್ಷನ ಕಾಲಕ್ಕೆ ಮಾಸವಾಡಿ–೧೪೦ ಕರ್ನಾಟಕದ ತುಂಗಭದ್ರಾ ನದಿಯ ಉತ್ತರ ಭಾಗದ ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಗ್ರಾಮಗಳನ್ನು ವ್ಯಾಪಿಸಿತ್ತು. ಅಂದಿನ ಆಡಳಿತ ವಿಭಾಗಗಳ ಹಿನ್ನೆಲೆಯಲ್ಲಿ ಈ ನಾಡಿನ ಮೇರೆಗಳನ್ನು ಗುರುತಿಸುವುದು ಸುಲಭಸಾಧ್ಯ. ಕವಿರಾಜಮಾರ್ಗಕಾರನು ತಿರುಳ್ಗನ್ನಡ ನಾಡಿನ ಪ್ರದೇಶದ ವ್ಯಾಪ್ತಿಯನ್ನು ಅಂದಿನ ಪ್ರಸಿದ್ಧ ನಗರಗಳ ಹಿನ್ನಲೆಯಲ್ಲಿ ಹೇಳುತ್ತಾನೆ.

ಅದರೊಳಗಂ ಕಿಸುವೊಳಲಾ
ವಿದಿತ ಮಾಹಾಕೊಪಣ ನಗರದಾ ಪುಲಿಗೆರೆಯಾ।
ಸದಾಭಿಸ್ತುತ ಮಪ್ಪಂಕುಂ।
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥

ಶ್ರೀವಿಜಯನ ಹಿನ್ನಲೆಯಲ್ಲಿ ನೋಡಿದರೆ, ಈ ಪ್ರದೇಶವನ್ನು ಪ್ರಸಿದ್ದ ನಾಲ್ಕು ನಗರಗಳು ಕಿಸುವೊಳಲು (ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲು), ಕೊಪಣನಗರ(ಕೊಪ್ಪಳ), ಪುಲಿಗೆರೆ(ಲಕ್ಷ್ಮೇಶ್ವರ) ಮತ್ತು ಒಕ್ಕುಂದ(ಬೆಳಗಾವಿ ಜಿಲ್ಲೆಯ ಒಕ್ಕುಂದ). ಇವುಗಳ ಮಧ್ಯದ ಪ್ರದೇಶವು ತಿರುಳ್ಗನ್ನಡನಾಡು ಎಂಬುದಾಗಿ ತಿಳಿಸುತ್ತಾನೆ. ಇವನ ಪ್ರಕಾರ ಕೊಪಣನಗರ ಮತ್ತು ಪುಲಗೆರೆಗಳ ನಡುವಿನ ಆಡಳಿತ ವಿಭಾಗಗಳೆಂದರೆ, ಮಾಸವಾಡಿ–೧೪೦, ಒಕ್ಕುಂದ, ಕಿಸುವೊಳಲ ಮಧ್ಯದ ಆಡಳಿತ ಪ್ರದೇಶ, ಬೆಳ್ವೊಲ–೩೦೦. ಒಟ್ಟಾರೆ ಈ ನಾಲ್ಕು ನಗರಗಳ ಮಧ್ಯದ ಪ್ರದೇಶಗಳು ಪುಲಿಗೇರಿ, ಮಾಸವಾಡಿ ಮತ್ತು ಬೆಳ್ವೊಲಗಳು.

ಮಾಸವಾಡಿ–೧೪೦ರ

ಪೂರ್ವಕ್ಕೆ – ಕೊಪಣನಗರ

ಪಶ್ಚಿಮಕ್ಕೆ – ಪುಲಿಗೆರೆ–೩೦೦

ಉತ್ತರಕ್ಕೆ – ಬೆಳ್ವೊಲ–೩೦೦ ಮತ್ತು ಕುಕನೂರು–೩೦

ದಕ್ಷಿಣಕ್ಕೆ – ಬನವಾಸಿ ಪನ್ನಿರ್ಚ್ಛಾಸಿರ ಆಡಳಿತ ವಿಭಾಗಗಳಿರುವುದು ಕಂಡುಬರುತ್ತದೆ.

ಈ ನಾಡಿಗೆ ಕೊಪ್ಪಳ ತಾಲೂಕಿನ ೧) ಸಿಂಧವಿಗಿ (ಸಿಂಧೋಗಿ), ೨)ನೆಲುವಿಗಿ (ನೆಲೋಗಿ), ೩)ತಿಗುರಿ (ತಿಗುರಿ), ೪)ನಿಡುಸವಗೆ (ನಿಡುಸೋಗಿ), ೪)ಗುಡ್ಡನಾಲೂರು (ಗುಡ್ಲಾನೂರು), ೫)ಕುಡಲಿಗಿ(ಕೂಡ್ಲಿಗಿ), ೬)ಗೊಣ್ಣಬಾಳು(ಗೊಂಡಬಾಳು), ೭)ಕಾತರಿಕೆ(ಕಾತರಿಕಿ), ೮)ಕೋಳೂರು, ೯)ಹುಗೆರೆ(ಹಲಗೇರಿ), ೧೦)ಕೆಸುನೆಲ, ೧೧)ಕವಲೂರು, ಮುಂಡರಗಿ ತಾಲೂಕಿನ ೧೨)ಆಲೂರು(ಪೇಠಾಆಲೂರು), ೧೩)ಸಿರಿವೂರ(ಜಂತ್ಲಿ ಶಿರೂರ), ೧೪)ಮೇಳುವೀಡು(ಮೇವುಂಡಿ), ೧೫) ಭರತಪುರ(ಬರದೂರು), ೧೬)ಹಾರುವಗೆರೆ(ಹಾರೊಗೇರೆ) ೧೭)ಮೆಂಡರೆ(ಮುಂಡರಗಿ) ೧೮)ಬಲವಾಡಿ(ಬ್ಯಾಲವಾಡಿಗಿ)೧೯)ಕಿಸುಕುಂಡಿ(ತಾಮ್ರಗುಂಡಿ),೨೦)ಸಿಂಗಟಾಲೂರು(ಸಿಂಗಟಾಲೂರು) ೨೧)ಕೊರಲವಳ್ಳಿ(ಕೋರ್ಲಳ್ಳಿ), ೨೨)ಹೆಸರೂರು, ೨೩)ಹೊನ್ನಬರದಾರು(ಬರದೂರು), ೨೪) ಧರ್ಮವೊಳಲ್(ಡಂಬಳ), ೨೫)ಮೇವುಂಡಿ, ೨೬)ಡೋಣಿ, ೨೭)ಕಕ್ಕೂರು, ೨೮)ಬಿದರಹಳ್ಳಿ, ೨೯)ಚಿಕ್ಕವಡ್ಡಟ್ಟಿ, ೩೦)ಬಿಡನಾಳ, ೩೧)ಬಾಗೇವಾಡಿ, ೩೨)ಹಿರೇವಡ್ಡಟ್ಟಿ, ೩೩)ಹಮ್ಮಿಗಿ, ೩೪)ವಿಠಾಲಾಪುರ, ಶಿರಹಟ್ಟಿ ತಾಲೂಕಿನ ೩೫)ಅರಹಟ(ಅರಗಿಲವಾಡ), ೩೬)ಕನಹಳ್ಳಿ, ೩೭)ಬೆಳವಿ,(ಬೆಳವಿಗಿ) ೩೮)ಬೆಳ್ಳಟ್ಟಿ, ೩೯)ಸಾಸಿರವಾಡ, ಯಲಬುರ್ಗತಾಲೂಕಿನ ೪೦) ಎಡೆಹಳ್ಳಿ(ಎಡಹಳ್ಳಿ), ಗಂಗಾವತಿ ತಾಲೂಕಿನ ೪೧)ಹೊನ್ನೆಯರಹಳ್ಳಿ ೪೨)ಆನೆಗುಂದಿಗಳು, ಸೇರಿದ್ದವು.[೫೧]

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿಯ ಶಾಸನದಲ್ಲಿ ಮಾಸವಾಡಿಯ ಉಲ್ಲೇಖ ಬರುತ್ತದೆ. ಆದರೆ ಆ ಪ್ರದೇಶ ಮಾಸವಾಡಿ-೧೪೦ರಲ್ಲಿ ಒಂದು ಗ್ರಾಮವನ್ನು ದಾನಬಿಟ್ಟ ವಿಷಯ ಬರುತ್ತದೆ. "ಮಾಸವಾಡಿ ನೂರನಲ್ವತ್ತರ ಬಳಿಯಪ್ಪ ಉಚ್ಚುಂಗೇರಿ"[೫೨] ಎಂದು ಬರುತ್ತದೆ. ಅಲ್ಲದೇ ರೋಣ ತಾಲೂಕಿನ ಸೂಡಿ ಶಾಸನದಲ್ಲಿ, ಚಾಲುಕ್ಯ ಅಕ್ಕದೇವಿ ಕಿಸುಕಾಡು ಎಪ್ಪತ್ತು, ತೊರಗೆಲೆ ಅರವತ್ತು, ಮಾಸವಾಡಿ ನೂರನಲ್ವತ್ತರಲ್ಲಿ ಆಡಳಿತ ಮಾಡುತ್ತಿದ್ದುದಾಗಿ, ಅಲ್ಲದೆ ಕೊರ್ಲಹಳ್ಳಿ ಶಾಸನವು ಅವಳ ಆಡಳಿತದ ಬಗ್ಗೆ ತಿಳಿಸುತ್ತದೆ. ಅಷ್ಟೇ ಅಲ್ಲದೆ ಯಲಬುರ್ಗ ತಾಲೂಕಿನ ಸಂಕನೂರು ಶಾಸನ ಮತ್ತು ಧಾರವಾಡ ಜಿಲ್ಲೆ ನವಲಗುಂದ ತಾಲೂಕಿನ ಅಣ್ಣಿಗೇರಿ ಶಾಸನದಲ್ಲಿ ಮಾಸವಾಡಿ ನಾಡಿನ ಉಲ್ಲೇಖ ದೊರೆಯುತ್ತದೆ.[೫೩]

ಈ ಮಾಸವಾಡಿ-೧೪೦ರ ರಾಜಧಾನಿ ಕೊಪ್ಪಳ ತಾಲೂಕಿನ ಹಿರೇಸಿಂಧೋಗಿಯೇ ಅಥವಾ ಡಂಬಳವು ಈ ನಾಡಿನ ರಾಜಧಾನಿಯಾಗಿತ್ತೆ? ಎಂಬುದು ಪ್ರಶ್ನೆಯಾಗಿ ಕಾಡುತ್ತದೆ. ಆದರೆ ಡಂಬಳ ಶಾಸನಗಳಲ್ಲಿ "ಮಾಸೆವಾಡಿ ನಾಡಿಗೆ ಕಟ್ಟಿದ ಪಟ್ಟಿಯವಿಟ್ಟ ಬೊಟ್ಟು ಮೆಳೆವಿಟ್ಟ ಕಳೆಶಮುಮಿರ್ಪ್ಪಂತೆ ಧರ್ಮವೊಳಲೆಂಬ ಮಹಾಪಟ್ಟಣಂ ವಿರಾಜಿಸುತ್ತಿರ್ಪ್ಪುದೆ"[೫೪] ಕರ್ನಾಟಕ ಭೂಮಿ ಭಾಮಿನಿ ಮಧ್ಯದೇಶಕ್ಕೆ ವಿಷದ ಮೌಕ್ತಿಕ ಹಾರದಂತಿರುವ ಧರ್ಮೊವೊಳಲು ಮಾಸವಾಡಿನಾಡೊಳೂ ಧರ್ಮಪುರ

ತಾವ ಸುಮತಿ ತೊಟ್ಟ ಹಾರದೊಲಿರುವುದು. ಎಂದು ಇಲ್ಲಿ ದೊರೆಯುವ ಹಲವಾರು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಈ ಮೆಳೆವಿಡುದಿಂದಲೇ ಈ ನಾಡಿಗೆ ಮಾಸವಾಡಿ ಎಂಬ ಹೆಸರು ಬಂದಿರಲೂಬಹುದು. ರಾಜಧಾನಿ ಮತ್ತು ಉಪರಾಜಧಾನಿಗಳನ್ನು ಹೊಂದಿದನಾಡು ಸುರಕ-೧೨, ಅವಗವಾಡಿ-೧೨ ಎಂಬ ಎರಡು ಉಪವಿಭಾಗಗಳನ್ನು ಹೊಂದಿತ್ತು. ಚಿಕ್ಕವಡ್ಡಟ್ಟಿ ಶಾಸನದಲ್ಲಿ[೫೫] ಕಕ್ಕರಸರಂ ಸುರಕ ಪನ್ನೆರಡುವಂ ಅವಗವಾಡಿ ಹನ್ನೆರಡು ಎಂದು ಹೇಳಿದೆ. ಈ ನಾಡಿನ ಡಂಬಳವು ಕಲೆ, ವಾಸ್ತುಶಿಲ್ಪ, ಸಾಹಿತ್ಯ, ವಾಣಿಜ್ಯ, ವ್ಯಾಪಾರ, ಸರ್ವಧರ್ಮಗಳ ನೆಲೆವೀಡಾಗಿತ್ತು. ಅಲ್ಲದೆ ಪ್ರಮುಖ ಪಟ್ಟಣವೂ ಆಗಿತ್ತು. ಡಂಬಳ ಶಾಸನದಲ್ಲಿ ಧರ್ಮೊವೊಳಲೆಂಬ ಮಹಾಪಟ್ಟಣಂ ಮಹಾನಗರವೆಂದು ಉಲ್ಲೇಖಿಸಲಾಗಿದೆ. ಅಲ್ಲದೆ ಈ ನಾಡನ್ನು "ಶ್ರೀಕುಂತಳದ ವಿಷಯದ ದಕ್ಷಿಣ ಗಂಗಾ ನದಿಯೋತ್ತರ ತೀರಂ ಬಿಡಿದೊಪ್ಪುತ್ತಿಪ್ಪ ಮಾಸವಾಡಿ ನಾಡದಂ" ಎಂದು

" ಶ್ರೀಮತ್ಕುಂತಳ ಭೂಮಿ ಕಾಮಿನಿಯ ವಸ್ತ್ರಾದರ್ಶಮಂ

ವೋತ್ತುಸದ್ದಾಮಂ ಶೋಭೆಗೆ ಮಾಸವಾಡಿಯಸುಗಂ ನಾಡದಂತದಂ. . . . ."

ಎಂದು ಬಣ್ಣಿಸಿದ್ದಾನೆ. ಈ ಪ್ರದೇಶ ಹಲವಾರು ಜನಸಾಮಂತರು, ದಂಡಾಧಿಕಾರಿಗಳು ಆಳಿರುವುದು ಶಾಸನಗಳಿಂದ ಉಲ್ಲೇಖಿತವಾಗಿದೆ.

**ಕುಪ್ಪೆಯರಸ**

ಮಾಸವಾಡಿ-೧೪೦ ಹಾಗೂ ಪುಲಿಗೇರಿ-೩೦೦ ನಾಡಿನ ಕೆಲಭಾಗಗಳಲ್ಲಿ ಸೇವುಣ ಎಂಬ ಉಪರಾಜಮನೆತನವು ರಾಷ್ಟ್ರಕೂಟ ಹಾಗೂ ಚಾಲುಕ್ಯರ ಆಡಳಿತದಲ್ಲಿ ಅವರಿಗೆ ಅಧೀನವಾಗಿ ರಾಜ್ಯಭಾರ ನಡೆಸುತ್ತಿತ್ತು. ಈ ಮನೆತನಕ್ಕೆ ಸಂಬಂಧಿಸಿದ ಶಾಸನಗಳು ಮೇವುಂಡಿಯ ಕ್ರಿ.ಶ ೮೬೭ರ ಶಾಸನ ಹಾಗೂ ಗದಗ ತಾಲೂಕಿನ ಸೊರಟೂರಿನ ಇದೇ ಕಾಲದ ಶಾಸನ ಸೇವುಣ ವಂಶದ ಮೂಲಪುರುಷ ಕುಪ್ಪೆಯರಸನ ಬಗ್ಗೆ ಉಲ್ಲೇಖಿಸುತ್ತದೆ. ಇವನಿಗೆ "ಯಾದವಂಶೋದ್ಭವರಣ, ರಣಮೂರ್ಖಧವಳ"[೫೬] ಎನ್ನುವ ಬಿರುದುಗಳಿದ್ದುದಾಗಿ ಶಾಸನವೊಂದು ತಿಳಿಸುತ್ತದೆ. ಕುಪ್ಪೆಯರಸನು ಕೋಗುಳಿ-೫೦೦ ಮಾಸವಾಡಿ-೧೪೦ ಪುಲಿಗೇರಿ-೩೦೦ ಈ ಭಾಗಗಳನ್ನು ಆಳುತ್ತಾ ಇರುವುದಾಗಿ, ಆ ಕಾಲದಲ್ಲಿ ಮೇವುಂಡಿ ಉಪರಾಜಧಾನಿಯಾಗಿಸದ್ದುದು ತಿಳಿದುಬರುತ್ತದೆ.

**ಪೆರ್ಮ್ಮಾನಡಿಗಳು**

ಒಂದನೇ ಜಗದೇಕಮಲ್ಲನ ಕಾಲದಲ್ಲಿ ಮಾಸವಾಡಿಯನ್ನು ಶ್ರೀಮಜ್ಜಗದೇಕಮಲ್ಲ ನಿರ್ಮಡಿನೊಳಂಬ ಪಲ್ಲವ ಪೆರ್ಮ್ಮಾನಾಡಿಗಳು ಆಳುತ್ತಿದ್ದುದು ಕ್ರಿ.ಶ ೧೦೪೭ರ ಶಿರೂರು ಶಾಸನದಿಂದ ತಿಳಿದುಬರುತ್ತದೆ. ಇವನನ್ನು ಶಾಸನಗಳಲ್ಲಿ "ಪಲ್ಲವಾಶ್ವಯ ಶ್ರೀಪೃಥ್ವೀವಲ್ಲಭ ಪಲ್ಲವ ಕುಳತಿಳಿಕ ಅನೇಕ ವಾಕ್ಯಂ ಕಾಂಚಿ ಪುರವರೇಶ್ವರ"[೫೭] ಎಂಬ ಬಿರುದುಗಳಿಂದ ಕರೆಯಲಾಗಿದೆ.

**ಮಾದಿಣಯ್ಯಂಗಳ್**

ಕ್ರಿ.ಶ.೧೦೪೮ರ ಶಿರೂರಿ ಶಾಸನದಿಂದ ಇವನು ಮಾಸವಾಡಿ ನಾಡನ್ನು ಆಳಿದಂತೆ ತಿಳಿದುಬರುತ್ತದೆ. ಇವನನ್ನು ಮಹಾಸಾಮನ್ತಾಧಿಪತಿ, ದಂಡನಾಯಕ ಎಂಬುದಾಗಿ ಹೇಳಿದ್ದಾರೆ. ಆದರೆ ಇವನ ಬಗ್ಗೆ ಹೆಚ್ಚು ವಿಷಯಗಳು ಲಭ್ಯವಿಲ್ಲ.[೫೮]

**ದಾಸರಸ**

ಶಿರೂರಿನ ಶಾಸನ ಇವನೂ ಸಹ ಈ ಭಾಗದಲ್ಲಿ ಆಡಳಿತಧಿಕಾರದಲ್ಲಿ ಇದ್ದಂತೆ ತಿಳಿದುಬರುತ್ತದೆ. ದಾಸರಸನನ್ನು ಮಹಾಸಾಮನ್ತಾದಿಪತಿ, ದಂಡನಾಯಕ ಎಂಬುದಾಗಿ ಕರೆಯಲಾಗಿದೆ.[೫೯]

**ಅಕ್ಕಾದೇವಿ**

ಕೊರ್ಲಹಳ್ಳಿ ಬಳಿ ತುಂಗಭದ್ರಾ ನದಿಗೆ ಹಾಕಿರುವ ಹಳೆಯ ಒಡ್ಡಿನಲ್ಲಿದ್ದ ಕಲ್ಲಿನ ಮೇಲಿರುವ ಕ್ರಿ.ಶ.೧೦೫೦ರ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಎರಡನೇ ಜಯಸಿಂಹನ ಸಹೋದರಿಯಾದ ಈಕೆ ಕಿಸುಕಾಡು-೭೦, ಬಾಗಡಿಗೆ-೭೦, ತೊರಗಲೆ ಮತ್ತು ಮಾಸವಾಡಿ-೧೪೦ನ್ನು ಪನ್ನಾವರೆಯಕೋಡೆಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ.[೬೦] ಶಾಸನದಲ್ಲಿ ಈಕೆಯನ್ನು "ಅರಿನ್ರಿಪಮುಕುಟ ಘಟ್ಟಿತ ಚಾರು ಚ್ಛಾರಣಾರವಿನ್ದೆ ಗಂಗಾಸ್ನಾನ ಪವಿತ್ರೆ ದೀನಾನಾಂತ ಚಿಂನ್ತಾಮಣಿ ಗುಣದ ಬೆಡಂಗಿಯರು" ಎಂಬ ಬಿರುದುಗಳಿಂದ ಕರೆಯಲಾಗಿದೆ.

**ಮಾಧವರಸರು**

ಕ್ರಿ.ಶ.೧೦೫೪ರ ಮುಂಡರಗಿ ತಾಲೂಕಿನ ಶಾಸನವು ಈತನನ್ನು "ದ್ವಾರವತೀ ಪುರವರೇಶ್ವರ ಯಾದವ ವಂಶೋದ್ಬವ ಯುವತಿ ಜನ ಚಿತ್ತೋದ್ಭವ ಸುವರ್ಣಗರುಡಧ್ವಜ ವಿಸದಕೀರ್ತಿಧ್ವಜ ರಣಮೂರ್ಖಪಾರ್ಥಂ ಪರಬಳಧೂರ್ತ್ತ ಕೃತಯುಗಚರಿತ ನಾಳ್ಗೆನಲ್ಲಾತ ಗೋತ್ರಪವಿತ್ರ ಯುದ್ಧಧುರನ್ದರ ವೀರಶಿಖಾಮಣಿ"[೬೧] ಮುಂತಾದ ಬಿರುದುಗಳಿಂದ ಕರೆಯಲಾಗಿದೆ. ಇವನು ಒಂದನೇ ಸೋಮೇಶ್ವರನ ಮಹಾಸಾಮನ್ತನಾಗಿದ್ದುದ್ದಾಗಿ ಈ ಭಾಗವನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ.

**ಲಕ್ಷ್ಮೀ ದೇವಿ**

ಲಕ್ಷ್ಮೀದೇವಿಯು ಆರನೇ ವಿಕ್ರಮಾದಿತ್ಯನ ಪಿರಿಯರಸಿಯಾಗಿದ್ದು, ಈಕೆ ಕ್ರಿ.ಶ.೧೦೮೦ರ ಡೋಣಿಯಶಾಸನ ಕ್ರಿ.ಶ.೧೧೯೬ರ ಡಂಬಳದ ಶಾಸನಗಳಲ್ಲಿ ಇಕೆಯು ಈ ಭಾಗದಲ್ಲಿ ರಾಜ್ಯಾಡಳಿತ ನಡೆಸುದುದಾಗಿ ತಿಳಿದುಬರುತ್ತದೆ.[೬೨] ಈಕೆ ೧೮ ಅಗ್ರಹಾರಗಳನ್ನು ಆಳುತ್ತಿದ್ದುದ್ದಾಗಿ ತಿಳಿದುಬರುತ್ತದೆ. ಈಕೆಯನ್ನು ಶಾಸನಗಳು "ಪರಮಶಿವಲಿಂಗಾಚರಣನಿರತೆ ಜಂಗಮಸ್ನೇಹಿ ಶಿವಭಕ್ತಿ ಸಮುಲ್ಲತೆ" ಎಂದು ಕರೆದಿರುವುದು ಈಕೆ ವೀರಶೈವ ಧರ್ಮಿಯಳೆನಿಸಿದಂತೆ ಕಂಡುಬರುತ್ತದೆ. ಧಾರ್ಮಿಕ ಮನೋಭಾವದವಳಾಗಿದ್ದ ಪಿರಿಯರಸಿ ಈಕೆಯು ಶಿವಭಕ್ತಿಯ ಒಂದು ಸನ್ನಿವೇಶ ವಿಶೇಷವಾಗಿ ಗಮನ

ಸೆಳೆಯುತ್ತದೆ. ಇದನ್ನು ಹರಿಹರನ ತೆಲುಗು ಜೊಮಯ್ಯನ ರಗಳೆಯಲ್ಲಿ ಹೀಗೆ ಹೇಳಲಾಗಿದೆ. ಪರಮ ಶಿವಲಿಂಗಾರ್ಚನಾನಿರತೆಯಾಗಿದ್ದ ಈಕೆ ಶಿವಪೂಜೆಗಾಗಿ ತೆಲುಗು ಜೊಮ್ಮಣ್ಣನಿಗೆ ನಿತ್ಯ ವಸ್ತ್ರ, ಧೂಪ, ಕಸ್ತೂರಿ, ಪುಷ್ಪ ಮುಂತಾದ ಸಾಮಾನುಗಳನ್ನು ಕಳಿಸುತ್ತಿದ್ದಳು. ಒಮ್ಮೆ ಜೊಮ್ಮಣ್ಣ ಅರಮನೆಗೆ ಬಂದಾಗ ಕಲ್ಯಾಣಚಾಲುಕ್ಯ ಅರಸ ವಿಕ್ರಮಾದಿತ್ಯ ವಿಷ್ಣು ಪ್ರತಿಮೆಯನ್ನು ಪೂಜಿಸುತ್ತಿದ್ದ ಬದಿಗೆ ಬ್ರಾಹ್ಮಣ ನಿಂತು ವೈಷ್ಣವ ಪುರಾಣವನ್ನು ಓದುತ್ತ ಶಿವನಿಂದನೆ ಮಾಡಿದ್ದನ್ನು ಕೇಳಿದನು. ತಕ್ಷಣವೇ ಕೋಪಿತನಾಗಿ ಅವನನ್ನು ಕೊಂದೇಬಿಟ್ಟ. ಆಗ ಅರಸ ಪೂಜಿಸುತ್ತಿದ್ದ ವಿಷ್ಣು ವಿಗ್ರಹದ ಕಣ್ಣಿನಿಂದ ನೀರು ಬರುವುದನ್ನು ನೋಡಿದ ತಕ್ಷಣ ರಾಜ ವಿಕ್ರಮಾದಿತ್ಯ ಜೊಮ್ಮಣ್ಣನನ್ನು ಅಲ್ಲಿಗೆ ಕರೆತರಲು ಹೇಳಿದ. ರಾಣಿ ಲಕುಮಿದೇವಿ ಇದನ್ನರಿತು ಆಸ್ಥಾನಕ್ಕೆ ಬಂದ ಜೊಮ್ಮಯ್ಯ ರಾಜನಿಗೆ ನಮಸ್ಕರಿಸದಿದ್ದರೆ ಅವನ ಸಿಟ್ಟಿಗೆ ಬಲಿಯಾಗುತ್ತಾನೆಂದು ಕಲ್ಪಿಸಿಕೊಂಡಳು. ತನ್ನ ಇಷ್ಟ ಲಿಂಗವನ್ನು ಸಿಂಗರಿಸಿಕೊಂಡು ರಾಜನಿಗೆ ತಿಳಿಯದಂತೆ ಅವನ ಹಿಂದೆ ಹಿಡಿದಳು. ಆಸ್ಥಾನದ ಒಳಗೆ ಪ್ರವೇಶಿಸಿದ ಜೊಮ್ಮಯ್ಯನಿಗೆ ರಾಜನ ಕಡೆ ನೋಡಿದಾಗ ಮೊದಲು ಕಾಣಿಸಿದ ಆ ಇಷ್ಟಲಿಂಗಕ್ಕೆ ಮೊದಲು ನಮಸ್ಕರಿಸಿದ. ಅದು ರಾಜನ ಹಿಂದಿರದೆ ಮಗ್ಗಲು ಸರಿಯಲೆಂದು ಲಿಂಗಕ್ಕೆ ಸೂಚಿಸಿದ. ಲಿಂಗವು ಮಗ್ಗಲಿಗೆ ಸರಿದದ್ದನ್ನು ರಾಜ ಗಮನಿಸಿ ಅಶ್ಚರ್ಯಪಟ್ಟ. ಆದರೂ ಪುರಾಣಭಟ್ಟನನ್ನು ಕೊಲೆ ಮಾಡಿದ ಕಾರಣ ಕೇಳಿದಾಗ ಆತನು ಶಿವನಿಂದೆ ಮಾಡಿ ಸುಳ್ಳು ಹೇಳಿದುದಕ್ಕೆ ಕೊಂದೆನೆಂದನು. ಆ ಹೆಣದ ಮುಸುಕನ್ನು ತೆಗೆದು ಅಲ್ಲಿದ್ದ ಹುಳದ ರಾಶಿ ತೋರಿಸಿದ. ಇಂಥಹ ಮಹಿಮೆ ಈತನಲ್ಲಿರುವುದನ್ನು ಕಂಡ ಅರಸನು ಈತನಿಗೆ ನಮಸ್ಕರಿಸಿದ. ಈತನನ್ನು ಕೂಡಿಸಿ ಪಾದಗಾಣಿಕೆ ನೀಡಿ ಕೊಂಡಾಡಿ ಕ್ಷಮೆ ಕೋರಿದನು ಎಂದು ತಿಳಿಸುತ್ತದೆ. ಆದ್ದರಿಂದ ಆರನೇ ವಿಕ್ರಮಾದಿತ್ಯನ ಕಾಲಕ್ಕಾಗಲೇ ವೀರಶೈವ ಧರ್ಮವು ಪ್ರಚಲಿತದಲ್ಲಿರುವುದಾಗಿ ತಿಳಿಯುತ್ತದೆ. ಇವಳು ತನ್ನ ಆಡಳಿತ ಅವಧಿಯಲ್ಲಿ ಜೈನ, ಬೌದ್ಧ ಧರ್ಮಗಳಿಗೂ ಅವಕಾಶ ಕೊಟ್ಟಿದುದಲ್ಲದೆ, ದಾನಧರ್ಮಗಳನ್ನು ನೀಡಿ, ಪರಧರ್ಮಸಹಿಷ್ಣುತೆ ಎಂದೆನಿಸಿಕೊಂಡಳು. ವಿಕ್ರಮನ ರಾಣೆಯರಲ್ಲಿ ಲಕ್ಷ್ಮೀದೇವಿ ಚಂದಲದೇವಿಯರಿಬ್ಬರೇ ಹೆಚ್ಚಾಗಿ ಸವತಿ ಮತ್ಸರದಿಂದ ಇದ್ದವರು. ಆದ್ದರಿಂದ ಈಕೆಯು "ಸವತಿಮದಭಂಜನಿ, ಸವತಿಗಂಧಹಸ್ತಿ, ಅಮಲಸವತಿಮದಖಂಡಿಸಿ" ಎಂಬುದಾಗಿ ಕರೆದುಕೊಂಡಿರುವುದು ವ್ಯಕ್ತವಾಗುತ್ತದೆ. ಕ್ರಿ.ಶ.೧೦೮೦ರ ಡೋಣಿ ಶಾಸನ ಈಕೆಯನ್ನು

ಯುವತೀ ಮುಖತಿಳಕಂ ಲೋ
ಳವಿಲೋಚನೆ ಸವತಿಗನ್ಧಹಸ್ತಿ ಮಹಾದಾ
ನವಿನೋದ ಯೆನಿಸಿ ನೆಗೆಟ್ದಳ್
ಭುವನದೊಳೆ ಪುರಾಣಲಕ್ಷ್ಮಿ ಲಕ್ಷ್ಮೀದೇವಿ॥

೪.೨.೨. ಬೆಳ್ವೊಲ–ಸಾಮಂತರು

ಬೆಳ್ವೊಲ–೩೦೦ ಗದಗ ತಾಲೂಕಿನ ಬಹಳಷ್ಟು ಗ್ರಾಮಗಳನ್ನು ಒಳಗೊಂಡಿತ್ತು. ಈ ನಾಡನ್ನು ಶಾಸನಗಳಲ್ಲಿ

ಇಳೆಯೆಂಬ, ಸತಿಯ ಕುನ್ತಳ
ಕಳಾಪದನ್ತೆಳೆದು ಕುನ್ತಳ ದೇಶ
ಕ್ಕಳವಟ್ಟ ಚಿನ್ನ ಪೊವೆನೆ
ಬೆಳಗಿದು ದೊಳ್ವಲವೆನಿಪ್ಪ ಬೆಳ್ವೊಲದೇಶಂ ॥

ಎಂಬುದಾಗಿ ವರ್ಣಿಸಲಾಗಿದೆ. ಇದು ಪ್ರಾಚೀನ ಕಾಲದಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿತ್ತು. ಬೆಳ್ವೊಲವು ಕುಂತಲ ಕಾಂತೆಯ ಮುಡಿಯಲ್ಲಿಯ ಚಿನ್ನದ ಹೂವು ಎಂದು ಕವಿ ವರ್ಣಿಸಿದ್ದಾನೆ. ಶಾಸನಗಳ ಅಧ್ಯಯನದಿಂದ ಇದರ ಮೇರೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

ಈ ಬೆಳ್ವೊಲದ ಉತ್ತರಕ್ಕೆ – ಬೆಳಗಲಿ–೫೦೦

ದಕ್ಷಿಣಕ್ಕೆ – ಮಾಸವಾಡಿ–೧೪೦ ಮತ್ತು ಪುಲಿಗೆರೆ–೩೦೦

ಪೂರ್ವಕ್ಕೆ – ಕರಡಿಕಲ್–೩೦೦

ಪಶ್ಚಿಮಕ್ಕೆ – ಹಲಸಿಗೆ–೧೨೦೦೦ ಮತ್ತು ಕೊಂಡಿ–೩೦೦ಗಳನ್ನು ಮೇರೆಯಾಗಿ ಇದು ಹೊಂದಿತ್ತು. ಇದರಲ್ಲಿ ದಕ್ಷಿಣ ಗದುಗಿನ ಕೆಲವು ಭಾಗಗಳು ಸೇರಿರುವುದನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಅವುಗಳೆಂದರೆ ಮುಳುಗುಂದ, ಹೊಸೂರು, ಕುರ್ತುಕೋಟಿ, ಕಣವಿ, ಹರ್ತಿ, ವೆಂಕಟಾಪುರ, ಎಲೆಶಿರೂರು, ಕಲ್ಲೂರು, ಎಳವತ್ತಿಗಳು ಸೇರುತ್ತವೆ. ಚಿಂಚಲ–೫೦ರಲ್ಲಿ ಚಿಂಚಿಲಿ, ಅಂತೂರು, ಬೆಂತೂರು, ಕುರ್ತುಕೋಟಿ, ಅಸುಂಡಿ, ಮಲ್ಲಸಮುದ್ರ ಮುಂತಾದ ಗ್ರಾಮಗಳು ಸೇರುತ್ತವೆ. ಬೆಳ್ವೊಲ–೩೦೦ ಮತ್ತು ಹೆಚ್ಚಾಗಿ ಎರಡೂ ಒಬ್ಬರ ಆಳ್ವಿಕೆಯಲ್ಲಿ ಒಳಪಟ್ಟಿರುವುದು ಉಂಟು. ಈ ಭಾಗದ ಬಗ್ಗೆ ಇಲ್ಲಿ ತಿಳಿಯಹೊದರೆ ಅನೇಕ ಸಾಮಂತರು ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ.

**ದೇವಣಯ್ಯ**

ಚಿಂಚಿಲಿಯ ಕ್ರಿ.ಶ.೮೭೧ ರ ಒಂದನೇ ಅಮೋಘವರ್ಷನ ಕಾಲದಲ್ಲಿ ಅವನ ಸಾಮಂತನಾಗಿ ದೇವಣ್ಣಯ್ಯ ಬೆಳ್ವೊಲ–೩೦೦ನ್ನು ಆಳಿದುದಾಗಿ ತಿಳಿದುಬರುತ್ತದೆ. ಈತನು ಚಿಂಚಿಲದ ಅಯವತ್ತಾಱು ಜನ ಕೂಡಿ ಮಾಡಿದ ಗೋದಾನದ ಬಗ್ಗೆ ತಿಳಿಸುತ್ತದೆ. ಹೆಚ್ಚಿನ ವಿಷಯಗಳು ಈ ಶಾಸನದಲ್ಲಿ ಲಭ್ಯವಿರುವುದಿಲ್ಲ.[೭೭]

**ವತ್ಸಯ್ಯ**

ಕ್ರಿ.ಶ.೯೦೪ರ ಇದೇ ಚಿಂಚಲಿಯ ಶಾಸನವು ವತ್ಸಯ್ಯ ಎಂಬುವನು ಬೆಳ್ವೊಲ-೩೦೦ನ್ನು ಆಳಿದುದಾಗಿ ತಿಳಿಸುತ್ತದೆ. ಮತ್ತೆ ಯಾವುದೇ ಶಾಸನಗಳು ಈತನ ಬಗ್ಗೆ ಲಭ್ಯವಿಲ್ಲದ ಕಾರಣ ಹೆಚ್ಚಿನ ವಿಷಯಗಳು ಇರುವುದಿಲ್ಲ.[೬೮]

**ಮಹಾಶ್ರೀಮನ್ತ**

ಕ್ರಿ.ಶ. ೯೦೧ರ ಎಲೆಶಿರೂರ ಶಾಸನದಲ್ಲಿ ಇವನು ಅಮೋಘವರ್ಷ ಮತ್ತು ಎರಡನೇ ಕೃಷ್ಣನ ಕಾಲದಲ್ಲಿ ಈ ಭಾಗವನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ.[೬೯]

**ಕಲಿವಿಟ್ಟರಸರು**

ಕಲಿವಿಟ್ಟರಸನ ಬಗ್ಗೆ ಶಿರುಂಜದ ಒಂದು ವೀರಗಲ್ಲಿನಲ್ಲಿ ಉಲ್ಲೇಖವಿದೆ. ಈತನು ಎರಡನೇ ಅಮೋಘವರ್ಷನ ಕಾಲದಲ್ಲಿ ಈ ಪ್ರದೇಶವನ್ನು ಆಳುತ್ತಿದ್ದುದ್ದಾಗಿ ತಿಳಿಸುತ್ತದೆ.[೭೦]

**ನನ್ನಿಯ ಗಂಗಂ ಭೂತಯ್ಯಂ**

ಕ್ರಿ.ಶ.೯೪೬ರ ಕುರ್ತುಕೋಟಿಯ ಶಾಸನವು ಈತನ ಮಾಹಿತಿಯನ್ನು ನೀಡುತ್ತದೆ. ಇವನು ಗಂಗ ದೊರೆ ಎರಡನೇ ಭೂತುಗನಾಗಿದ್ದು, ಈತನು ಪುಲಗೆರೆ-೩೦೦, ಬೆಳ್ವೊಲ-೩೦೦ನ್ನು ಆಳುತ್ತಿದ್ದನು. ಇವನು ಮೂರನೇ ಕೃಷ್ಣನ ಬಾವನಾಗಿದ್ದು, ಇವರಿಬ್ಬರೂ ಸೇರಿ ಉತ್ತರ ಭಾರತದ ಕೆಲವು ಕೋಟೆಗಳನ್ನು ವಶಪಡಿಸಿಕೊಂಡಿದ್ದಾಗಿ ಶಾಸನಗಳಲ್ಲಿ ಉಕ್ತವಾಗಿದೆ.[೭೧]

**ಮಾರಸಿಂಹ**

ಈತನು ಸಹ ಗಂಗದೊರೆಯಾಗಿದ್ದು, ಈ ಪ್ರದೇಶ ಇವನ ಅಧೀನದಲ್ಲಿತ್ತು. ಈತನು ರಾಷ್ಟ್ರಕೂಟರ ಸಾಮಂತ ದೊರೆಯಾಗಿದ್ದನಲ್ಲದೆ ರಾಷ್ಟ್ರಕೂಟ ದೊರೆಗಳ ಬಲಗೈಯಾಗಿದ್ದನು. ರಾಷ್ಟ್ರಕೂಟರ ಬಹಳಷ್ಟು ಯುದ್ಧಗಳು ಈತನ ನೆರವಿನಿಂದ ನಡೆದಿರುವುದು ತಿಳಿದುಬರುತ್ತದೆ. ಈತನು ರಾಷ್ಟ್ರಕೂಟದೊರೆ ಎರಡನೇ ಕರ್ಕನಿಗೆ ಹತ್ತಿರದವನಾಗಿದ್ದನು. ಶಾಸನಗಳಲ್ಲಿ "ಸತ್ಯವಾಕ್ಯ ಕೊಂಙ್ಗುಣಿವರ್ಮ, ಧರ್ಮಮಹಾರಾಜಾಧಿರಾಜ, ಕುವಳಾಳಪುರವರೇಶ್ವರ, ನನ್ದಗಿರಿನಾಥ"[೭೨] ಎಂಬುದಾಗಿ ವರ್ಣಿಸಲಾಗಿದೆ.

ಕ್ರಿ.ಶ.೯೬೮-೬೯ ಲಕ್ಷ್ಮೇಶ್ವರದ ಶಾಸನವು ಗಂಗ ದೊರೆ ಮಾರಸಿಂಹನಕಾಲದ್ದಾಗಿದ್ದು, ಅದರಲ್ಲಿ ಇರುವ ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿರುವ ಪದ್ಯವು

"ಅಪಿ ಚ॥ ವೃತ್ತಂ॥ ಸೀಜ್ಜಗದ್ಗಹನರಕ್ಷಣರಾಜಸಿಂಹಃಕ್ಷ್ಮಾಮಣ್ಡನರಾಜಹಂಸಃ ಶ್ರೀಮಾರಸಿಂಹ
ಇತಿ ಬೃಂಹಿತಬಾಹುಕೀರ್ತ್ತಿಸ್ತಸ್ಯನುಜಃ ಕೃತಯುಗಕ್ಷಿತಿಪಾಳಕೀರ್ತ್ತಿ॥
ನಿರ್ವ್ವಾದೋಜ್ವಳ ಬೋದಪೋತ ಬಳತಸ್ಸಿದ್ಧಾನ್ತರತ್ನಾಕರಂ
ಚಾರಿತ್ತ್ರೋತ್ಪ್ಲುತ ಯಾನಪಾತ್ರಬಳಸ್ಸಂಸಾರ ಮಿಸಾಕರಂ।

ಉತ್ತೀರ್ಣಸ್ಸಮುದೀರ್ಣ್ಣಭಕ್ತಿವಿನತೈರ್ವ್ವಂದ್ಯಾಬಿ ವಾನೋರ್ವ್ವ ದೈ
ರಾಸೀದ್ದೇವಗಣೇರ್ಗ್ಗುಣ ನಿಧಿರ್ದ್ದೇವೇಂದ್ರ ಭಟ್ಟಾರಕಃ ॥

ಧರ್ಮದಲ್ಲಿ ಉಜ್ವಲನಾದವನು, ಜ್ಞಾನದಶಿಶುವಾಗಿಯೆ ಜನಿಸಿದವನು, ಸಿದ್ಧಾಂತ ಶಾಸ್ತ್ರಗಳ ಕಣಜದಂತವನು, ಚಾರಿತ್ರದಲ್ಲಿ ಧೀರ್ಘವಂತನು, ತೀರ್ಥಯಾತ್ರೆಯೆಂಬ ಕಾರ್ಯದಲ್ಲಿ ಹೊಳೆಯುವವನು, ಭಕ್ತಿ, ಜ್ಞಾನ, ವಿನಯ ಮಾರ್ಗಗಳಲ್ಲಿ ಜಯಿಸಿ ಬಂದವನು, ಇಡೀ ಪಂಡಿತ ಗಣಕ್ಕೆ ಅಗ್ರಮಾನ್ಯನು ಆಗಿದ್ದವನು, ಈ ಭಟ್ಟಾರಕ ಎಂದು ಮನೋಜ್ಞಾನವಾಗಿ ಈ ಪದ್ಯವು ಅವನ ವಿನಯ, ಜ್ಞಾನ, ಆಚಾರ, ವಿಚಾರಗಳೆಲ್ಲವನ್ನು ವರ್ಣಿಸಿದ್ದಾನೆ.

**ಶೋಭರಸ**

ಎರಡನೇ ತೈಲನ ಸಾಮಂತನಾಗಿದ್ದು ಈತನು ಎರಡು ಆರುನೂರಮಂ (ಬೆಳ್ವಲ-೩೦೦ ಮತ್ತು ಪುಲಿಗೆರೆ-೩೦೦) ಸುಖದಿಂದ ರಾಜ್ಯವಾಳುತ್ತಿದ್ದುದಾಗಿ ಕ್ರಿ.ಶ.೧೦೦೫ರ ಎಲೆಶಿರೂರಿನ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಈತನನ್ನು "ಕನ್ನನಬಣ್ಬಂ, ಕಟಕಪ್ರಾಕಾರಂ, ನೆರೆವೊಡೆಬಣ್ಬಂಗಿರಿದುರ್ಗಮಲ್ಲ, ಕೊಂಕಣ ಭಯಂಕರ" ಎಂಬುದಾಗಿ ಕರೆಯಲಾಗಿದೆ.[೨೩]

**ಇರಿವ ನೊಳಂಬರಾಜ**

ಈತನ ಬಗ್ಗೆ ಮುಂಡರಗಿಯ ಪೇಠಾಆಲೂರಿನ ಕ್ರಿ.ಶ.೧೦೧೦ರ ಶಾಸನ ಹೇಳುತ್ತದೆ. ಈತನು ಕಲ್ಯಾಣ ಚಾಲುಕ್ಯರ ೫ನೇ ವಿಕ್ರಮಾದಿತ್ಯನ ಸಾಮಂತನಾಗಿದ್ದಂತೆ ಶಾಸನದಿಂದ ತಿಳಿಯುತ್ತದೆ. ಈತನನ್ನು "ಪಲ್ಲವಾನ್ಮಯ, ಪಲ್ಲವಕುಲತಿಲಕ, ಕಾಂಚಿಪುರವರಾಧೀಶ್ವರ, ಮಾಂಡಲಿಕತ್ರಿನೇತ್ರ" ಎಂಬುದಾಗಿ ಕರೆಯಲಾಗಿದೆ.[೨೪] ಈತನು ನೊಳಂಬವಾಡಿ-೩೨೦೦೦, ಕೊಗುಳಿ-೫೦೦, ಬೆಳಕುಂದಿ-೩೦೦, ಕುಕನೂರು-೩೦ ಮಾಸವಾಡಿ-೧೪೦ನ್ನು ಆಳುತ್ತಿದ್ದುದಾಗಿ ತಿಳಿಯುತ್ತದೆ. ಇವನು ಮಹಾಪರಾಕ್ರಮಿಯಾಗಿದ್ದು ನೊಳಂಬ ವಂಶದವಾನಾಗಿದ್ದುದಾಗಿ ತಿಳಿಯುತ್ತದೆ.

**ಪೆರ್ಮ್ಮಾಳಮಾದರಸರು**

ಗದಗಿನ ಕ್ರಿ.ಶ.೧೦೬೭ರ ಶಾಸನದಲ್ಲಿ ಇತನನ್ನು ಉಲ್ಲೇಖಿಸಲಾಗಿದೆ. ಪೆರ್ಮ್ಮಾಳಮಾದರಸರು ಬೆಳ್ವೊಲ-೩೦೦ನ್ನು ಒಂದನೇ ಸೋಮೇಶ್ವರನ ಸಾಮಂತನಾಗಿ ಆಳಿದ್ದಾನೆ. ಶಾಸನದಲ್ಲಿ ಈತನನ್ನು "ಚೋಳಕುಳಕಾಳದಣ್ಡಂ, ಸಬರೆಬಲ್ಲಗಚಿಣ್ಡಂ, ಕಲಿಗಳಾರಾಧ್ಯ, ನಾರ್ಗ್ಗಮಸಾಧ್ಯಂ, ಪ್ರಚಣ್ಡಮಂಡಳಿಕ, ನರನಾರಸಿಂಹಯ್ಯನಸಿಂಗನಾಹವಕುತೊಹಳ., ಜಗದೇಕವೀರ"[೨೫] ಮುಂತಾದ ಬಿರುದುಗಳಿಂದ ಹೊಗಳಲಾಗಿದೆ.

**ವಾವನರಸ**

ಮುಳಗುಂದದ ಕ್ರಿ.ಶ.೧೧೨೪ರ ಶಾಸನವು ಈತನು ಎರಡನೇ ಜಯಸಿಂಹದೇವನ ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕನಾಗಿದುದಾಗಿ ತಿಳಿಸುತ್ತದೆ. ಈತನು ಬೆಳ್ವಲ-೩೦೦, ಪುಲಿಗೆರೆ-೩೦೦ನ್ನು ಆಳುತ್ತಿದ್ದುದಾಗಿ ಈ ಮುಳಗುಂದ ಶಾಸನ ತಿಳಿಸುತ್ತದೆ.[೭೬]

**ಮಾರರಸ**

ಕ್ರಿ.ಶ.೧೧೬೪ರ ಗದಗಿನ ಶಾಸನದಲ್ಲಿ ಈತನನ್ನು "ಜೋಳಗೊಂಡ, ಮಹಾಮಂಡಳೇಶ್ವರ" ಎಂಬ ಬಿರುದುಗಳಿಂದ ಕರೆಯಲಾಗಿದೆ. ಈತನು ಬೆಳ್ವೊಲ-೩೦೦ನ್ನು ಕ್ರಿ.ಶ.೧೧೬೪ರಲ್ಲಿ ಆಳುತ್ತಿದ್ದಂತೆ ತಿಳಿದುಬರುತ್ತದೆ.[೭೭]

**ಲಕ್ಷ್ಮರಸ**

ಲಕ್ಷೇಶ್ವರದ ಕ್ರಿ.ಶ.೧೧೭೪ರ ಶಾಸನವು ಲಕ್ಷ್ಮರಸನು ಪುಲಿಗೇರಿ-೩೦೦ ಮತ್ತು ಬೆಳ್ವೊಲ-೩೦೦ನ್ನು ಎರಡು ಆರುನೂರನು ಆಳುತ್ತಿದ್ದನು. ಈತನನ್ನು "ಛಲಕೆಬಲ್ಲಗಣ್ಡಂ, ಶೌರ್ಯ್ಯಮಾರ್ತ್ತಣ್ಡಂ, ಸಂಗ್ರಾಮಗರುಡ, ಮನುಜಮಾನ್ಧಾತ, ಪರನಾರಿಸಹೋದರ, ವೀರವೃಕೋದರ, ಕೋದಂಡಪಾರ್ತ್ಥಂ, ಸೌಜನ್ಯತೀರ್ತ್ಥಂ, ಮಣ್ಡಳಿಕಕಣ್ಠೀರಮಂ, ಪರಚಕ್ರಭೈರವಂ, ರಾಯದಣ್ಡಗೋಪಾಳಂ"[೭೮] ಮುಂತಾದ ಬಿರುದುಗಳಿಂದ ವರ್ಣಿಸಲಾಗಿದೆ.

**ಜಯಸಿಂಹ**

ಕ್ರಿ.ಶ.೧೦೮೨ರಲಕ್ಷ್ಮೇಶ್ವರದ ಶಾಸನವು ಆರನೇ ವಿಕ್ರಮಾದಿತ್ಯನ ತಮ್ಮನಾದ ಜಯಸಿಂಹನು ಸಾಮಂತನಾಗಿ ಪುಲಿಗೆರೆ-೩೦೦, ಬೆಳ್ವೊಲ-೩೦೦, ಬನವಾಸಿ-೧೨೦೦೦, ಕನ್ದೂರು-೧೦೦೦ಗಳನ್ನು ಆಳುತ್ತಿದ್ದನು. ಈತನನ್ನು ಶಾಸನಗಳಲ್ಲಿ "ಕದನತ್ರಿಣೇತ್ರ, ಗಜಾಂಗರಾಜ, ಕಟಕಸೂರೆಗಾರ, ಅಣ್ಣನಂಕಕಾರ"[೭೯] ಎಂಬ ಬಿರುದುಗಳಿಂದ ಕರೆಯಲಾಗಿದೆ. ಅಲ್ಲದೆ ಕ್ರಿ.ಶ.೧೮೯೧ರ ಪೇಠಾಆಲೂರಿನ ೬ನೇ ವಿಕ್ರಮಾದಿತ್ಯನ ಕಾಲದ ಶಾಸನದಲ್ಲಿ ಇತನನ್ನು

ಕೀರ್ತ್ತಿಲತಾಂಕುರಸ್ಯಕ
ಮಳಂಲಕ್ಷ್ಮೀನಿವಾಸಾಸ್ಪದಂ ವಜ್ರಂ ವೈರಿಮಹೀ
ಭೃತಾಂಪ್ರತಿನಿಧಿರ್ದ್ದೇವಸ್ಯ
ದೈತ್ಯೈದ್ರುಹಃ ರಾಜಾಸೀಂ ಜಯಸಿಂಹ

ಕೀರ್ತಿಗೆ ಅಲಂಕಾರದಂತೆ, ಲಕ್ಷ್ಮಿಗೆ ವಾಸಸ್ಥಾನವಾಗಿ, ವೈರಿಗಳಿಗೆ ವಜ್ರದಂತೆ ಕಠಿಣವುಳ್ಳವನಾಗಿ, ದುಷ್ಟನಿಗ್ರಹನಾಗಿದ್ದನು ಜಯಸಿಂಹದೊರೆ. ಕೀರ್ತಿಯ ಲತೆ ಅಂಕುರವಾಗಿ, ಲಕ್ಷ್ಮೀನಿವಾಸವಾಗಿ, ವೈರಿಗಳಿಗೆ ಭಂಜಕನಾಗಿ, ದುಷ್ಟರಿಗೆ ದುಸ್ವಪ್ನವಾಗಿ ಇದ್ದಂತವನು ರಾಜ ಜಯಸಿಂಹನು.

### ನಾಗವರ್ಮ ನಾಯ್ಕರು

ಕ್ರಿ.ಶ.೧೧೧೮ರ ಲಕ್ಷ್ಮೇಶ್ವರದ ಶಾಸನವು ನಾಗವರ್ಮನಾಯ್ಕನು ಈ ಭಾಗವನ್ನು ಸಾಮನ್ತನಾಗಿ ಆಳಿದ್ದಾನೆಂಬುದಾಗಿ ತಿಳಿಸುತ್ತದೆ. ಇವನನ್ನು ಮಹಾಪ್ರಧಾನದಣ್ಡನಾಯಕ ಎಂಬುದಾಗಿ ಇವನ ಬಗ್ಗೆ ತಿಳಿಸುತ್ತದೆ[೮೦]

### ಶೋಭನರಸ

ಶೋಭನರಸ ಕ್ರಿ.ಶ.೧೧೩೮ರಲ್ಲಿ ಪುಲಿಗೇರಿ ಬೆಳ್ವೊಲ-ಹಲಸಿಗೆ ಭಾಗಗಳನ್ನು ಆಳುತ್ತಿದ್ದುದಾಗಿ ಕ್ರಿ.ಶ. ಹೊಸೂರು ಶಾಸನ ತಿಳಿಸುತ್ತದೆ. ಈತನನ್ನು "ಪುಸಿಯಲ್ಲದಾತಂ, ಕಂನ್ನನಭಂಟಂ, ಕಟಕಪ್ರಕಾರ, ಗಿರಿದುರ್ಗಮಲ್ಲ, ರಣದೀರ"[೮೧] ಎಂಬ ಬಿರುದುಗಳಿಂದ ಕರೆಯಲಾಗಿದೆ.

### ಮಹಾದೇವರಸ

ಈತನು ಎರಡನೇ ಜಗದೇಕಮಲ್ಲನ ಸಾಮಂತನಾಗಿ ಕ್ರಿ.ಶ.೧೧೪೧ರಲ್ಲಿ ಈ ಭಾಗವನ್ನು ಆಳುತ್ತಿದ್ದಂತೆ ಲಕ್ಕುಂಡಿಯ ಶಾಸನ ತಿಳಿಸುತ್ತದೆ. ಈತನನ್ನು "ಕರಿತುರಗಪಟ್ಟಸಾಹಣಿ"[೮೨] ಎಂಬುದಾಗಿ ಶಾಸನದಲ್ಲಿ ಕರೆಯಲಾಗಿದೆ.

### ಕೇಸಿಮಯ್ಯ

ಕ್ರಿ.ಶ.೧೧೪೨ರ ಕಣವಿಯ ಶಾಸನವು ಇವನು ದಂಡನಾಯಕನಾಗಿದ್ದು, ಜಗದೇಕಮಲ್ಲನಿಗೆ ಅನೇಕ ಯುದ್ಧಗಳಲ್ಲಿ ಸಹಾಯ ಮಾಡಿರುತ್ತಾನೆ. ಈತನು ಈ ಭಾಗವನ್ನು ಆಳುತ್ತಿದ್ದನಲ್ಲದೆ, "ಚೋಳಲಾಲಗುರ್ಜರಉಚ್ಚಾಟನ" ಎಂಬುದಾಗಿ ಹೊಗಳಿದೆ. ಪುಲಿಗೇರಿ, ಬೆಳ್ವೊಲದ ಜೊತೆಗೆ ಹಲಸಿಗೆ, ಹಾನುಗಲ್ಲನ್ನು ಆಳುತ್ತಿದ್ದುದಾಗಿ ತಿಳಿಯುತ್ತದೆ.[೮೩]

### ರಾಯದೇವರಸ

ಈತನು ಹೊಯ್ಸಳದೊರೆ ವೀರಬಲ್ಲಾಳನ ವೀರಪ್ರಧಾನನಾಗಿ ಇದ್ದುದಾಗಿ ಕ್ರಿ.ಶ.೧೨ನೇ ಶತಮಾನದ ಲಕ್ಕುಂಡಿಯ ಶಾಸನದಿಂದ ತಿಳಿಯುತ್ತದೆ. ಈತನನ್ನು "ವಿರೋಧಿಮಣ್ಡಳಿಕನಗವಜ್ರದಣ್ಡ, ಸುಭಟಚೂಡಾಮಣಿ, ವೈರಿಗಜಕೇಸರಿ, ಸಹಜಮುರಾರಿ, ವಿಬುಧಜನಸ್ತುತ್ಯ, ಬೆಳ್ವೊಲಾದಿತ್ಯ" ಎಂಬ ಬಿರುದುಗಳಿಂದ ಕರೆಯಲಾಗಿದೆ.[೮೪]

### ೪.೨.೩. ಪುಲಗೇಜೆ ಸಾಮಂತರು

ಗದಗ ದಕ್ಷಿಣ ಭಾಗದಲ್ಲಿ ಬರುವ ಮತ್ತೊಂದು ಪ್ರಾಚೀನ ವಿಭಾಗವೆಂದರೆ ಪುಲಿಗೇರಿ-೩೦೦. ಕಲ್ಯಾಣಚಾಳುಕ್ಯರ ಕಾಲದಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಚಾಲುಕ್ಯ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿ ಪುಲಿಗೇರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡುತ್ತಿದ್ದಳು. ಶಾಸನಗಳ ಅಧ್ಯಯನದಿಂದ ಈ ಪುಲಗೆರೆಯ ಮೇರೆಗಳನ್ನು ಗುರುತಿಸಬಹುದು.

ಪುಲಿಗೇರಿಯ ಉತ್ತರಕ್ಕೆ – ಬೆಳ್ವೊಲ–೩೦೦

ದಕ್ಷಿಣಕ್ಕೆ – ಬನವಾಸಿ–೧೨೦೦೦

ಪೂರ್ವಕ್ಕೆ – ಮಾಸವಾಡಿ–೧೪೦

ಪಶ್ಚಿಮಕ್ಕೆ – ಹಾನಗಲ್ಲು–೫೦೦ಗಳನ್ನು ಮೇರೆಯಾಗಿ ಪಡೆದಿತ್ತು.

ಈ ಪುಲಿಗೆರೆಯನ್ನು ಶಾಸನಗಳಲ್ಲಿ ಪುಲಗ್ವರೆ, ಪುರಿಕರ, ಪುರಿಕನಗರ, ಪುರಿಗೆರೆ, ರಕ್ತಪುರ ಎಂಬ ಹೆಸರುಗಳಿಂದ ಕರೆಯಲಾಗಿದೆ. ಪುಲಿಗೆರಿ ಇದರ ಕನ್ನಡ ರೂಪ ಹುಲಿಗೆರೆ. ತಿರುಳ್ಗನ್ನಡ ಪ್ರದೇಶವಾಗಿತ್ತೆಂದು ಕವಿರಾಜಮಾರ್ಗದಲ್ಲಿ ಹೇಳಲಾಗಿದೆ. ಬೆಳ್ವೊಲ–೩೦೦, ಪುಲಿಗೆರೆ–೩೦೦ ಎರಡನ್ನು ಸೇರಿಸಿ ಶಾಸನಗಳಲ್ಲಿ ಎರಡುಮಾನೂರುಮಂ ಎಂಬುದಾಗಿ ಕರೆಯಲಾಗಿದೆ. ಪುಲಿಗೆರೆ–೩೦೦, ಬೆಳ್ವೊಲ–೩೦೦ ಅಂತೆರಡುನೂರುಂ ಎಂದು ಉಲ್ಲೇಖಿಸಿವೆ. ಆದರೂ ಇವೆರಡೂ ಬೇರೆ ಬೇರೆ ಪ್ರಾಂತ್ಯಗಳಾಗಿದ್ದವು.

ಈ ವಿಭಾಗಕ್ಕೆ ಶಿರಹಟ್ಟಿ ತಾಲೂಕಿನ ಗ್ರಾಮಗಳು ಸೇರುತ್ತವೆ. ಅಲ್ಲದೆ ಹಾವೇರಿ ಜಿಲ್ಲೆಯ ಸವಣೂರು ತಾಲೂಕಿನ ಗ್ರಾಮಗಳು, ಗದಗ, ಕುಂದಗೋಳ, ಶಿಗ್ಗಾಂವ ತಾಲೂಕಿನ ಕೆಲವು ಗ್ರಾಮಗಳು ಈ ಭಾಗದಲ್ಲಿ ಸೇರಿದ್ದವು. ಸೊರಟೂರು, ಬನ್ನಿಕೊಪ್ಪ, ಬೆಳ್ಳಟ್ಟಿ, ಎರಗುಪ್ಪೆ, ಬೆಳ್ಳನೂರು, ಗೋವಿನಕೊಪ್ಪ, ನೇರಲಗಿ, ಶಿರಹಟ್ಟಿ, ಗೊಜನೂರು, ಲಕ್ಷ್ಮೇಶ್ವರ, ಶಿಗ್ಗಲಿ, ಹೂವಿನಶಿಗ್ಗಲಿ, ಗುಡಗೇರಿ, ಕಳಸ, ಗೌಡಗೆರೆ, ಹುಲಗೂರು. ಸೊರಲಿ, ಕಾರಡಗಿ, ಕಾಲಡಿ, ಮಂತ್ರವಾಡಿ, ಸವಣೂರು, ಹತ್ತಿಮತ್ತೂರು, ಗ್ರಾಮಗಳು ಈ ನಾಡಿನಲ್ಲಿ ಸಮಾವೇಶಗೊಂಡಿದ್ದವು. ಕಾಲಡಿ ತೊಂಭತ್ತಾರು, ಇದು ಈ ನಾಡಿನ ಹುಲಿಗೂರು ಶಾಸನದಲ್ಲಿ ಉಲ್ಲೇಖಿತವಾದ ಉಪವಿಭಾಗವಾಗಿತ್ತು. ಮಂತ್ರೋದಿ, ಎಲೆಬಳ್ಳಿ, ಹಳಿಯಕೆರೆ, ಕರಳವಾಡಗಳು ಸೇರಿರುವುದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಪುಲಗೆರೆಯನ್ನು, ಬೆಳ್ವೊಲವನ್ನು ಆಳುತ್ತಿದ್ದಂತಹ ಸಾಮಂತರೇ ಆಳುತ್ತಿದ್ದುದು ಶಾಸನಗಳಿಂದ ಕಂಡುಬರುತ್ತದೆ. ಅಲ್ಲದೆ ಕೆಲವು ಸಂದರ್ಭಗಳಲ್ಲಿ ಪುಲಿಗೇರಿ–೩೦೦ ಒಂದನ್ನೇ ಆಳುತ್ತಿದ್ದುದು ಕಂಡುಬರುತ್ತದೆ.

**ಕುಪ್ಪದೇವರಸ**

ಕ್ರಿ.ಶ.೧೧೪೭ರ ಮುಂಡರಗಿ ತಾಲೂಕಿನ ಬೂದಿಹಾಳದ ಶಾಸನವು ಈತನು ರಾಷ್ಟ್ರಕೂಟ ದೊರೆ ಅಕಾಲವರ್ಷ ಕೃಷ್ಣಕನ್ನರದೇವನ ಸಾಮಂತನಾಗಿದ್ದು, ಪುಲಗೆರೆ, ಕೋಗಳಿ, ಮಾಸವಾಡಿ ಪ್ರದೇಶವನ್ನು ಆಳುತ್ತಿದ್ದನು ಎಬುದಾಗಿ ತಿಳಿಸುತ್ತದೆ. ಈತನನ್ನು ಯಾದವವಂಶೋದ್ಭವ, ಷಡ್ಗುಣಾಂಕಾರ, ಕಲಿಗಳಾದಿತ್ಯ, ರಣಮೂರ್ಖಧವಳ[೨೫] ಎಂಬ ಬಿರುದುಗಳಿಂದ ಕರೆಯಲಾಗಿದೆ.

**ಮಹಾಲಕ್ಷ್ಮೀದೇವಿ**

ವಿಕ್ರಮಾದಿತ್ಯನ ಪತ್ನಿಯಾದ ಈಕೆ ಕೊಲ್ಲಾಪುರದಿಂದ ಈ ಭಾಗಗಳನ್ನು ಆಳುತ್ತಿದ್ದುದಾಗಿ ಸೊರಟೂರಿನ ವೆಂಕಟೇಶ್ವರ ದೇವಾಲಯದ ಶಾಸನ ತಿಳಿಸುತ್ತದೆ.[೮೬]

**ನಾಗವರ್ಮಯ್ಯ**

ಈತನು ದಂಡಾಧಿಪತಿಯಾಗಿದ್ದು ಈ ಭಾಗದಲ್ಲಿ ಆಳುತ್ತಿದ್ದನು. ಈತನನ್ನು "ಜಗಮಂ ರಕ್ಷಿಸಿ ಲಕ್ಷ್ಮೀಯಂ ಮತ್ತೆರಡು ತೋಳಂ ಪೆತ್ತು" ಮುಂತಾಗಿ ಕ್ರಿ.ಶ. ೧೦೪೨ರ ಎಲೆಶಿರೂರಿನ ಶಾಸನದಲ್ಲಿ ಹೊಗಳಲಾಗಿದೆ.[೮೭]

**ಜಯಕೇಶಿ ದೇವರಸ**

ಮೂರನೇ ಸೋಮೇಶ್ವರನ ಕಾಲದಲ್ಲಿ ಪುಲಗೇರಿ-೩೦೦ನ್ನು ಜಯಕೇಶಿ ದೇವರಸ ಆಳುತ್ತಿದ್ದುದಾಗಿ ಲಕ್ಷ್ಮೇಶ್ವರದ ಕ್ರಿ.ಶ.೧೧೩೮ರ ಕಾಲದ ಶಾಸನ ತಿಳಿಸುತ್ತದೆ. ಈತನನ್ನು "ಸೂರ್ಯ ವಂಶಾಬರದ್ಯುಮಣಿ, ಕದನತ್ರಿಣೇತ್ರಂ, ಸಗರಮಾರ್ತ್ತಂಡ, ಸಮುಕ್ತಚೂಡಾಮಣಿ"[೮೮] ಮುಂತಾದ ಬಿರುದುಗಳಿಂದ ಕರೆಯಲಾಗಿದೆ.

**ವೀರಪಾಂಡ್ಯದೇವರು**

ಈತನು ಮಹಾಮಂಡಲೇಶ್ವರನಾಗಿದ್ದನು, ಇತನ ಬಗ್ಗೆ ಕ್ರಿ.ಶ.೧೧೫೩ರ ಲಕ್ಷ್ಮೇಶ್ವರದ ಶಾಸನ ವಿವರಿಸುತ್ತದೆ. ಈತನನ್ನು ಈ ಶಾಸನದಲ್ಲಿ "ಕಂಚೀಪುರವರಾಧೀಶ್ವರ, ಸುಭಟಚೂಡಾಮಣಿ, ಮಹೇಂದ್ರಮಣಿ, ಮುಕುಟಕೋಟಿವಿಘಟಿತ, ನಿಜವಿಜಯ, ಕನಕನಗಶಿಲಾತಳಸ್ಥಾಪಿತ, ಯಾದವಾಭರಣ, ಪಾಣ್ಡ್ಯಕುಳಕಮಳ ಮಾರ್ತ್ಥಣ್ಡಂ"[೮೯] ಮುಂತಾದ ಬಿರುದುಗಳಿಂದ ಶಾಸನದಲ್ಲಿ ಉಲ್ಲೇಖಿತನಾಗಿದ್ದು, ಈತನು ಪಾಂಡ್ಯ ವಂಶದವನಾಗಿದ್ದನು.

**ಯಿಂದ್ರಕೇಶಿನೃಪತಿ**

ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಹುಲಗೆರೆಯ ನಾಡ ಮಾಂಡಳಿಕರಲ್ಲಿ ಪ್ರಸಿದ್ಧ ಮಾಂಡಳಿಕನಾಗಿದ್ದ. ಈತನನ್ನು "ಯಿಂದ್ರಕೇಶಿನೃಪತಿಮಾರಸಿಂಗನೃಪನಾನೃಪಸೂನು"[೯೦] ಅಂದರೆ ಮಾರಸಿಂಗನ ಮೊಮ್ಮಗ ಗುಣಗಳ ರಾಶಿ, ನಿರ್ಮ್ಮಳಮತಿಯಾಗಿದ್ದನೆಂದು ಗದಗಿನ ಶಾಸನದಲ್ಲಿ ತಿಳಿಸಲಾಗಿದೆ.

**ವೇಸುವದಣ್ಡನಾಯಕ**

ಈ ಪ್ರದೇಶವು ಹೊಯ್ಸಳರ ವಶವಾದಾಗ ವೀರಬಲ್ಲಾಳನ ಸಾಮಂತನಾಗಿ ವೇಸುವ ದಂಡನಾಯಕನು ಆಳುತ್ತಿದ್ದುದು ಕ್ರಿ.ಶ. ೧೧೯೧ರ ಲಕ್ಷ್ಮೇಶ್ವರದ ಶಾಸನದಿಂದ ತಿಳಿಯುತ್ತದೆ.[೯೧] ಆದರೆ ಹೆಚ್ಚಿನ ವಿಷಯಗಳು ತಿಳಿಯುವುದಿಲ್ಲ.

**ಬೀಚಿರಾಜ**

ಲಕ್ಕುಂಡಿಯ ೧೨ನೇ ಶತಮಾನದ ಶಾಸನವು ಯಾದವ ದೊರೆ ಸಿಂಘಣನ ಕಾಲಕ್ಕೆ ಬೀಚಿರಾಜನು ಪುಲಿಗೆರೆ-೩೦೦ನ್ನು ಆಳುತ್ತಿದ್ದನು. ಈತನನ್ನು "ಹೊಯ್ಸಳರಾಯಸಮುಚ್ಚಾಟನಚಟುಳ, ಚಕ್ರಾಯಮಾಣವಿಕ್ರಾಂನ್ತ, ಪರಾಜಿತ ಶರಣಾಗತರಕ್ಷಾದಕ್ಷಂ, ಕರ್ಣ್ಣಾಟಮಂಡಲಾಧ್ಯಶೇಷ, ದೇಶಾಧೀಶ್ವರ, ಜೈನಜಿನಚೂಡಾಮಣಿ"[೨] ಮುಂತಾದ ಹೆಸರಿನಿಂದ ಕರೆಯಲಾಗಿದೆ. ಹೊಯ್ಸಳರನ್ನು ಈ ಪ್ರದೇಶದಿಂದ ಹಿಮ್ಮೆಟ್ಟಿಸುವಲ್ಲಿ ಸಿಂಘಣನಿಗೆ ಇವನ ಸಹಕಾರ ಬಹಳವಾಗಿದ್ದುದ್ದಾಗಿ ಉಲ್ಲೇಖಿಸಲಾಗಿದೆ.

**ಆರ್ಯಮಲ್ಲಿಸೆಟ್ಟಿ**

'ಕೊಂಕಣಚಕ್ರವರ್ತಿ' ಎಂಬ ಬಿರುದಿನಿಂದ ಈತನನ್ನು ಕರೆಯಲಾಗಿದೆ. ಈತನು ಸಿಂಘಣನ ಕಾಲದಲ್ಲಿ ಪುಲಗೆರೆಯು ಸೇರಿದಂತೆ ಕೊಂಕಣ ಪ್ರದೇಶವನ್ನು ಆಳುತ್ತಿದ್ದನು ಎಂಬುದಾಗಿ ಶಾಸನದಿಂದ ತಿಳಿದು ಬರುತ್ತದೆ.

**ನಾಗಂಣ**

ಈತನು ವಿಜಯನಗರದ ಅರಸ ಒಂದನೇ ದೇವರಾಯನ ಕಾಲದಲ್ಲಿ ಅವನ ದಂಡನಾಯಕನಾಗಿದ್ದು, ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದನು. ಆಗ ಲಕ್ಷ್ಮೇಶ್ವರದಲ್ಲಿ ಶಿವರಾಮಯ್ಯಂಗಳ ಅಣ್ಣ ಗಂಗಣಯ್ಯಂಗಳಿಗೂ, ಹೇಮದೇವಚಾರ್ಯರಿಗೂ ನಡೆದ ಭೂ ವಿವಾದವನ್ನು ಬಗೆಹರಿಸಿದ ಬಗ್ಗೆ ಉಲ್ಲೇಖವಿರುವ ಕ್ರಿ.ಶ.೧೪೧೨ರ ಶಾಸನದಲ್ಲಿ ಈತನ ಹೆಸರಿನಲ್ಲಿ ಪ್ರಮಾಣ ಮಾಡಿ ನಡೆದುಕೊಂಡ ಬಗ್ಗೆ ಶಾಸನದಲ್ಲಿ ಉಕ್ತವಾಗಿದೆ.[೩]

**ಅಧಿಕಾರಿಗಳು**

ಸಾಮಂತ ರಾಜರ ಕೈಕೆಳಗೆ ಹಲವು ಅಧಿಕಾರಿಗಳು ಆಡಳಿತ ನಡೆಸುತ್ತಿದ್ದುದು ತಿಳಿದುಬರುತ್ತದೆ. ರಾಜ್ಯವನ್ನು ಪ್ರಾಂತ, ಮಂಡಲ, ಕಂಪಣ, ದೇಶ, ವಿಷಯ, ನಾಡು ಎಂದು ಮುಂತಾಗಿ ವಿಂಗಡಿಸಿದ ಸಂಗತಿ ಶಾಸನಗಳಲ್ಲಿ ಉಕ್ತವಾಗಿದೆ. ಇಂತಹ ವಿಭಾಗಗಳಲ್ಲಿ ಕುಂತಳ ದೇಶವೂ ಒಂದು. ಈ ಕುಂತಳದೇಶದಲ್ಲಿ ಸಮಾವೇಶಗೊಳ್ಳುವ ಉಪವಿಭಾಗಗಳೆಂದರೆ, ಬನವಾಸಿ, ಹಲಸಿಗೆ, ಬಾಗಡಿಗೆ, ಹಂಗಟಿಗೆ, ತರ್ದವಾಡಿ, ಕಿಸುಕಾಡು, ಕರಡಿಕಲ್ಲು, ಹಾನಗಲ್ಲು, ಬೆಳ್ವೊಲ, ಪುಲಗೆರೆ ಮತ್ತು ಮಾಸವಾಡಿ ಮುಂತಾದವು. ಕೆಲವು ಸಲ ಈ ಆಡಳಿತ ವಿಭಾಗಗಳನ್ನು ಅರಸು ಮನೆತನದ ಹೆಸರಿನಿಂದ ಕರೆಯಲಾಗಿದೆ. ಉದಾಹರಣೆಗೆ ಗಂಗವಾಡಿ, ಸಿಂಧವಾಡಿ, ಕದಂಬಮಂಡಲ, ಸೆವುಣದೇಶ ಮುಂತಾದವು ಈ ಆಡಳಿತ ವಿಭಾಗಗಳೊಂದಿಗೆ ಸಂಖ್ಯೆಗಳನ್ನು ಜೋಡಿಸಿ ಕರೆಯುವ ಪದ್ಧತಿ ಅಂದು ಪ್ರಚಲಿತವಾಗಿದ್ದುದು ತಿಳಿದುಬರುತ್ತದೆ. ಗಂಗವಾಡಿ-೯೬೦೦೦, ಬನವಾಸಿ-೧೨೦೦೦, ಕೊಹಿಂಡಿ-೩೦೦೦, ತರ್ದವಾಡಿ-೧೦೦೦, ಹಾನಗಲ್ಲು-೫೦೦, ಬೆಳ್ವೊಲ-೩೦೦, ಪುಲಿಗೆರೆ-೩೦೦,

ಮಾಸವಾಡಿ-೧೪೦, ಕಿಸುಕಾಡು-೭೦, ಕುಕನೂರು-೩೦, ಮುಳಗುಂದ-೧೨, ಹೀಗೆ ಅನೇಕ ಉದಾಹರಣೆ ಕೊಡಬಹುದು. ಈ ರೀತಿಯ ವಿಭಾಗ ಕ್ರಮವು ರಾಜ್ಯದಲ್ಲಿ ಇದ್ದು ಅವುಗಳಲ್ಲಿ ಹಲವು ಜನ ಅಧಿಕಾರಿಗಳು ಆಡಳಿತ ನಡೆಸುತ್ತಿದ್ದರು. ರಾಜರಿಗೆ ಸಹಾಯಕರಾಗಿ ರಾಜರ ರಕ್ತಸಂಬಂಧಿಗಳೇ ಹೆಚ್ಚಾಗಿ ಆಡಳಿತ ನಡೆಸುತ್ತಿದ್ದುದು ಕಂಡುಬರುತ್ತದೆ.

ರಾಜರಿಗೆ ಸಹಾಯಕರಾಗಿ ಮಂತ್ರಿಗಳು ಇರುತ್ತಿದ್ದರು. ಇವರುಗಳಲ್ಲದೇ ಅನೇಕ ಜನ ಅಧಿಕಾರಿಗಳು ಅಂದರೆ ೧.ಸೇನಾಧಿಪತಿಗಳು ೨.ಸಂಧಿವಿಗ್ರಹಿ ೩.ಶ್ರೀಕರ್ಣಾಧಿಕಾರಿ ೪.ಹಿರಿಯಭಂಡಾರಿ ೫.ಮಹಾಪಸಾಯತ ಎಂಬ ಅಧಿಕಾರಿಗಳು ಇದ್ದರು. ಆಡಳಿತದ ಸುಗಮತೆಗಾಗಿ ಸಾಮ್ರಾಜ್ಯ ವಿಭಾಗಿತವಾಗಿತ್ತು. ರಾಷ್ಟ್ರ, ವಿಷಯ, ನಾಡು ಇವು ಸಾಮ್ರಾಜ್ಯದ ವಿಭಾಗಗಳು. ರಾಷ್ಟ್ರಪತಿ ರಾಷ್ಟ್ರದ ವ್ಯವಸ್ಥೆ ನೋಡಿಕೊಳ್ಳುತ್ತಿದ್ದ. ವಿಷಯಪತಿ ವಿಷಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ. ನಾಡಿನ ಅಧಿಕಾರಿಯನ್ನು ನಾಡರಸ ಎಂದು ಕರೆಯುತ್ತಿದ್ದರು. ನಾಡರಸರನ್ನು ನಾಡಪ್ರಭು, ನಾಡಗಾವುಂಡ ಎಂದೂ ಕರೆಯಲಾಗಿದೆ. ಹಳ್ಳಿಯು ಆಡಳಿತದ ಚಿಕ್ಕವಿಭಾಗ. ಪಟ್ಟಣಸ್ವಾಮಿ ಅಥವಾ ಪಟ್ಟಣಶೆಟ್ಟಿ ಎಂದು ಕರೆಯಲಾಗುತ್ತಿದ್ದ ಸ್ಥಳೀಯ ಅಧಿಕಾರಿಗಳನ್ನು ಇಲ್ಲಿ ಹೆಸರಿಸಬಹುದು. ೫೦೦ ಜನ ಐಹೊಳೆ ಸ್ವಾಮಿಗಳು ಇದ್ದರು. ಅಲ್ಲದೆ ಐವತ್ತೊಕ್ಕಲು ಕೂಡ ಹಳ್ಳಿಯ ಆಡಳಿತದಲ್ಲಿ ಮುಖ್ಯವಾಗಿತ್ತು.

**೪.೨.೪. ಆಡಳಿತ ಅಂಶಗಳು**

ಈ ಭಾಗದ ಶಾಸನಗಳನ್ನು ಅವಲೋಕಿಸಿದಾಗ ಆಡಳಿತ ವ್ಯವಸ್ಥೆ ವಿಕೇಂದ್ರೀಕೃತವಾಗಿರುವುದು ತಿಳಿದುಬರುತ್ತದೆ. ರಾಜ್ಯಕ್ಕೆ ಅಧಿಪತಿ ರಾಜನಾಗಿದ್ದರೂ ಸಹ, ಅವನ ಕೆಳಗೆ ಸಾಮಂತರು, ದಂಡಾಧಿಕಾರಿಗಳು, ಪಟ್ಟಣಶೆಟ್ಟರು, ನಾಡಪ್ರಭುಗಳು, ಪುರಪ್ರಮುಖರು, ಐವತ್ತೊಕ್ಕಲು ಇರುವುದು ಕಂಡುಬರುತ್ತದೆ. ರಾಜನ ನಿರಂಕುಶ ಪ್ರಭುತ್ವವನ್ನು ಮಂತ್ರಿಮಂಡಲ ತಡೆಯುತ್ತಿತ್ತು. ರಾಜ್ಯದ ಆಡಳಿತ ನಮ್ಮ ಹಿಂದಿನ ಕಾಲದ ಧರ್ಮಗ್ರಂಥಗಳ ಆಧಾರದ ಮೇಲೆ ನಡೆಯುತ್ತಿತ್ತು. ಆಡಳಿತ ಸುಸೂತ್ರವಾಗಿ ನಡೆಯಲು ರಾಜರು ಹಲವಾರು ಕ್ರಮಗಳನ್ನು ತೆಗೆದುಕೊಳ್ಳುತ್ತಿದ್ದರು. ರಾಜಬೊಕ್ಕಸಕ್ಕೆ ಹಲವಾರು ತೆರಿಗೆಗಳು ಮೂಲಾದಾಯಗಳಾಗಿದ್ದವು. ತುಪ್ಪದಸುಂಕ, ಮದುವೆಯಸುಂಕ, ವ್ಯಾಪಾರದ ಮೇಲಿನ ಸುಂಕಗಳು ರಾಜ್ಯಾದಾಯಗಳಾಗಿದ್ದವು. ಧಾರ್ಮಿಕವಾಗಿ ಎಲ್ಲಾ ಧರ್ಮಗಳನ್ನು ಗೌರವದಿಂದ ಕಾಣುತ್ತಿದ್ದುದು ತಿಳಿದುಬರುತ್ತದೆ. ಶಾಸನಗಳ ಆಧಾರದಲ್ಲಿ ನೋಡಿದಾಗ ಜೈನ, ಬೌದ್ಧ, ವೈಷ್ಣವ, ಶೈವ ಎಲ್ಲಾ ಧರ್ಮಗಳ ದೇವಾಲಯಗಳಿಗೆ ದಾನಧರ್ಮಗಳನ್ನು ಬಿಟ್ಟುದಲ್ಲದೆ, ಕೆಲವು ದೇವಾಲಯಗಳನ್ನು ನಿರ್ಮಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೇ ದೇವರ ಅಂಗಭೋಗ, ರಂಗಭೋಗ, ನಂದಾದೀಪ, ನೈವೇದ್ಯಕ್ಕೆ ಬಿಟ್ಟ ದಾನಗಳು ಅಪಾರ. ಈ ಕಾಲದಲ್ಲಿ ಭೂಮಿಯನ್ನು ಅಳೆಯಲು ಗಿಡಿಂಬ, ಅಣ್ಣಿಗೇರಿಕೋಲು, ಮತ್ತರ ಕೋಲುಗಳನ್ನು, ತೂಕಗಳಲ್ಲಿ ಮಣ, ಸೇರು, ವೀಸ, ಭಂಡವೇರು

ಮುಂತಾದವುಗಳಿದ್ದುವು. ಸೈನ್ಯಾಡಳಿತ ಬಹಳವಾಗಿತ್ತು. ಅಂತೂ ರಾಜ್ಯರಕ್ಷಣೆಗೆ ಬೇಕಾಗಿದ್ದ ಸೈನ್ಯವನ್ನು ಎಲ್ಲಾ ರಾಜರು ಬಲಪಡಿಸಿದ್ದರು. ಸೈನ್ಯದ ವೆಚ್ಚಕ್ಕಾಗಿ ಬಹಳವಾಗಿ ಹಣ ವ್ಯಯವಾಗುತ್ತಿದ್ದುದು ತಿಳಿದುಬರುತ್ತದೆ.

**೪.೩. ಶಾಸನಗಳಲ್ಲಿನ ಸ್ಥಳ ನಾಮಗಳು**

ದಕ್ಷಿಣ ಗದಗು ಜಿಲ್ಲೆಯಲ್ಲಿ ಇರುವ ಅನೇಕ ಗ್ರಾಮಗಳ ಹೆಸರುಗಳು ಕಾಲಕಾಲಕ್ಕೆ ಬದಲಾಗಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಈ ಭಾಗದ ಗ್ರಾಮಗಳು ಐತಿಹಾಸಿಕ, ಪೌರಾಣಿಕ ಮತ್ತು ಪ್ರಾಕೃತಿಕ ಹಿನ್ನೆಲೆಯಲ್ಲಿ ಹೆಸರುಗಳನ್ನು ಪಡೆದುಕೊಂಡಿರುವುದು ತಿಳಿದುಬರುತ್ತದೆ. ಈ ಭಾಗವು ರಾಮಾಯಣ, ಮಹಾಭಾರತ ಕಾಲದಿಂದಲೂ ಪ್ರಸಿದ್ಧಿ ಪಡೆದ ಪ್ರದೇಶವಾಗಿದ್ದು, ಅವುಗಳ ಹೆಸರುಗಳು ಕಾಲಕ್ರಮೇಣ ಬದಲಾಗುತ್ತ ಬಂದಿರುವುದನ್ನು ಕಾಣುತ್ತೇವೆ. ಇಲ್ಲಿಯ ಸ್ಥಳನಾಮಗಳು ಜನಾಂಗೀಯ ವಾಚಕವಾಗಿರುವುದು ತಿಳಿದುಬರುತ್ತದೆ. ನಿಸರ್ಗವಾದ, ವ್ಯಕ್ತಿವಾದ, ಆದರ್ಶವಾದ ಎಂಬ ವಿಧಗಳಲ್ಲಿ ಇಲ್ಲಿಯ ಸ್ಥಳನಾಮಗಳನ್ನು ನೋಡಬಹುದು.

**ಗದಗ**

ಗದಗ ಜಿಲ್ಲೆಯು ಒಂದು ಕೇಂದ್ರ ಸ್ಥಾನವಾಗಿದ್ದು, ೧೯೯೭ರಲ್ಲಿ ಧಾರವಾಡ ಜಿಲ್ಲೆಯಿಂದ ಪ್ರತ್ಯೇಕವಾಗಿ ವಿಭಾಗಗೊಂಡು ಹೊಸ ಜಿಲ್ಲಾ ಕೇಂದ್ರವಾಗಿ ಹೊರಹೊಮ್ಮಿತು. ಈ ನಗರವು ಪುರಾಣಗಳಲ್ಲಿ ಕೃತುಪುರ ಎಂದು ಪ್ರಸಿದ್ಧಿ ಪಡೆದಿದೆ. ಕೃತು ಎಂಬುವನು ಬ್ರಹ್ಮಮಾನಸ ಪುತ್ರನಾಗಿದ್ದು ಅವನು ಕಪ್ಪತ್ತಗುಡ್ಡದಲ್ಲಿ ತಪಸ್ಸು ಮಾಡುತ್ತಿದ್ದನೆಂದೂ, ಆಗ ಕಪೋತರೋಮ ಎಂಬ ರಾಕ್ಷಸನ ಉಪಟಳ ತಡೆಯಲಾರದೆ ದೇವರ ಮೊರೆಹೊಕ್ಕಾಗ, ವೀರನಾರಾಯಣನಾಗಿ ವಿಷ್ಣುವು ಬಂದು ಆ ರಾಕ್ಷಸನೊಡನೆ ಹೋರಾಡಿ ಅವನನ್ನು ಕೊಂದನೆಂದೂ, ಕೃತುವಿನ ಪ್ರಾರ್ಥನೆಗೆ ಸುಪ್ರೀತನಾಗಿ ಗದಗಿನಲ್ಲಿಯೇ ವಿಷ್ಣುವು ವೀರನಾರಾಯಣನಾಗಿ ನೆಲೆಸಿದನೆಂದು ಪ್ರತೀತಿ ಇದೆ. ಈ ರೀತಿಯಾಗಿ ಕೃತುವಾಸಿಸಿದ್ದರಿಂದ ಕೃತಪುರ ಎಂಬ ಹೆಸರು ಪಡೆಯಿತು ಎಂದು ಹೇಳಲಾಗಿದೆ.

ಮಹಾಭಾರತದಲ್ಲಿ ಬರುವ ಜನಮೇಜಯನು ಸರ್ಪಯಜ್ಞವನ್ನು ಮಾಡಿದ ಸ್ಥಳ ಇದು ಎಂದು, ಅವನೇ ಇಲ್ಲಿನ ಅಗ್ರಹಾರವನ್ನು ಸ್ಥಾಪನೆ ಮಾಡಿದನೆಂಬ ಹೇಳಿಕೆಗಳಿವೆ. ಗದಗವು ಮಹಾಭಾರತದಲ್ಲಿ ಕೃತಪುರವೆಂದು ಉಲ್ಲೇಖಿಸಲಾಗಿದೆ. ಇದಕ್ಕೆ ಸಂಭಂದಿಸಿದಂತೆ ಕಥೆಯೊಂದು ಇದ್ದು, ಇದು ಪಾಂಡವರ ವಂಶಜನಾದ ಪರೀಕ್ಷಿತರಾಜನು ಕೃತಪುರಕ್ಕೆ ಬಂದಾಗ ಸರ್ಪಕಚ್ಚಿದ ಪರಿಣಾಮ ಮರಣ ಹೊಂದುತ್ತಾನೆ. ಅದರಿಂದ ಕೋಪಗೊಂಡ ಅವನ ಮಗ ಜನಮೇಜಯನು ಸರ್ಪಸಂತತಿಯನ್ನೇ ನಾಶಮಾಡಲು ಪ್ರತಿಜ್ಞೆಮಾಡಿ ಸರ್ಪಯಾಗವನ್ನು ಮಾಡುತ್ತಾನೆ. ಆಗ ಇದರಿಂದ ಭಯಗೊಂಡ ಸರ್ಪಗಳೆಲ್ಲವು ಆಸ್ತಿಕಮುನಿಯನ್ನು ಮೊರೆಯಾಚಿಸುತ್ತವೆ. ಆಗ ಆಸ್ತಿಕಮುನಿಯು ಜನಮೇಜಯನಿಗೆ

ಸರ್ಪಯಾಗವನ್ನು ಮುಂದುವರೆಸದಂತೆ ಅಡ್ಡಿಪಡಿಸುತ್ತಾನೆ. ಆ ಒಂದು ಯಜ್ಞದ ಸ್ಥಳವೇ ಕೃತಪುರ ಈ ಗದಗ ಎಂದು ಮಹಾಭಾರತದಲ್ಲಿ ಹೇಳಲಾಗಿದೆ.

ಗದಗನ್ನು ಶಾಸನಗಳ ದೃಷ್ಟಿಯಲ್ಲಿ ನೋಡಿದಾಗ ಇದು ಜ್ಞಾನಪೀಠವಾಗಿದ್ದು ಮಹಾಅಗ್ರಹಾರವಾಗಿ ಮೆರೆದಿತ್ತು. ಈ ಪಟ್ಟಣದ ಆಡಳಿತವನ್ನು ೭೭ ಮಹಾಜನರು ನಿರ್ವಹಿಸುತ್ತಿದ್ದುದು ತಿಳಿಯುತ್ತದೆ.

ನಂತರ ವಿಜಯನಗರ ಕಾಲದಲ್ಲಿ ಎಡೆಯೂರು ತೋಂಟದ ಸಿದ್ದಲಿಂಗೇಶ್ವರರ ಗದ್ದುಗೆ ಇಲ್ಲಿಯೇ ಆಗಿದ್ದರಿಂದ ಇದಕ್ಕೆ ಗದಗ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ. ಶಾಸನಗಳಲ್ಲಿ ಈ ನಗರವನ್ನು ಗಲದುರ್ಗ, ಕಲ್‌ದುರ್ಗ, ಗರದುರ್ಗ, ಕರ್ತಕ, ಕೃತಪುರ ಎಂಬ ಹೆಸರುಗಳಿಂದ ಕರೆಯಲಾಗಿದೆ. ಕ್ರಿ.ಶ.೧೦೦೨ರ ಅಹವಮಲ್ಲನು ಹಾಕಿಸಿದ ತ್ರಿಕೂಟೇಶ್ವರ ದೇವಾಲಯದ ಶಾಸನದಲ್ಲಿ ಕದ್ದುರ್ಗಿಗೆ ಎಂದು ಹೇಳಲಾಗಿದೆ.[೪] ಈ ಊರಿನ ಹೆಸರನ್ನು ಗಮನಿಸಿದರೆ ದುರ್ಗ ಎಂಬುದು ಅಂಟಿಕೊಂಡು ಬಂದಿರುವುದು ತಿಳಿಯುತ್ತದೆ. ಇಲ್ಲವೇ ಒಂದು ಕೋಟೆ ಇದ್ದಿರಬಹುದಾದ ಸಂಗತಿ ತಿಳಿಯುತ್ತದೆ.

ಒಟ್ಟಾರೆ ಗದಗವು ಕರ್ತಕ, ಕೃತಪುರ, ಕಲ್‌ದುರ್ಗ, ಗಲದುರ್ಗ, ಗರದುರ್ಗವಾಗಿ ಗದಗ ಎಂಬ ಮಾರ್ಪಾಟು ಆಗಿರುವುದು ತಿಳಿಯುತ್ತದೆ.

**ಲಕ್ಕುಂಡಿ**

ಲಕ್ಕುಂಡಿ ಗ್ರಾಮವು ಗದುಗಿನ ಸಮೀಪದ ಸ್ಥಳವಾಗಿದ್ದು, ಇದು ಪೌರಾಣಿಕವಾಗಿಯೂ ಪ್ರಸಿದ್ಧವಾಗಿದೆ. ಲಕ್ಕುಂಡಿಯನ್ನು ಶ್ರೀರಾಮನಿರ್ಮಿತ ಮಹಾಗ್ರಾಮವೆಂದು ರಾಮಾಯಣದ ಜೊತೆ ಸೇರಿಸಿ ಕ್ರಿ.ಶ.೧೧-೧೨ನೇ ಶತಮಾನದ ಶಾಸನಗಳು ಹೇಳುತ್ತವೆ. ಅಲ್ಲದೆ ಕ್ರಿ.ಶ.೨೦೦೦ವರ್ಷಗಳ ಹಿಂದೆ ಆಡಳಿತ ಮಾಡುತ್ತಿದ್ದ ಶಿಬಿಚಕ್ರವರ್ತಿಯ ರಾಜಧಾನಿಯಾಗಿತ್ತೆಂದು ಭವಿಷ್ಯೋತ್ತರ ಪುರಾಣದಲ್ಲಿ ಹೇಳಲಾಗಿದೆ.

ಸರಸಿಯ ಯೋನಿ ಬಿನ್ನಪನರಿಯಲ್ಕ
ಪುರಾಪತಿ ಲೊಕ್ಕಿಗುಂಡಿ ಎಂಬೆ
ರೆಡು ಮನೆಯ್ದು ತೊರಲ್ ಅಮರಾವತಿ
ಮುಟ್ಟಿದುದೂರ್ದ್ವ ಲೋಕಮಂ ॥

ಲಕ್ಕುಂಡಿಯ ವೈಭವವನ್ನು ಕೇಳಿದ ಇಂದ್ರನು, ಅದನ್ನು ನೋಡಲು ಬಂದು ಲಕ್ಕುಂಡಿ ಮತ್ತು ಅಮರಾವತಿಯನ್ನು ತೂಗಿ ನೋಡಲು, ಅಮರಾವತಿ ಊರ್ದ್ವ ಲೋಕವನ್ನು ಮುಟ್ಟಿತು. ಅಂದರೆ ಲಕ್ಕುಂಡಿಯ ಸಮಾನವಾಗಿ ಅಮರಾವತಿ ತೂಗಲಿಲ್ಲ ಎಂಬುದಾಗಿ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಈ ಗ್ರಾಮವನ್ನು ಶಾಸನಗಳಲ್ಲಿ ಲೊಕ್ಕಿಗುಂಡಿ ಎಂದು ಹೇಳಲಾಗಿದೆ. ಅಲ್ಲದೆ ಇದು ಒಂದು ಅಗ್ರಹಾರ ಎಂದು ತಿಳಿಸಲಾಗಿದೆ. ಬಹುಶಃ ಇದು ಜೈನಯಕ್ಷ ಪದ್ಮಾವತಿ ಮತ್ತು ಲೊಕ್ಕಿಗಿಡದ

ಸಂಬಂಧದಿಂದ ಲೊಕ್ಕಿಗುಂಡಿ ಎಂದು ಆಗಿರಬಹುದು. ಕಲ್ಯಾಣಚಾಳುಕ್ಯ, ಕಲಚುರಿ, ಸೇವುಣ, ಹೊಯ್ಸಳ ದೊರೆಗಳ ಹಲವಾರು ಶಿಲಾಶಾಸನಗಳು ಈ ಗ್ರಾಮದಲ್ಲಿ ದೊರೆತಿವೆ. ಆದ್ದರಿಂದ ಈ ಗ್ರಾಮ ಈ ಎಲ್ಲರ ಆಳ್ವಿಕೆಗೆ ಒಳಪಟ್ಟಿರುವುದು ವೇದ್ಯವಾಗುತ್ತದೆ. ಇದು ಪ್ರಸಿದ್ಧವಾದ ೧೦೦೦ ಮಹಾಜನರನ್ನು ಒಳಗೊಂಡ ಅಗ್ರಹಾರವಾಗಿರುವುದು ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಇದು ಒಂದು ಶಿಕ್ಷಣ ಕೇಂದ್ರವಾಗಿದ್ದು, ಇದನ್ನು "ನೂರೊಂದು ಬಾವಿಗಳ ನೂರೊಂದು ದೇವಾಲಯಗಳ ಗ್ರಾಮ" ಇಂದ್ರನ ಅಮರಾವತಿಯನ್ನು ನಾಚಿಸುವಂತಿತ್ತು. ದಾನಚಿಂತಾಮಣಿಯಾಗಿ ಬೆಳಗಿದ ಅತ್ತಿಮಬ್ಬೆಯ ಕರ್ಮಭೂಮಿ, ಅಜಗಣ್ಣ ಮುಕ್ತಾಯಕ್ಕರಂತಹ ಶರಣರ ಧಾರ್ಮಿಕ ಬೀಡು ಎಂದು ಕರೆಸಿಕೊಂಡಿದೆಯಲ್ಲದೆ, ಹೊಯ್ಸಳ ದೊರೆ ೨ನೇ ವೀರಬಲ್ಲಾಳನ ರಾಜಧಾನಿಯಾಗಿದ್ದುದು ಶಾಸನಗಳಿಂದ ತಿಳಿಯುತ್ತದೆಯಲ್ಲದೆ, ಇದು ಟಂಕಶಾಲೆಯಾಗಿದ್ದು ಇಲ್ಲಿ ಮುದ್ರಿಸಿದ ನಾಣ್ಯಗಳು "ಲೊಕ್ಕಿಗದ್ಯಾಣ" ಎಂಬ ಹೆಸರಿನಿಂದ ಕರೆಯಲಾಗಿದ್ದುದು ತಿಳಿಯುತ್ತದೆ. ಇದು ಕ್ರಿ.ಶ.೯ನೇ ಶತಮಾನದಿಂದಲೂ ಪ್ರಮುಖ ಸ್ಥಳವಾಗಿ, ಹಲವಾರು ಐತಿಹಾಸಿಕ ಏಳುಬೀಳುಗಳನ್ನು ಕಂಡ ಗ್ರಾಮವಾಗಿದ್ದು, ಲೊಕ್ಕಿಗುಂಡಿ, ಲೊಕ್ಕಿಗುಡಿ, ಲಕ್ಕುಂಡಿಯಾಗಿ ಬದಲಾಗಿರುವುದು ತಿಳಿದುಬರುತ್ತದೆ.

**ಮುಳಗುಂದ**

ಮುಳಗುಂದ ಗ್ರಾಮನಾಮವು ಮುಳ+ಗುಂದ ಎಂಬ ಎರಡು ಘಟಕಗಳನ್ನು ಹೊಂದಿವೆ. ಆದ್ದರಿಂದ ಮುಳ್ಳು+ಕುಂದ ಈ ಶಬ್ದಗಳಿಂದ ಮುಳುಗುಂದ ನಿಷ್ಪತ್ತಿಯಾಗಿದೆ ಎಂದೂ, ಅಲ್ಲದೆ ಮುನಿವೃಂದದಿಂದ ಮುಳಗುಂದ ಹುಟ್ಟಿದೆ ಎಂದೂ ಹೇಳುವ ವಾಡಿಕೆಗಳಿವೆ.

ಐತಿಹಾಸಿಕವಾಗಿ ಮುಳುಗುಂದದ ಪ್ರಾಚೀನತೆಯು ಕ್ರಿ.ಶ.೯ನೇ ಶತಮಾನದವರೆಗೂ ಗುರುತಿಸಬಹುದು. ಪೌರಾಣಿಕವಾಗಿ ಹೇಳುವುದಾದರೆ ರಾಷ್ಟ್ರಕೂಟದೊರೆ ಅಮೋಘವರ್ಷ ನೃಪತುಂಗನ ಕ್ರಿ.ಶ.೮೯೯ರ ಶಾಸನವು[೫] ಕೃತಯುಗ, ತ್ರೈತಾಯುಗ, ದ್ವಾಪರಯುಗ ಮತ್ತು ಕಲಿಯುಗ ಹೀಗೆ ಯುಗ ಯುಗಗಳಲ್ಲಿಯೂ ಹೆಸರಾದ ಇದು ಚತುರ್ಯುಗದ ಪಟ್ಟಣ ಎಂದು ಕರೆಯಲಾಗಿದೆ. ಇಲ್ಲಿ ರಾಷ್ಟ್ರಕೂಟರಿಂದ ಹಿಡಿದು ಎಲ್ಲಾ ರಾಜಮನೆತನಗಳ ಶಾಸನಗಳು ನಮಗೆ ದೊರೆಯುತ್ತವೆ. ಇದು ಬೆಳ್ವೊಲ-೩೦೦ರ ಭಾಗವಾಗಿದ್ದು, ಇದನ್ನು ಮುಳುಗುಂದ-೧೨ ಎಂಬ ಉಪವಿಭಾಗದಿಂದ ಗುರುತಿಸಲಾಗಿದೆ. ಇದು ಕೇಂದ್ರ ಸ್ಥಳವಾಗಿದ್ದು ಇದನ್ನು ಮೂಳುಙ್ಗುನ್ದ, ಮುಳ್ಗುನ್ದ, ಮುಳ್ಗುಂದ, ಮುಳುಗುಂದ ಎಂದಾಗಿದೆ. ಇಲ್ಲಿ ನಯಸೇನನೆಂಬ ಮುನಿಯಿದ್ದು ಈತನು 'ಧರ್ಮಾಮೃತ' ಎಂಬ ಕೃತಿಯನ್ನು ರಚಿಸಿದುದಾಗಿ ತಿಳಿದುಬರುತ್ತದೆ.

**ಶಿರಹಟ್ಟಿ**

ಇದರ ಪ್ರಾಚೀನ ಹೆಸರು ಶಿರಹಪುರವಾಗಿದ್ದು, ಇಲ್ಲಿ ಎರಡು ಶಾಸನಗಳು ಮಾತ್ರ ಸಿಗುತ್ತವೆಯಾದರೂ ಅವು ಸ್ಥಳಪುರಾಣವನ್ನು ತಿಳಿಸುವುದಿಲ್ಲ. ಆದ್ದರಿಂದ ಇದರ ಹೆಚ್ಚು ವಿಚಾರಗಳು ತಿಳಿಯುವುದಿಲ್ಲ.

**ಲಕ್ಷ್ಮೇಶ್ವರ**

ಲಕ್ಷ್ಮೇಶ್ವರವು ಪ್ರಾಚೀನ ಕಾಲದಲ್ಲಿ ಪುಲಿಗೆರೆಯೆಂಬ ಹೆಸರಿನಿಂದ ಉಲ್ಲೇಖಿತವಾಗಿದ್ದು, ಶ್ರೀವಿಜಯ ತನ್ನ ಗ್ರಂಥ ಕವಿರಾಜಮಾರ್ಗದಲ್ಲಿ ಗ್ರಾಮದ ಹೆಸರನ್ನು ಹೇಳಿದ್ದು, ತಿರುಳ್ಗನ್ನಡ ಪ್ರದೇಶವಾಗಿತ್ತೆಂದು ಹೇಳುತ್ತಾನೆ. ಅಲ್ಲದೆ ಆದಿಕವಿ ಪಂಪನು ತನ್ನ ಕೃತಿಯನ್ನು ಇಲ್ಲಿಯ ತಿರುಳ್ಗನ್ನಡದಲ್ಲಿ ತನ್ನ ಕಾವ್ಯಗಳನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಈ ನಗರವನ್ನು ಕ್ರಿ.ಶ.೧೨ನೇ ಶತಮಾನದಲ್ಲಿ ಲಕ್ಷ್ಮರಸ ಎಂಬುವನು ಕಟ್ಟಿಸಿದ ಲಕ್ಷ್ಮೇಶ್ವರ ದೇವಸ್ಥಾನದಿಂದಾಗಿ ಈ ಹೆಸರು ಬಂದಿತೆಂದು ಹೇಳಲಾಗಿದೆ. ಇದು ಪುಲಿಗೆರೆ ಮುನ್ನೂರರ ಆಡಳಿತ ಕೇಂದ್ರವಾಗಿತ್ತು. ಹರಿಹರನ ಪುಷ್ಪರಗಳೆಯಲ್ಲಿಯೂ ಸಹ "ಸೋಮಯ್ಯನಂ ಪುಲಿಗೆರೆಗೆ ಕರೆಸಿಕೊಂಡೆ"[೬] ಎಂಬ ಉಲ್ಲೇಖ ದೊರೆಯುತ್ತದೆ. ಇಲ್ಲಿ ಬಾದಾಮಿ ಚಾಲುಕ್ಯರಿಂದ ಪ್ರಾರಂಭವಾಗಿ ವಿಜಯನಗರದ ಅರಸರ ಕಾಲದವರೆಗೂ ಶಾಸನಗಳು ದೊರೆಯುತ್ತವೆ. ಇಲ್ಲಿ ಜೈನ, ಶೈವ, ವೈಷ್ಣವ ಎಲ್ಲ ಧರ್ಮದ ದೇವಾಲಯಗಳಿದ್ದು, ಎಲ್ಲ ಧರ್ಮದ ಶಾಸನಗಳು ಲಭಿಸುತ್ತವೆ. ಈ ಪಟ್ಟಣವನ್ನು ಶಾಸನಗಳಲ್ಲಿ ಪುರಿಕರ, ಪುರಿಕೆರೆ, ಪುಲಗೆರೆ, ಪುರಗೆರೆ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಒಟ್ಟಾರೆ ಈ ನಗರವು ಶಿರಹಟ್ಟಿ ತಾಲೂಕಿನಲ್ಲಿ ದೊಡ್ಡನಗರವಾಗಿದ್ದು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದ ಪಟ್ಟಣವಾಗಿದ್ದು, ಎಲ್ಲಾ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ತಿಳಿದುಬರುತ್ತದೆ.

**ಡಂಬಳ**

ಇದು ಬೌದ್ಧ, ಜೈನ, ವೈಷ್ಣವ, ಶೈವ, ಮುಸ್ಲಿಂ ಎಲ್ಲಾ ಧರ್ಮಗಳ ಗ್ರಾಮ ಈ ಡಂಬಳ. ಇದು ಬಾದಾಮಿ ಚಾಲುಕ್ಯರ ಕಾಲದಿಂದಲೂ ಪ್ರಸಿದ್ಧವಾದ ಗ್ರಾಮವಾಗಿದ್ದುದನ್ನು ಒಂದು ಜನಪದ ಹಾಡು ನಿರೂಪಿಸುತ್ತದೆ.

" ಪುಲಕೇಶಿ ದೊರೆಯಾಳಿ ಕಲಕೆಲ್ಲ ತಿಳಿಯಾಗಿ
ಬಲಕಾಣ ಕೇಳೊಡೆ ಬಸವ॥ ಡಂಬಳದ
ಕಳಸದ ತೇರ ಎಳೆದಾಂವ"

" ಕೆರೆಬತ್ತಿ ಡಂಬಳದ ಮೊರೆಕೇಳಿ ಬಾದಾಮಿ
ಪುಲಕೇಶಿ ಮರುಗ್ಯಾನ ಕರುಣೆ॥ ಸಾರ್‍ಯಾನ

ತೆರಿಗೆ ಜನದಾಗ ಕಡತಾವೊ"[೭]

ಎಂದು ಜನಪದ ಸಾಹಿತ್ಯ ಸಿಗುತ್ತದೆ. ಆದರೆ ಅವರ ಶಾಸನಗಳು ಯಾವವೂ ನಮಗೆ ದೊರೆಯುವುದಿಲ್ಲ.

ಕಲ್ಯಾಣಚಾಲುಕ್ಯರಿಂದ ಮುಂದಿನ ಶಾಸನಗಳು ನಮಗೆ ಲಭಿಸುತ್ತವೆ. ಶಾಸನಗಳಲ್ಲಿ ಈ ಪುರವನ್ನು ಧರ್ಮವೊಳಲೆಂಬ ಹೆಸರಿನಿಂದ ಕರೆಯಲಾಗಿದೆ. ಅಲ್ಲದೆ

"ಆತನಿಂ (ಪೆರ್ಮನೃಪನಿಂ) ಪರೀಕ್ಷ್ಯ ಮಾಡಿರ್ದ
ಮಾಸವಾಡಿ ನಾಡಿಗೆ ಕಟ್ಟಿ ಪಟ್ಟಮುವಿಟ್ಟ
ಬೊಟ್ಟಮಳಟ್ಟ ಕಳಶಮುಮಿರ್ಪರಂತೆ
ಧರ್ಮವೊಳಲೆಂಬ ಮಹಾಪಟ್ಟಣಂ ವಿರಾಜಿ

ಸ್ತುತಿದರ್ಪುದುದರ ಮಹಿಮೆಯಂ ಪೇಳ್ವೆಡೆ" ಎಂದು ಹೊಗಳಲಾಗಿದೆ.[೮] ಇದು ಕರ್ನಾಟಕ ಭೂಮಿಯೆಂಬ ಸ್ತ್ರೀಗೆ ನಡುವಿನ ಶ್ರೇಷ್ಠ ಮುತ್ತಿನ ಹಾರದಂತಿತ್ತೆಂಬುದಾಗಿ ಹೇಳಿದೆ.

ಈ ನಗರವನ್ನು ಶಾಸನಗಳಲ್ಲಿ ಧರ್ಮಪುರ, ಧರ್ಮವೊಳಲು ಎಂಬುದಾಗಿ ಕರೆಯಲಾಗಿದೆ. ಧರ್ಮವೊಳಲು, ಧರ್ಮವೊಳಲ್, ಧರ್ಮಳ್, ಡಂಬೊಳ್, ಡಂಬಳ ಆಗಿದೆ ಎಂದು ಭಾಷಾಶಾಸ್ತ್ರಜ್ಞರ ಅಭಿಪ್ರಾಯ.

**ಮೇವುಂಡಿ**

ಮಾಸವಾಡಿ-೧೪೦ಕ್ಕೆ ಸೇರಿದ ಈ ಭಾಗವನ್ನು ಸೇವುಣ ಮನೆತನವು ಆಳುತ್ತಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಇದು ಉಪರಾಜಧಾನಿಯಾಗಿತ್ತು ಎಂಬುದಾಗಿ ತಿಳಿಯುತ್ತದೆ. ಇದನ್ನು ಶಾಸನಗಳಲ್ಲಿ ಮೇಲ್ಪಿಡಿ, ಮೇಳರೆವೀಡು, ಮೇಳೆವೀಡು ಎಂಬುದಾಗಿ ಕರೆಯಲಾಗಿದೆ. ಇಲ್ಲಿ ಕ್ರಿ.ಶ.೮೬೫ರ ರಾಷ್ಟ್ರಕೂಟದೊರೆ ಅಮೋಘವರ್ಷನಿಂದ ಹೊಯ್ಸಳ, ಸೇವುಣ ಮನೆತನದ ಶಾಸನಗಳು[೯] ಲಭ್ಯವಿರುತ್ತವೆ. ಈ ಗ್ರಾಮವು ರಾಷ್ಟ್ರಕೂಟರ ಕಾಲದಿಂದಲೂ ಪ್ರಸಿದ್ಧಿಯಲ್ಲಿರುವುದು ತಿಳಿಯುತ್ತದೆ. ಮೇಳರೆವೀಡು-ಮೇಳೆವೀಡು-ಮೇಲ್ಪಿಡಿ-ಮೇಲ್ವಿಡಿ-ಮೇವುಂಡಿಯಾಗಿದೆ. ಈ ಮೆಳಿವೀಡುವಿನಿಂದಲೇ ಈ ನಾಡಿಗೆ ಮಾಸವಾಡಿ ಎಂಬ ಹೆಸರು ಬಂದಿರಲೂಬಹುದು. ಬಸವಣ್ಣನವರು ಬನವಾಸಿ ನಾಡಿನ ಮಹಾಮಂಡಳೇಶ್ವರರಾದ ಸಂದರ್ಭದಲ್ಲಿ ಕಲ್ಯಾಣಕ್ಕೆ ಹೋಗುವಾಗ ಈ ಮೆಳವಿಡಿ ಉಪರಾಜಧಾನಿಗೆ ಬಂದು ತಾವು ಪಯಣಿಸುತ್ತಿದ್ದ ಅಶ್ವವನ್ನು ಬದಲಿಸಿಕೊಂಡು ತಮ್ಮ ಪ್ರಯಾಣ ಮುಂದುವರೆಸಿದರೆಂದು ಬಿ. ಪುಟ್ಟಸ್ವಾಮಯ್ಯ ತಮ್ಮ ರಾಜ್ಯಾಪಾಲ ಕಾದಂಬರಿಯಲ್ಲಿ ಉಲ್ಲೇಖಿಸಿದ್ದಾರೆ.

**ಡೋಣಿ**

ಕಪ್ಪತ್ತಗಿರಿಯ ಅಂಚಿನಲ್ಲಿರುವ ಇಂದಿನ ಡೋಣಿ ಪ್ರಾಚೀನ ಶಾಸನಗಳಲ್ಲಿ ದ್ರೋಣಪುರಿ, ದ್ರೋಣಾಮುಖವೆಂದು ಕರೆಯಲಾಗಿದೆ. ಪೌರಾಣಿಕವಾಗಿ ಕ್ರಿ.ಪೂ.೨೦೦೦ ವರ್ಷಗಳ ಹಿಂದೆ ಲಕ್ಕುಂಡಿಯನ್ನು ಶಿಬಿಚಕ್ರವರ್ತಿ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಅವನಿಗೆ ಈ ಗ್ರಾಮವು ಸಂಬಂಧಿಸಿತ್ತೆಂದು ಭವಿಷ್ಯೋತ್ತರ ಪುರಾಣದಲ್ಲಿ ಹೇಳಲಾಗಿದೆ.

ಈ ಗ್ರಾಮವು ೬ನೇ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಯು ತನ್ನ ರಾಜ್ಯಾಡಳಿತ ಪ್ರಾರಂಭಿಸಿದ್ದು ಡೋಣಿಯಿಂದ ಎಂದು ಶಾಸನಗಳು ಹೇಳುತ್ತವೆ. ಅಲ್ಲದೇ ಜೈನ, ಶೈವ, ವೈಷ್ಣವ ಧರ್ಮಗಳು ಇಲ್ಲಿ ನೆಲೆಸಿದ್ದವೆಂದು ಹೇಳುತ್ತವೆ. ಹದಿನೆಂಟು ಅಗ್ರಹಾರಗಳಲ್ಲಿ ಧರ್ಮಪುರವೂ ಒಂದು ಎಂದು ಉಲ್ಲೇಖಿಸಲಾಗಿದೆ.[೧೦೦]

**ಪೇಠಾಆಲೂರು**

ಇದು ಪ್ರಾಚೀನ ಗ್ರಾಮವಾಗಿದ್ದು ಇದನ್ನು ಮಾಳದಾಲೂರು ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಇದಕ್ಕೆ ಕಾರಣ ಈ ಗ್ರಾಮದ ಪಶ್ಚಿಮಕ್ಕೆ ಹರಿಯುವ ಹಳ್ಳದ ನೀರು ಉಪ್ಪಾಗಿದ್ದು, ಆಗ ಈ ಗ್ರಾಮದಲ್ಲಿ ಹಳ್ಳದ ನೀರಿನಿಂದ ಉಪ್ಪನ್ನು ತಯಾರಿಸುತ್ತಿದ್ದು, ಉಪ್ಪಿನ ಮಾಳಗಳು ಇದ್ದುದರಿಂದ ಇದನ್ನು ಮಾಳದಾಲೂರು ಎಂದು ಕರೆಯಲಾಯಿತೆಂದು ಹೇಳಲಾಗಿದೆ.[೧೦೧] ಮುಂದೆ ಇದನ್ನು ಪೇಠವಾಗಿ ಮಾಡಲಾಗಿ, ಅಲ್ಲದೆ ಇಲ್ಲಿ ಆಲೂರು ಎಂಬ ಹೆಸರಿನ ಕೆಲವು ಗ್ರಾಮಗಳಿದ್ದುದರಿಂದ ಈ ಊರನ್ನು ಪ್ರತ್ಯೇಕಿಸಲೋಸುಗವಾಗಿ ಪೇಠಾಆಲೂರು ಎಂಬುದಾಗಿ ಕರೆಯಲಾಗಿದೆ. ಇಲ್ಲಿ ಕಲ್ಯಾಣ ಚಾಲುಕ್ಯರ ಶಾಸನಗಳು ದೊರೆತಿದ್ದು ಆಗ ಬಹಳ ಪ್ರಸಿದ್ಧಿ ಪಡೆದಿರುವುದು ತಿಳಿಯುತ್ತದೆ.

**ನಾಗರಹಳ್ಳಿ**

ಈ ಗ್ರಾಮವು ತುಂಗಭದ್ರಾ ನದಿಯ ದಂಡೆಯಲ್ಲಿದ್ದು ಅದನ್ನು ಶಾಸನಗಳಲ್ಲಿ ಅರಗಿಲ್ವಾಡ ಎಂದು ಕರೆಯಲಾಗಿದೆ.

**ಶಿರೂರು**

ಈ ಗ್ರಾಮದಲ್ಲಿ ಇರುವ ಶಾಸನಗಳಲ್ಲಿ ಸಿರಿವೂರ ಎಂಬ ಉಲ್ಲೇಖ ದೊರೆಯುತ್ತದೆ. ಇಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯ ಶಾಸನವಿದ್ದು ಭೂದಾನದ ವಿಷಯವನ್ನು ತಿಳಿಸುತ್ತದೆ.[೧೦೨]

**ಬರದೂರು**

ಬರದೂರು ಶಾಸನಗಳಲ್ಲಿ ಭರತಪುರ, ಭರತಾಪುರ ಎಂದು ಕರೆಯಲಾಗಿದ್ದು ಇಲ್ಲಿಯ ಈಶ್ವರ ದೇವಾಲಯವನ್ನು ೨೦೦ ಮಹಾಜನರಿಂದ ಭೂಮಿಯನ್ನು ಕೊಂಡು ಕ್ರಿ.ಶ.೧೦೩೨ರಲ್ಲಿ

ದಾನಮಾಡಿದ್ದನ್ನು ತಿಳಿಸುತ್ತದೆ.[೧೦೩] ಮುಂದೆ ಆಡುಮಾತಿನಲ್ಲಿ ಭರತಪುರ ಬರದೂರಾಗಿ ಪರಿವರ್ತನೆಯಾಗಿರುವುದು ತಿಳಿಯುತ್ತದೆ.

**ಚಿಕ್ಕವಡ್ಡಟ್ಟಿ**

ಈಗ ಇರುವ ಚಿಕ್ಕವಡ್ಡಟ್ಟಿ ಪ್ರಾಚೀನ ಕಾಲದಲ್ಲ ಒಡವಡ್ಡಿಯೆಂಬ ಹೆಸರಿನಿಂದ ಕರೆಸಿಕೊಳ್ಳುತ್ತಿತ್ತು. ಇದು ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಸುರುಕ-೧೨, ಅವಗವಾಡಿ-೧೨ರ ರಾಜಧಾನಿಯಾಗಿದ್ದು, ಇಲ್ಲಿ ಕಕ್ಕರಸನು ಆಳುತ್ತಿದ್ದಾಗ ಕಲಿದೇವರಿಗೆ ಭೂದಾನ ಬಿಟ್ಟ ವಿಚಾರವು ಶಾಸನಗಳಲ್ಲಿ ತಿಳಿಯುತ್ತದೆ. ಕಾಲಾನಂತರ ಒಡ್ಡವಡ್ಡಿ ವಡ್ಡಟ್ಟಿಯಾಗಿ, ವಡ್ಡಟ್ಟಿಯೆಂಬ ಹೆಸರಿನ ಬೇರೆ ಊರು ಇರುವುದರಿಂದ ಚಿಕ್ಕವಡ್ಡಟ್ಟಿಯಾಗಿ ಬದಲಾಗಿರುವುದು ತಿಳಿಯುತ್ತದೆ.[೧೦೪]

**ಬಿದರಹಳ್ಳಿ**

ಹಿಂದಿನ ಬಿರ್ದುವಳ್ಳಿಯನ್ನು ಇಂದು ಬಿದರಹಳ್ಳಿ ಎಂದು ಕರೆಯುತ್ತಾರೆ. ಈ ಗ್ರಾಮವನ್ನು ಸ್ಕಂದ ಪುರಾಣದಲ್ಲಿ 'ವೇಣುಪುರಿ' ಎಂದು ಕರೆಯಲಾಗಿದೆ. ಇದು ತುಂಗಭದ್ರಾ ನದಿಯ ದಂಡೆಯಲ್ಲಿದ್ದು ಶೈವ, ವೈಷ್ಣವ ಧರ್ಮಗಳ ಕೇಂದ್ರವಾಗಿದ್ದುದು ತಿಳಿಯುತ್ತದೆ. ರೇಣುಕೆಯು ಪಾತಾಳದಲ್ಲಿರುವಾಗ ಅವಳನ್ನು ಕಾಣುವ ಅಪೇಕ್ಷೆಯಿಂದ ಪರಶುರಾಮರು ಸ್ಮರಣೆ ಮಾಡಲು, ನದಿತೀರದ ಬಿದಿರುಮೆಳೆಯಿಂದ ಅವಿರ್ಭವಿಸಿ ಬಂದಿದ್ದರಿಂದ ಬಿದರಳ್ಳೆಮ್ಮನೆಂದು ಆ ಊರಿಗೆ ವೇಣುಪುರಿ, ಬಿದುರಳ್ಳಿ ಎಂಬ ಹೆಸರಿನಿಂದ ಪ್ರಸಿದ್ಧಿಯಾಯಿತೆಂದು ಪೌರಾಣಿಕ ಕಥೆ ಇದೆ.

"ವಾರಣಾಸೀಯಂ ಬಲು ವೇಣುಕಾಪುರಿ
ಶ್ರೀ ವಿಶ್ವನಾಥ ಬಲು ಸೋಮನಾಥ
ಗಂಗ್ಯವ ಸಾಕ್ಷಾತ್ ವರ ತುಂಗಾಭದ್ರಾ
ಮುಕ್ತಿ ಪ್ರದೋೀಯಂ ಬಲು ತೀರ್ಥರಾಜ"

ಎಂದು ಸೋಮೇಶ್ವರನಿಗೆ ಕಾಶಿ ವಿಶ್ವನಾಥನು ಸ್ನೇಹಿತನಾಗಿದ್ದನೆಂಬ ನಂಬಿಕೆಯಿಂದ ಈ ಗ್ರಾಮ ದಕ್ಷಿಣಕಾಶಿ ಎಂದು ಪುರಾಣದಲ್ಲಿ ಹೇಳಿದೆ. ನಂತರ ಕ್ರಿ.ಶ.೧೭೮೦ರ ವೇಳೆಯಲ್ಲಿ ಈ ಊರಿಗೆ ತಿಗುಲಗಾಚಾಯ ಸಮುದ್ರ ಎಂದು ನಾಮಕರಣ ಮಾಡಿದ ಉಲ್ಲೇಖ ದೊರೆಯುತ್ತದೆ.[೭]

**ತಾಮ್ರಗುಂಡಿ**

ಈ ಗ್ರಾಮದಲ್ಲಿ ದೊರೆಯುವ ಕ್ರಿ.ಶ.೧೦೪೫ರ ಒಂದನೆಯ ಸೋಮೇಶ್ವರನ ಶಾಸನದಲ್ಲಿ ಕಿಸಗುಂಡಿ ಎಂದು ಕರೆಯಲಾಗಿದೆ.[೧೦೫] ಮಾಧವರಸನು ಈ ಕಿಸುಗುಂಡಿ ಅಗ್ರಹಾರವನ್ನು ಆಳುತ್ತಿದ್ದಾಗ ದಾಸೀಮಯ್ಯ ಎಂಬುವನು ಬಿಟ್ಟ ದಾನದ ಬಗ್ಗೆ ತಿಳಿಸುತ್ತದೆ. ಇಲ್ಲಿ ತಾಮ್ರದ ನಿಕ್ಷೇಪವನ್ನು ತೆಗೆಯುತ್ತಿದ್ದರಿಂದ ಮುಂದೆ ಈ ಹೆಸರಿನಲ್ಲಿ ಕರೆಯಲಾಗಿದೆ.

**ಮುಂಡರಗಿ**

ಮುಂಡರಗಿ ಗ್ರಾಮನಾಮ ಯಾವುದೇ ಶಾಸನಗಳಲ್ಲಿ ಕಂಡುಬರುವುದಿಲ್ಲ. ಹಿರೇವಡ್ಡಟ್ಟಿಯ ಶಾಸನದಲ್ಲಿ ಇದನ್ನು ಮೆಂಡರೆ ಎಂದು ಕರೆಯಲಾಗಿದೆ. ಇದು ಹೆಚ್ಚಿನ ಇತಿಹಾಸವನ್ನು ಹೊಂದಿರುವ ನಗರವಾಗಿ ಕಾಣುವುದಿಲ್ಲ. ಸುಮಾರು ೧೫–೧೬ನೇ ಶತಮಾನದಿಂದ ಈಚೆಗೆ ಬೆಳೆದ ಗ್ರಾಮವಾಗಿದ್ದು, ಇದನ್ನು ಮೃಡಗಿರಿ ಎಂದು ಮೊದಲು ಕರೆಯುತ್ತಿದ್ದರು. ಇದಕ್ಕೆ ಕಾರಣ ಇಲ್ಲಿ ಇರುವ ಮೃಡನ (ಶಿವನ) ದೇವಾಲಯದಿಂದ ಮೃಡನಗಿರಿ ಮುಂಡರಗಿಯಾಗಿ ಬೆಳೆದಿರುವುದು ತಿಳಿದುಬರುತ್ತದೆ. ಆದರೆ ಜನಪದರ ದೃಷ್ಟಿಯಲ್ಲಿ ಮುಂಡರಗಿ ಬೋಳಾದ ಗುಡ್ಡದಿಂದ ಮಂಡರಗಿಯಾಗಿದ್ದು ಬರಬರುತ್ತ ಮಂಡರಗಿ ಮುಂಡರಗಿಯಾಗಿರಬಹುದೆಂದು ಹೇಳಲಾಗಿತ್ತದೆ. ಇನ್ನು ಗ್ರಾಮನಾಮತಜ್ಞರ ಅಭಿಮತದಂತೆ ಮುಂಡರಗಿ ಇದು ಜಾನಾಂಗೀಯ ವಾಚಕವಾಗಿದ್ದು ಮುಂಡರೆಂಬ ಮೂಲನಿವಾಸಿಗಳಿಂದುಂಟಾಗಿರಬೇಕು. ಮೂಂಡ+ರ್+ಗೈ=ಮುಂಡರಗೈ=ಮುಂಡರಗಿ ಎಂಬುದು ಉಂಟಾಗಿದೆ ಎನ್ನುತ್ತಾರೆ. ಆದರೆ ಭೀಮರಾವನ ಸ್ವತಂತ್ರ ಹೋರಾಟದಿಂದ ಇದು ಪ್ರಸಿದ್ಧಿಗೆ ಬಂತೆಂದು ಹೇಳಬಹುದು.

**ರಣತೂರು**

ಈ ಗ್ರಾಮವು ಶಿರಹಟ್ಟಿ ತಾಲೂಕಿನಲ್ಲಿದೆ. ಇದು ರಣರಂಗದಲ್ಲಿ ಕಟ್ಟಲ್ಪಟ್ಟ ಊರೆಂದು ಹೇಳುತ್ತಾರೆ. ಬಿಜಾಪುರ ಸುಲ್ತಾನನ ಸೇನಾಪತಿ ರಣದುಲ್ಲಾಖಾನನು ಇದನ್ನು ತನ್ನ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದರಿಂದ ಇದಕ್ಕೆ ರಣತೂರು ಎಂದು ಹೆಸರಾಯಿತು ಎಂದು ಹೇಳಲಾಗುತ್ತಿದೆ. ಆದರೆ ಇದಕ್ಕೆ ಪುಷ್ಠಿಕೊಡುವ ಯಾವುದೇ ಶಾಸನಗಳು ಲಭ್ಯವಿರುವುದಿಲ್ಲ.

**ಕಣವಿ**

ಕಣೆಯಹಳ್ಳಿ ಎಂದು ಶಾಸನಗಳಲ್ಲಿ ಉಕ್ತವಾಗಿರುವ ಈ ಗ್ರಾಮವು ಇಂದು ಕಣವಿ ಎಂಬ ಹೆಸರಿನಿಂದ ಕರೆಯಲಾಗುತ್ತಿದೆ. ಕಣಿ, ಕಣೆವೂರ, ಕಣಿಯ, ಎಂದು ಕೆರೆಯಲಾಗುತ್ತದೆ.[೧೦೬] ನೈಸರ್ಗಿಕವಾಗಿ ಇಳಿಜಾರಾದ ಕಣಿವೆಯಂತಿರುವ ತಗ್ಗುಪ್ರದೇಶದಲ್ಲಿ ಇರುವುದರಿಂದ ಇದನ್ನು ಈ ಹೆಸರಿನಿಂದ ಕರೆಯಲಾಗುತ್ತದೆ.

**ಎಳವತ್ತಿ**

ಇದನ್ನು ಶಾಸನಗಳಲ್ಲಿ ಎಳವತ್ತಿ, ಯಮಳ್ತವೂರ ಎಂಬುದಾಗಿ ಕರೆಯಲಾಗಿದೆ. ಇದು ಕಾಲಕ್ರಮೇಣ ಯಮಳ್ತವೂರ, ಯಮಳತ್ತ, ಯಳವತ್ತ – ಯಳವತ್ತಿಯಾಗಿ ಮಾರ್ಪಾಡಾಗಿದೆ.

**ಮಾಗಡಿ**

ಈ ಗ್ರಾಮವು ಶಿರಹಟ್ಟಿಯಿಂದ ೬–೭ ಕಿ.ಮೀ. ದೂರವಿದ್ದು, ಅಲ್ಲಿ ಹಳೆಯ ಒಂದು ಉಡಚಮ್ಮ ದೇವಿಯಗುಡಿಯಿದ್ದು, ಇದಕ್ಕೆ ಹಿಂದೆ ಮಹಾಗುಡಿ ಎಂದು ಕರೆಯುತ್ತಿದ್ದುದು ಇದೆ. ಮುಂದೆ ಮಹಾಗುಡಿ, ಮಾಗುಡಿ, ಮಾಗಡಿಯಾಗಿದೆ ಎಂದು ಹೇಳುವ ಐತಿಹ್ಯವಿದೆ. ಆದರೆ ಇದಕ್ಕೆ ಶಾಸನಗಳ ಯಾವುದೇ ಆಧಾರಗಳಿಲ್ಲ.

**ಹೊಸೂರು**

ಪೊಸವೂರು ಎಂದು ಇದನ್ನು ಶಾಸನಗಳಲ್ಲಿ ಕರೆಯಲಾಗಿದೆ. ಹಳೆಗನ್ನಡ ಪಕಾರಕ್ಕೆ ಹೊಸಗನ್ನಡದಲ್ಲಿ ಹಕಾರ ಆದ್ಯಹಾರವಾಗಿ ಪೊಸವೂರು ಹೊಸವೂರಾಗಿ ಮಾರ್ಪಟ್ಟು ಮುಂದೆ ಹೊಸೂರಾಗಿದೆ.

**ಎಲೆ ಹೊಸೂರು**

ಗದಗ ಜಿಲ್ಲೆಯಲ್ಲಿ ಹೊಸೂರು ಎಂಬ ಗ್ರಾಮ ಇರುವುದರಿಂದ ಅದೇ ಹೆಸರಿನ ಇನ್ನೊಂದು ಊರನ್ನು ಪ್ರತ್ಯೇಕಿಸಲು ಮತ್ತು ಈ ಗ್ರಾಮದ ಸುತ್ತಮುತ್ತ ಎಲೆ ಬಳ್ಳಿಯ ತೋಟಗಳನ್ನು ಹೊಂದಿರುವುದರಿಂದ ಇದನ್ನು ಸಸ್ಯವಾಚಕವಾಗಿ ಎಲೆಹೊಸೂರು ಎಂದು ಕರೆಯಲಾಗಿದೆ.[೧೦೭]

**ಹರ್ತಿ**

ಈ ಗ್ರಾಮದ ಹೆಸರೂ ಕೂಡ ಸಸ್ಯವಾಚಕವಾಗಿದ್ದು ಹರತಿ > ಹರ್ತಿ> ಹತ್ತಿ ಎಂಬ ರೂಪಗಳು ಶಾಸನದಲ್ಲಿ ದೊರೆಯುತ್ತವೆ.

**ಕುರ್ತಕೋಟಿ**

ಈ ಗ್ರಾಮವನ್ನು ಶಾಸನಗಳಲ್ಲಿ ಕುರ್ತಕುಂಟೆ, ಕುರಿತಕೋಂಟೆ, ಕುರ್ತಕೋಟಿ ಎಂಬ ಹೆಸರುಗಳಿಂದ ಕರೆಯಲಾಗಿದೆ.[೧೦೮]

**ಕಲ್ಲೂರು**

ಶಾಸನಗಳಲ್ಲಿ ಇದನ್ನು ಕಲ್ಲೂರು, ಕಲ್ಲಾಪುರ ಎಂದು ಕರೆಯಲಾಗಿದೆ.

**ಅಸುಂಡಿ**

ಅಸುಂಡಿಯನ್ನು ಶಾಸನಗಳಲ್ಲಿ ಪಸವುಂಡಿ, ಎಲೆಪಸುಂಡಿ ಎಂದು ಕರೆಯಲಾಗಿದೆ

**೪.೪. ಲಿಪಿಕಾರರು ಹಾಗೂ ರೂವಾರಿಗಳು.**

ಒಂದು ಶಾಸನ ರಚನೆಯಾಗಬೇಕಾದರೆ ಕವಿ, ಲಿಪಿಕಾರ ಮತ್ತು ರೂವಾರಿಗಳು ಬಹಳ ಮುಖ್ಯ ಕನ್ನಡದ ಬಹಳಷ್ಟು ಕವಿಗಳು ಮೊದಲಿಗೆ ಶಾಸನ ಕವಿಗಳಾಗಿ ನಂತರ ಬೃಹತ್ ಕಾವ್ಯಗಳನ್ನು ರಚಿಸಿದ್ದಾರೆ. ಉದಾಹರಣೆಗೆ ರನ್ನನು ಲಕ್ಕುಂಡಿಯ ಅತ್ತಿಮಬ್ಬೆಯ ಶಾಸನವನ್ನು ರಚಿಸಿದ್ದಾನೆ. ಇದಕ್ಕೆ

ಸಾಕ್ಷಿಯಾಗಿ ಈ ಶಾಸನದಲ್ಲಿರುವ ಎರಡು ಪದ್ಯಗಳನ್ನು ಅಜಿತಪುರಾಣದಲ್ಲಿ ಆತನು ಹೇಳಿರುವುದನ್ನು ನೋಡಬಹುದು. ಅಲ್ಲದೇ ಜನ್ನನು ಕಾವ್ಯಗಳನ್ನು ರಚಿಸುವ ಮೊದಲು ಅಮೃತಾಪುರ ಮತ್ತು ತರೀಕೆರೆ ಶಾಸನಗಳನ್ನು ರಚಿಸಿರುವುದನ್ನು ಗಮನಿಸಬಹುದು. ಕವಿಯಷ್ಟೆ ರೂವಾರಿಯು ಮುಖ್ಯ. ಈತನು ಕವಿಯು ರಚಿಸಿದ ವಿಷಯವನ್ನು ಕಲ್ಲಿನ ಮೇಲೆ ಬರೆದು ಲಿಪಿಕಾರನಿಗೆ ಕಂಡರಿಸಲು ಸಹಾಯ ಮಾಡಬೇಕಾಗಿತ್ತು. ಅಕ್ಷರಗಳ ಮಾರ್ಪಾಡಿಗೆ ಇವನೇ ಪ್ರಮುಖ ಕಾರಣ. ಇವನು ಬರೆದಂತೆ ಲಿಪಿಕಾರನು ಅಕ್ಷರಗಳನ್ನು ಕಂಡರಿಸುತ್ತಿದ್ದನು. ಕರ್ನಾಟಕದ ಶಾಸನ ಕವಿಗಳನ್ನು ಕುರಿತು ಹೇಳುವುದು ಬಹಳ ಕಷ್ಟದಾಯಕವಾದ ಕೆಲಸ. ಏಕೆಂದರೆ ನಮ್ಮ ಶಾಸನಗಳನ್ನು ರೂಪಿಸಿದ ಯಾವುದೇ ಲಿಪಿಕಾರರಾಗಲಿ, ರೂವಾರಿಗಳಾಗಲಿ ತಮ್ಮ ಹೆಸರನ್ನು ನೇರವಾಗಿ ಹೇಳಿಲ್ಲ. ಅಲ್ಲದೇ ತಮ್ಮ ಬಗ್ಗೆ ಹೆಚ್ಚು ಹೇಳಿಕೊಳ್ಳುವ ಬಗ್ಗೆಯೂ ಅವರು ಅಷ್ಟೊಂದು ತಲೆಕೆಡಿಸಿಕೊಂಡಿಲ್ಲ. ಅಲ್ಲದೇ ಶಾಸನಗಳ ವಿಷಯ ಕಡಿಮೆ ಇದ್ದು, ಅಲ್ಲಿ ತಮ್ಮ ಬಗ್ಗೆ ಹೇಳಿಕೊಳ್ಳಲು ಅವಕಾಶ, ಸ್ಥಳ ಇಲ್ಲದ ಕಾರಣವೂ ಇರಬಹುದು. ದಕ್ಷಿಣ ಗದಗು ಜಿಲ್ಲೆಯ ಭಾಗಗಳಾದ ಪ್ರದೇಶಗಳು ಕುಂತಳ ದೇಶದಲ್ಲಿ ಬೆಳ್ವೊಲನಾಡು, ಪುಲಿಗೇರಿನಾಡು, ಮಾಸವಾಡಿನಾಡು, ಎಂದು ಪ್ರಸಿದ್ಧಿ ಪಡೆದಿದ್ದವು. ಬೆಳ್ವೊಲಕ್ಕೆ ಅಣ್ಣಿಗೇರಿ, ಪುಲಿಗೆರೆಗೆ ಲಕ್ಷ್ಮೇಶ್ವರ, ಮಾಸವಾಡಿಗೆ ಮೆಳೆವೀಡು (ಮೇವುಂಡಿ) ರಾಜಧಾನಿಗಳಾಗಿರುವುದು ಶಾಸನಗಳಲ್ಲಿ ತಿಳಿದುಬರುತ್ತದೆ. ಈ ನಾಡಿನಲ್ಲಿ ಕ್ರಿ.ಶ.೭ ನೇ ಶತಮಾನದಿಂದಲೂ ಶಾಸನಗಳು ದೊರೆಯುತ್ತವೆ. ಬರೆಸಿರುವ ಉಲ್ಲೇಖಗಳು ಇವೆ. ಈ ನಾಡಿನಲ್ಲಿ ನೂರಾರು ಶಾಸನಗಳು ಲಭ್ಯವಾಗಿವೆಯಾದರೂ ಈ ಶಾಸನಗಳನ್ನು ಬರೆದ ಕವಿಗಳ, ಲಿಪಿಕಾರರ ಹಾಗೂ ರೂವಾರಿಗಳ ವಿಚಾರಗಳು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಬಹುಸಂಖ್ಯೆಯ ಶಾಸನಗಳಲ್ಲಿ ತಮ್ಮ ಹೆಸರನ್ನೇ ಹೇಳಿಕೊಂಡಿಲ್ಲ. ಹೇಳಿಕೊಂಡಿದ್ದರೂ ಅವುಗಳ ಸಂಖ್ಯೆ ತೀರವಿರಳ. ಕ್ರಿ.ಶ.೯ನೇ ಶತಮಾನದಿಂದ ಈಚೆಗೆ ಕವಿಗಳು, ಲಿಪಿಕಾರರು ಹಾಗೂ ರೂವಾರಿಗಳು ತಮ್ಮ ಹೆಸರುಗಳನ್ನು ಹೇಳಿಕೊಳ್ಳಲು ಪ್ರಾರಂಭಿಸಿರುವುದು ಶಾಸನಗಳನ್ನು ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ.

ಮೊದಮೊದಲಿಗೆ ಲಿಪಿಕಾರರು ತಮ್ಮ ಬಗ್ಗೆ ಕುರಿತು ಹೆಚ್ಚಿನ ವಿವರಗಳನ್ನು ಹೇಳದೆ, ಕೇವಲ ತಮ್ಮ ಹೆಸರುಗಳನ್ನು ಮಾತ್ರ ಹೇಳಿರುವುದು ಕಂಡು ಬರುತ್ತದೆ.

ಕ್ರಿ.ಶ.೮೬೫ರ ಮೇವುಂಡಿಯ ಒಂದನೇ ಅಮೋಘವರ್ಷನ ಕಾಲದ ವೀರಗಲ್ಲಿನಲ್ಲಿ "ಪುರಿಗೆರೆಯಿಂ ಬಂದ ಪೊಲೆಯಣ್ಣನ ಶಿಲಾಕರ್ಮ್ಮ" [೧೯] ಎಂದು ಹೇಳಿದೆ. ಇಲ್ಲಿ ಆ ವೀರಗಲ್ಲನ್ನು ಬರೆದ ಪೊಲೆಯಣ್ಣನು ಪುಲಗೆರೆಯಿಂದ ಬಂದುದಾಗಿ ಹೇಳಿದ್ದಾನೆ. ಆದ್ದರಿಂದ ಈ ಶಾಸನದ ರೂವಾರಿಗಳು, ಲಿಪಿಕಾರರು ಹುಟ್ಟಿದ ಊರಿನವರಲ್ಲದಿದ್ದರೂ ಪರ ಊರಿನವರು ಆಗಿರಬಹುದಾಗಿತ್ತು.

ಅಲ್ಲದೇ ಚೆನ್ನಾಗಿ ಬರವಣಿಗೆಯನ್ನು ಬಲ್ಲಾತನನ್ನು ಕರೆದುಕೊಂಡು ಬಂದು ಶಾಸನಗಳನ್ನು ಬರೆಸುತ್ತಿದ್ದುದು ವೇದ್ಯವಾಗುತ್ತದೆ.

ನೀಲಗುಂದದ ಕ್ರಿ.ಶ.೮೬೬ರ ಒಂದನೇ ಅಮೋಘವರ್ಷನ ಶಾಸನದಲ್ಲಿ ". . . . ಭಟ್ಟಾರ ಲಿಖಿತಂ ಕಲ್ಲಮ ನಾಗಮುದ್ದನ . . . ಎಂದು ಇದೆ.[೧೧೦] ನಾಗಮುದ್ದ ಯಾವ ಕೆಲಸ ನಿರ್ವಹಿಸಿದ ಎಂಬುದು ಅಸ್ಪಷ್ಟ. ಆದರೆ ಲಿಪಿಕಾರ ಭಟ್ಟರ ಎಂದು ಅಷ್ಟೆ ಇದೆ. ಶಾಸನ ತ್ರುಟಿತವಾಗಿದ್ದು, ಅವನ ಹೆಸರು ಪೂರ್ಣ ದೊರೆಯುವುದಿಲ್ಲವಾದ್ದರಿಂದ ಇವರ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

ಕ್ರಿ.ಶ.೮೬೭-೮೬೮ರ ಒಂದನೇ ಅಮೋಘವರ್ಷನ ಕಾಲಕ್ಕೆ ಸೇರಿದ ಸೊರಟೂರಿನ ಶಾಸನದಲ್ಲಿ "ಶ್ರೀ ಚನ್ದ್ರಾದಿತ್ಯನ ಶಿಲ್ಪಿ ಗೋಪಮ್ಮನ್"[೧೧೧] ಎಂದು ಹೇಳಿದೆ. ಚನ್ದ್ರಾದಿತ್ಯ ಯಾರು? ಎಂಬುದು ಅಸ್ಪಷ್ಟ. ಆದರೂ ರಾಜರ ಆಸ್ಥಾನದಲ್ಲಿ ಶಿಲ್ಪಿಗಳು ಇರಬಹುದು. ಆದ್ದರಿಂದ ತಮ್ಮ ಅರಸನ ಹೆಸರನ್ನು ಹೇಳಿ ಆತನ ಆಸ್ಥಾನದವ ತಾನೆಂದು ಹೇಳಿರಲುಬಹುದು.

ಚಿಂಚಲಿಯ ಕ್ರಿ.ಶ.೮೭೧ರ ಶಾಸನವೊಂದು ಒಂದನೇ ಅಮೋಘವರ್ಷನ ಕಾಲದ್ದೇ ಆಗಿದ್ದು, ಇದರಲ್ಲಿ "ಪರಮೇಶ್ವರಭಟ್ಟರಲಿಖಿತಂ"[೧೧೨] ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಇದನ್ನು ಬರೆದ ಲಿಪಿಕಾರ ಪರಮೇಶ್ವರಭಟ್ಟರು ಎಂದು ಹೇಳಬಹುದು. ನೀಲಗುಂದದ ಶಾಸನದಲ್ಲಿ ಭಟ್ಟರ ಎಂದು ಮಾತ್ರ ದೊರೆಯುತ್ತದೆ. ಅದನ್ನು ರಚಿಸಿದವನು ಈ ಪರಮೇಶ್ವರಭಟ್ಟರೇ ಇರಬಹುದು. ಏಕೆಂದರೆ ನೀಲಗುಂದ, ಚಿಂಚಲಿ ಎರಡೂ ಅಕ್ಕಪಕ್ಕದ ಗ್ರಾಮಗಳಾಗಿದ್ದು, ಅಲ್ಲಿಯ ವ್ಯಕ್ತಿಯೇ ಈತನಾಗಿರಲೂಬಹುದಾದ್ದರಿಂದ ಆತನೇ ರಚಿಸಿರಬಹುದಾಗಿ ಹೇಳಬಹುದು.

ಕ್ರಿ.ಶ.೮೯೭ರ ಮೇವುಂಡಿಯ ಶಾಸನ ಎರಡನೇ ಕೃಷ್ಣನ ಕಾಲದ್ದಾಗಿದ್ದು, ಅದರ ಕೊನೆಯ ಸಾಲಿನಲ್ಲಿ "ಮಾಕಿಮಯ್ಯನಾಯಕಂಬರೆದಂ"[೧೧೩] ಎಂದು ಹೇಳಿರುತ್ತದೆ. ತನ್ನ ಬಗ್ಗೆ ಹೆಚ್ಚು ವಿವರಗಳನ್ನು ಹೇಳಿಲ್ಲ. ಶಾಸನವನ್ನು ಬರೆದವನು ಈತ ಎಂಬುದಾಗಿ ಹೇಳಿರುವುದಷ್ಟೆ.

ನಾಗಾವಿಯ ಕ್ರಿ.ಶ.೯೬೯ರ ಕೊಟ್ಟಿಗದೇವನ ಶಾಸನದಲ್ಲಿ "ಮುನ್ನೀರ್ಬ್ಬಳ ಸಿರೆ ಧರಣಿಯೊಳಿನ್ನುಂ ಮಾಧುರ್ಯ್ಯ ಸುಕರ ಚಾತುರ್ಯ್ಯ ಗುಣ ಪ್ರೋನ್ನತರಿಲ್ಲೆನೆ ಸಾಸನಮನ್ನಿದ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ"[೧೧೪] ಎಂದು ತನ್ನ ಬಗ್ಗೆ ಸಾಮಿಯಣ್ಣ ಸ್ವಲ್ಪ ಹೇಳಿಕೊಂಡಿದ್ದಾನೆ. ಮೊದಲು ಬಳಸಿಕೊಂಡಿದ್ದಕ್ಕಿಂತಲೂ ಹೆಚ್ಚಿನ ಮಾಧುರ್ಯ, ಚಾತುರ್ಯ ಗುಣಗಳನ್ನು ಬಳಸಿಕೊಂಡು ಈ ಶಾಸನವನ್ನು ತಾನು ರಚಿಸಿದ್ದಾಗಿ ಹೇಳಿಕೊಂಡಿದ್ದಾನೆ.

ಕ್ರಿ.ಶ.೮೯೭ರ ಚಿಂಚಲಿಯ ಶಾಸನವು ಎರಡನೇ ಕೃಷ್ಣನ ಕಾಲದ್ದಾಗಿದ್ದು, ಇದರಲ್ಲಿ "ಕೊಳ್ವೋಕರ ಗಿರಿ. . . . . ಯ್ಯೋನ ಲಿಖಿತಂ"[೧೧೫] ಎಂದು ಹೇಳಿದೆ. ಆದ್ದರಿಂದ ಅವನ ಹೆಸರು ಗಿರಿಯಯ್ಯೋನ್

ಇರಬಹುದು. ಶಾಸನಗಳ ತಳಭಾಗಗಳು ಸ್ವಲ್ಪ ತ್ರುಟಿತವಾಗಿರುವುದರಿಂದ ಲಿಪಿಕಾರರ ಬಗ್ಗೆ ತಿಳಿಯಲು ಕಷ್ಟವಾಗುತ್ತದೆ.

ಅಸುಂಡಿಯ ಕ್ರಿ.ಶ.೯೨೫ರ ನಿತ್ಯವರ್ಷನ ಶಾಸನದಲ್ಲಿ "ಬರೆದೋಂ ಲೋಕಯ್ಯಂ ಬೆಸೆಗೆಯ್ದನಾ. . ..ಸಿಂಗಂ"[೧೧೬] ಎಂದು ಹೇಳುತ್ತದೆ. ಶಾಸನವನ್ನು ಬರೆದವನು ಲೋಕಯ್ಯಂ ಎಂಬುದು ಸ್ಪಷ್ಟ. ಆದರೆ ಬೆಸಗಯ್ದ ವ್ಯಕ್ತಿಯ ಹೆಸರು ಸ್ಪಷ್ಟವಾಗಿ ಬರುವುದಿಲ್ಲ. ಕಾರಣ ಶಾಸನ ಅಲ್ಲಿ ತ್ರುಟಿತವಾಗಿರುವುದು ಅವನ ಹೆಸರು ತಿಳಿಯಲು ಕಷ್ಟಕರವಾಗಿದೆ.

ಕ್ರಿ.ಶ.೯೮೨ರ ನೀಲಗುಂದದ ಎರಡನೇತೈಲನ ಶಾಸನದಲ್ಲಿ "ಕನ್ನೋಜನ ಲಿಖಿತಂ"[೧೧೭] ಎಂದು ಶಾಸನದ ಕೊನೆಯ ಸಾಲಿನಲ್ಲಿ ಹೇಳಿದ್ದು, ಇದನ್ನು ಬರೆದವನು ಕನ್ನೋಜ ಎಂದು ಹೇಳಬಹುದು.

ಮುಳಗುಂದದ ೧೦ನೇ ಶತಮಾನದ ಶಾಸನವೊಂದರಲ್ಲಿ "ಬರೆಪ, ಬಲ್ಮಗವಾದ್ಯದ ಪರಿಣತಿಕೆಗೆ ಕವಿ ತಗಿವನೊಳಿ. . ಎನಿಪ ಸಾಮಿಯಣ್ಣಂ ಬರೆದೋಂ"[೧೧೮] ಎಂದು ಹೇಳುತ್ತದೆ. ನಾಗಾವಿಯ ಶಾಸನವನ್ನು ಈತನು ಬರೆದಿರುವುದನ್ನು ಆ ಶಾಸನದಲ್ಲಿ ಹೇಳಿದಂತೆಯೇ ಈ ಶಾಸನದಲ್ಲಿ ಹೆಚ್ಚಿನ ವಿಷಯಗಳನ್ನು ಹೇಳಿದ್ದಾನೆ. ಆದರೆ ಆ ಭಾಗ ತ್ರುಟಿತವಾಗಿದ್ದು ಇವನ ವಿಷಯ ತಿಳಿಯುವುದು ಕಷ್ಟವಾಗಿದೆ.

ಕ್ರಿ.ಶ.೧೦೦೨ರ ಗದುಗಿನ ಸತ್ಯಾಶ್ರಯ ಇರಿವಬೆಡಂಗನ ಶಾಸನದಲ್ಲಿ "ಕಾಳಿದಾಸಯ್ಯಂ ಬರೆದಂ, ಸೈವೊಜ ರೂವಾರಿ ಭೈರವಂ. . .[೧೧೯]

. . . . . ನರಕರಿಗೆ_.....ನುರಾಗ..... ಣಿಪ........ _ :

ರದು ಮನ್ದಿರ ಕೆಂಶಸುರ ದೊರೆಯಲ್ಲ. . . . ದಚ್ಚರಿಸುವ ಶಿಳ

ಕಾಂಸ್ಯ ವಿದ್ಯೆಯೊಳು ಸೈಪುಗನಂ" ಎಂದು ಹೇಳಿದೆ. ಇಲ್ಲಿ ಬರೆದ ಕಾಳಿದಾಸಯ್ಯನಿಗಿಂತಲೂ ಹೆಚ್ಚಾಗಿ ರೂವಾರಿ ಭೈರವಂನ ಬಗ್ಗೆ ಅಲ್ಪಸ್ವಲ್ಪ ವಿಚಾರ ಹೇಳಲಾಗಿದ್ದರೂ ಸಹ ಅದು ತ್ರುಟಿತವಾಗಿದೆ. ಆದರೂ ಈತ ಶಿಳಕಾಂಸ್ಯ ವಿದ್ಯೆಯಲ್ಲಿ ಪರಿಣಿತಿ ಪಡೆದವನಾಗಿದ್ದನು ಎಂದು ತಿಳಿಯುತ್ತದೆ.

ಕ್ರಿ.ಶ.೧೦೦೭ರ ಲಕ್ಕುಂಡಿಯ ಶಾಸನ ಇರಿವಬೆಡಂಗನ ಕಾಲದ್ದಾಗಿದ್ದು, ಇದರಲ್ಲಿ "ಪರಮಾರ್ತ್ಥಜಿನತೀರ್ತ್ಥಯೋಗಿ, ಜಿನತೀರ್ತ್ಥವ್ಯೋಮ, ಶೀತಾಂಶುದಿಗ್ವ್ಯಿರದಾಪೌಬಸುಕೀರ್ತ್ತಿ, ಜೈನ ವೃಷದಣ್ಣಾದೀಶ, ಮಧ್ಯಜ್ಜಿನೇಶ್ವರ, ಪಾದಾಂಬುಜಷಟ್ಪದಂ, ಸಮ್ಯಕ್ತ್ವರತ್ನಾಕರಂ, ಸಿರಿಪಾಳಂ, ಜಿನ ಧರ್ಮ್ಮ ನಿರ್ಮ್ಮಳನುತ ಪ್ರಖ್ಯಾತಯಿಂ ಲೋಕಮಂ ॥ ಪರಮಶ್ರೀ ಜಿನಧರ್ಮ್ಮಾಬರ ರವಿ ಸಿರಿವಾಳಸೆಟ್ಟಿಯಾತ್ಮಜ ನುದ್ಯಚ್ಚರಿತಂ ಬಾಹುಬಲಿ ಸವಿಸ್ತರದಿನ್ದಂ ಬರೆದನೆನ್ನೊ ಡಾರ್ಪ್ರೆಗಳರಿದಂ"[೧೨೦] ಎಂದು ಹೇಳುತ್ತದೆ. ಅಂದರೆ ಇಲ್ಲಿ ತನ್ನ ಬಗ್ಗೆ ವಿಚಾರಗಳನ್ನು ಹೇಳಿಕೊಂಡಿದ್ದಾನೆ. ಇವನು ಜೈನನಾಗಿದ್ದು, ರವಿ ಸಿರಿಪಾಳಶೆಟ್ಟಿಯ ಮಗ, ಬಾಹುಬಲಿ ಈ ಶಾಸನವನ್ನು ವಿಸ್ತಾರವಾಗಿ ಬರೆದುದಾಗಿ

ಅತ್ತಿಮಬ್ಬೆಯು ಜಿನೇಂದ್ರನಿಗೆ ಕೊಟ್ಟದಾನ ಶಾಸನವು ಹಾಳಾಗಲಾಗಿ, ಹೊಸದಾಗಿ ಬರೆದು ಹಾಕಿದುದಾಗಿ ವಿಸ್ತಾರವಾಗಿ ಕೆಲವು ವಿಚಾರಗಳನ್ನು ಈತ ಹೇಳಿಕೊಂಡಿದ್ದಾನೆ.

ಕ್ರಿ.ಶ.೧೧೧೦ರ ಪೇಠಾಆಲೂರಿನ ಐದನೇ ವಿಕ್ರಮಾದಿತ್ಯನ ಶಾಸನದ ಕಡೆಯಲ್ಲಿ ಮರುಳೋಜನು ಬರೆದುದಾಗಿ ಹೇಳಲಾಗಿದೆ. "ಪ್ರಸಾದ ಚಕ್ರವರ್ತಿ ಮರುಳೋಜಂ ಬರೆದಂ"[೧೨೧] ಎಂಬುದಾಗಿ ಹೇಳಿದೆ. ಈ ಮರುಳೋಜನಿಗೆ "ಪ್ರಸಾದಚಕ್ರವರ್ತಿ" ಎಂಬ ಬಿರುದು ಇರುವುದಾಗಿ ಈ ಶಾಸನದಲ್ಲಿ ತಿಳಿದುಬರುತ್ತದೆ. ಈತನೂ ಸಹ ತನ್ನ ಬಗ್ಗೆ ಹೆಚ್ಚಿನ ವಿವರಗಳನ್ನು ಹೇಳಿಕೊಂಡಿಲ್ಲ.

ಕ್ರಿ.ಶ.೧೦೨೨ರ ನಾಗರಹಳ್ಳಿಯ ಶಾಸನದಲ್ಲಿ "ಬರೆದಂ ಈಸರಯ್ಯ" ಎಂದಷ್ಟೆ ಹೇಳಿದೆ.[೧೨೨] ಈ ಶಾಸನವನ್ನು ಈಸರಯ್ಯ ಬರೆದ ಎಂಬುದಷ್ಟೆ ಸ್ಪಷ್ಟ, ಬಿಟ್ಟರೆ ಆತನ ಬೇರಾವ ವಿಚಾರಗಳು ಇಲ್ಲ.

ಶಿರೂರಿನಲ್ಲಿ ಕ್ರಿ.ಶ.೧೦೪೨ರ ಒಂದನೇ ಜಗದೇಕಮಲ್ಲನ ಕಾಲದ ಶಾಸನವಿದ್ದು, ಅದರಲ್ಲಿ ಎರಡು ಬಾರಿ ಶಾಸನ ಲಿಪಿಕಾರನ ಹೆಸರನ್ನು ಕಾಣಬಹುದು. ಮೊದಲಿಗೆ "ಬರೆದಂ ಬರ್ಮ್ಮಯ್ಯಂ" ಎಂದು ಎರಡನೇ ಬಾರಿ "ಬರೆದಂ ಕುಳಕರಣೆ ಬರ್ಮ್ಮಯಂ"[೧೨೩]ಎಂದು ಹೇಳಿದೆ.

ಕ್ರಿ.ಶ.೧೦೪೯ರ ಬೆಂತೂರಿನ ಒಂದನೇ ಸೋಮೇಶ್ವರನ ಕಾಲದ ಶಾಸನದಲ್ಲಿ "ಶ್ರೀಸವಣಬ್ಬಲ್ಗೆ ದೇವನ ಮಗಂ ನಾಯ್ತುವರ್ಮ್ಮೋಜಂ ರೂವಾರಿ ಮಾರ್ತ್ತಣ್ಡಂ"[೧೨೪] ಎಂದು ಹೇಳಿದೆ. ಇಲ್ಲಿ ಇವನು ತನ್ನ ತಂದೆಯ ಹೆಸರನ್ನು ಹೇಳಿಕೊಂಡಿದ್ದಾನೆ. ಸವಣಬ್ಬಲ್ಗೆ ದೇವನಮಗಂ ನಾಯ್ತುವರ್ಮ್ಮೋಜ ಎಂಬುವವನು ಲಿಪಿಕಾರನಾಗಿದ್ದು, ರೂವಾರಿ ಮಾರ್ತ್ತಣ್ಡಂ ಎಂದು ಹೇಳಿದೆ. ಈ ಶಾಸನದಲ್ಲಿ ಲಿಪಿಕಾರ ಮತ್ತು ರೂವಾರಿ ಇಬ್ಬರನ್ನು ನಾವು ಕಾಣಬಹುದು.

ತಾಮ್ರಗುಂಡಿಯ ಕ್ರಿ.ಶ.೧೦೫೪ರ ಒಂದನೇ ಸೋಮೇಶ್ವರನ ಕಾಲದ ಶಾಸನದ ಕಟ್ಟ ಕಡೆಯ ಸಾಲಿನಲ್ಲಿ "ಬರೆದಂ ಚಾಮುಣ್ಡರಾಯನೀಶಾಸನಮಂ"[೧೨೫] ಎಂದು ಹೇಳಿದೆ. ಇದರಿಂದ ಈ ಶಾಸನ ಬರೆದ ವ್ಯಕ್ತಿ ಚಾಮುಣ್ಡರಾಯ ಎಂದು ನಮಗೆ ತಿಳಿಯುತ್ತದೆ.

ಕ್ರಿ.ಶ.೧೦೬೨ರ ಮುಳಗುಂದದ ಶಾಸನವು ಒಂದನೇ ಸೋಮೇಶ್ವರನ ಕಾಲದ್ದೇ ಆಗಿದ್ದು, ಇದರಲ್ಲಿ "ಅನುಪಮತರಾಕ್ಷರಂ ಬುಧಜನಮಮಂ ಜೀಯನಿಸೆ ಸಕಳ ವಿದ್ಯಾನಿಳಯಂ ಮನುಮುನಿಚಾರಿತ್ರ ನೀ ಸಾಸನಮಂ ಮನ್ನೆಯರ ಬಸವಣ್ಣಯ್ಯಂ ಬರೆದಂ ಪುರಿಕರ ನಗರದ ಬಮ್ಮಂ ಸರಸ್ವತೀಗಣದ ದಾಸಿ ಕಣ್ಣ......ನಿರುತಯತಿ ಸಟಂ ಖಣ್ಡರಿಸಿದಂ ನಾಗರ್ಮ್ಮನಚ್ಛಾತ್ರಂ"[೧೨೬] ಎಂದು ಹೇಳಿದೆ. ಈ ಶಾಸನವನ್ನು ಬರೆದವನು ಬಸವಣ್ಣಯ್ಯನಾಗಿದ್ದು, ಆ ವಿಚಾರವನ್ನು ಕಲ್ಲಿನ ಮೇಲೆ ಖಣ್ಡರಿಸಿದವನು, ಮತ್ತು ನಾಗವರ್ಮ್ಮನ್ ಎಂಬುವನು ಶಿಲ್ಪಿಯಾಗಿದ್ದಾನೆ. ಈ ಶಾಸನ ಬರೆದ ಬಸವಣ್ಣಯ್ಯನು ವಿದ್ಯಾವಂತನು, ಬುಧಜನನು ಆಗಿರುವುದಾಗಿ ಹೇಳಿಕೊಂಡಿದ್ದಾನೆ.

ಸೊರಟೂರಿನ ಕ್ರಿ.ಶ.೧೦೭೧ರ ಎರಡನೇ ಸೋಮೇಶ್ವರನ ಕಾಲದ ಶಾಸನವನ್ನು ಕನ್ನಪಯ್ಯ ಎಂಬುವವನು ಬರೆದುದಾಗಿ ಹೇಳಿಕೊಂಡಿದ್ದಾನೆ.[೧೨೭] ಈ ಭಾಗದಲ್ಲಿ ಶಾಸನವು ಬಹಳ ತೃಟಿತವಾಗಿದ್ದು, ಅವನ ವಿಚಾರಗಳು ಬೇರಾವುವು ತಿಳಿಯುವುದಿಲ್ಲ. ಅಲ್ಲದೆ ಆತನು ತನ್ನ ಬಗ್ಗೆ ಹೇಳಿಕೊಂಡಿರುವ ಸಂಭವವೂ ಕಡಿಮೆ.

ಕ್ರಿ.ಶ.೧೦೭೬ರ ಲಕ್ಕುಂಡಿಯ ಶಾಸನದಲ್ಲಿ "ರುವರಿ ಕೇತೋಜನ ಬೆಸೆ"[೧೨೮] ಎಂದಷ್ಟೆ ಹೇಳಿದೆ. ಇದು ಚಿಕ್ಕ ಶಾಸನವಾಗಿದ್ದು, ಅದರಲ್ಲಿ ತನ್ನ ಬಗ್ಗೆ ಹೆಚ್ಚಿನ ವಿವರಗಳನ್ನು ಹೇಳಿಕೊಂಡಿಲ್ಲ.

ಕ್ರಿ.ಶ.೧೦೮೭ರ ಆರನೇ ವಿಕ್ರಮಾದಿತ್ಯನ ಕಾಲದ ಶಾಸನದಲ್ಲಿ "ಪರಿಹಿತರಿನ್ನೂರ್ವ್ವರ ಪದಸರಸೀರುಹಾರ್ಮೋಽದಮಧುಕರಂ ಶಿವಭಕ್ತಂ ಕರವತಿಶಯಮಾಗಿರೆ, ವಿಸ್ತರದಿಂ ಕುಳಕರಣಿ ಮಾಬಲಾರ್ಯ್ಯಂ ಬರೆದಂ। ಪುರಿಕರ ಪಟ್ಟಣೋದ್ಭವನ ಕಂಟದ ಬಮ್ಮನ ಪುತ್ರನಯ್ಯಣಂ ಮರೆ ವೆಸೆದೊಪ್ಪುವಿಟ್ಟಿಗೆಯ ದಂತದ ಚಿತ್ರದ ಶಾಸ್ತ್ರ ಯುಕ್ತಮಾಗಿರೆ ಬೆಸಗೆಯ್ವ ಕುಲಭರಿವ ಕಮ್ಮರವಿನ್ನಣದೋಜೆಗೆಲ್ಲಿಯಂ ಪರಿಕಿಸಿ ವಿಶ್ವ ಕರ್ಮ್ಮನಿನವಂ ಮಿಗಿಲೆಂಬುದಶೇಷ ಭೂತಳ"[೧೨೯] ಅಂದರೆ ಇಲ್ಲಿ ಮಾಬಳಾರ್ಯನು ತಾನು ಮಹಾಜನರ ಪಾದಪದ್ಮದ ಮಧುಕರನೆಂದು ಹಾಗೂ ಶಿವಭಕ್ತನೆಂದು ಹೇಳಿಕೊಳ್ಳುವುದರೊಂದಿಗೆ ತನ್ನ ಹಸ್ತಕೌಶಲ ಕುರಿತು ತಿಳಿಸಿದ್ದಾನೆ. ಮುತ್ತಿನಂತಹ ಸುಂದರವಾದ ಅಕ್ಷರಗಳನ್ನು ತಾನು ಬರೆಯುತ್ತಿದ್ದೆನೆಂದು ಹೇಳಿಕೊಂಡಿದ್ದಾನೆ.

ಕ್ರಿ.ಶ.೧೦೮೭ರ ಕುರ್ತುಕೋಟಿಯಲ್ಲಿರುವ ಎರಡು ಶಾಸನಗಳು ಇವನೇ ಬರೆದುದಾಗಿದ್ದು, ಪೊಂಬೊಲ ನಾಗದೇವನು ಹೇಳಿದಂತೆ ತಾನು ಬರೆದುದಾಗಿ ಆ ಶಾಸನದಲ್ಲಿ ಹೇಳಿಕೊಂಡಿದ್ದಾನೆ.[೧೩೦] ಅಲ್ಲದೇ ಇದರ ರೂವಾರಿ ಮಂಟೂರಾಯ್ವೋಜ ಬೆಸ ಎಂದು ಹೇಳಿದೆ.

ಕ್ರಿ.ಶ.೧೦೯೬ರ ಡೋಣಿಯ ಶಾಸನವನ್ನು "ಮುನಿಚಂದ್ರ ಸಿದ್ಧಾಂತದೇವರ ಗುಡ್ಡಂ ಡಾಯಿಮಯ್ಯ ಬರೆದ" ಎಂದು ಹೇಳಿದೆ.[೧೩೧] ಆದರೆ ಡಾಯಿಮಯ್ಯನ ಬಗ್ಗೆ ಹೆಚ್ಚಿನ ವಿಚಾರಗಳು ಈ ಶಾಸನದಲ್ಲಿ ಇಲ್ಲ.

ಕ್ರಿ.ಶ.೧೧೦೭ರ ಲಕ್ಷ್ಮೇಶ್ವರದ ಶಾಸನದಲ್ಲಿ "ರಾಜೋಜನ ಕಂಡರಣೆ"[೧೩೨] ಎಂದು ಹೇಳಿದೆ. ಇದರಲ್ಲಿ ಇವರು ಜೈನ ಧರ್ಮಾವಲಂಬಿಗಳು ಎಂಬುದಾಗಿ ತಿಳಿಸಿದೆ.

ಲಕ್ಷ್ಮೇಶ್ವರದ ಕ್ರಿ.ಶ.೧೧೧೨ರ ಆರನೇ ವಿಕ್ರಮಾದಿತ್ಯನ ಶಾಸನದಲ್ಲಿ "ಪೊಂಬೊಳಲ ಕರ್ತ್ತುವಾದಿ ಚೂಡಾಮಣಿ ಕನ್ಥೆಯ ದೇವರ ಪುತ್ರಂ ಚಟ್ಟಪಾರ್ಯ್ಯ ಪೇಳ್ದಂ"[೧೩೩] ಎಂದು ಹೇಳುತ್ತದೆ. ಈ ಶಾಸನದಲ್ಲಿ ರೂವಾರಿಯನ್ನು ಮಾತ್ರ ಹೇಳಲಾಗಿದೆ. ತನ್ನ ಊರಿನ ಹೆಸರನ್ನು ಹೇಳಿದೆ. ಈತನು ಪೊಂಬೊಳಲ (ಹೊಂಬಳ) ಕರ್ತ್ತುವಾ ಚೂಡಾಮಣಿ ಕನ್ಥೆಯ ದೇವರ ಮಗ ಎಂಬುದಾಗಿ ಹೇಳಿಕೊಂಡಿದ್ದಾನೆ.

ಕ್ರಿ.ಶ.೧೧೨೪ರ ಪೇಠಾಆಲೂರಿನ ಶಾಸನದಲ್ಲಿ "ಶಾಣ್ಡಿಲ್ಯಗೋತ್ರ ಕುಳಕರಣಿ ಚಟ್ಟಿಮಯ್ಯನಳಿಯಂ ಸಂಕಣನ ಲಿಖಿತಂ ಚಾವೋಜನ ಕಣ್ಡರಣೆ"[೧೩೪] ಎಂದು ಹೇಳಿದೆ. ಅಂದರೆ ಇಲ್ಲಿ ಲಿಪಿಕಾರ ಮತ್ತು ರೂವಾರಿ ಇಬ್ಬರನ್ನು ಹೇಳಲಾಗಿದ್ದು ರೂವಾರಿಯು ಶಾಣ್ಡಿಲ್ಯಗೋತ್ರದ ಕುಳಕರಣಿ ಚಟ್ಟಿಮಯ್ಯನ ಅಳಿಯ ಸಂಕಣನಾಗಿದ್ದು, ಈ ಶಾಸನವನ್ನು ಚಾವೋಜ ಕಣ್ಡರಣೆ ಮಾಡಿರುವುದಾಗಿ ತಿಳಿದುಬರುತ್ತದೆ.

ಕುರ್ತಕೋಟಿಯ ಕ್ರಿ.ಶ.೧೧೨೬ರ ಶಾಸನದಲ್ಲಿ "ಕೇಸವರಾಜಂ ದೋಣಿಯ ಶಾಸನಮಂ ಬರೆಸಿ ಧರ್ಮಮಂ ಪ್ರಕಟಿಸಿದಂ"[೧೩೫] ಎಂದು ಹೇಳುತ್ತದೆ. ಇಲ್ಲಿ ಶಾಸನ ರಚನೆಯಾಗಲು ಮುಖ್ಯ ಕಾರಣನಾದ ವ್ಯಕ್ತಿಯ ಬಗ್ಗೆ ತಿಳಿಸಲಾಗಿದೆಯಾದರೂ ಆತನ ಬಗೆಗಿನ ಹೆಚ್ಚು ವಿಚಾರಗಳಿಲ್ಲ.

ಕ್ರಿ.ಶ.೧೧೩೮ರ ಎಲೆಶಿರೂರಿನ ಮೂರನೇ ಸೋಮೇಶ್ವರನ ಕಾಲದ ಶಾಸನದಲ್ಲಿ "ಹೊಸವುರ ಮೊರಕೇಶ್ವರ ದೇವರ ಓಜನಮಗ ಸಿಂಗೋಜನ ಪುತ್ರ ಗಣಪೋಜನ ಬರೆಪಂ"[೧೩೬] ಎಂಬುದಾಗಿ ಹೇಳಿದೆ. ಈ ಶಾಸನ ಬರೆದ ಗಣಪೋಜ ಸಿಂಗೋಜನ ಮಗನಿದ್ದು ಇವನ ಸ್ಥಳ ಹೊಸವುರು ಎಂದು ತಿಳಿದುಬರುತ್ತದೆ.

ಕ್ರಿ.ಶ.೧೧೩೮ರ ಲಕ್ಷ್ಮೇಶ್ವರದ ಶಾಸನದಲ್ಲಿ " .. . . .ಬರೆದ ಸನ್ಧಿವಿಗ್ರಹಿಯಾದಿತ್ಯ"[೧೩೭] ಎಂದಷ್ಟೆ ದೊರೆತಿದ್ದು, ಈ ಶಾಸನವನ್ನು ಬರೆದಂತಹ ಆದಿತ್ಯ ಎಂಬ ವ್ಯಕ್ತಿಯು ಸಂಧಿವಿಗ್ರಹಿಯಾಗಿರುವ ವಿಷಯ ತಿಳಿಯುತ್ತದೆ.

ಕ್ರಿ.ಶ.೧೧೪೭ರ ಲಕ್ಷ್ಮೇಶ್ವರದ ಮತ್ತೊಂದು ಶಾಸನದಲ್ಲಿ "ಶ್ರೀಮತ್ ಕರ್ನಾಟಕ ಸುಕವಿ ಮುಖ್ಯ ಪಂಡಿತರ ಕವಿತೆ॥ ರುವಾರಿ ಚಕ್ರವರ್ತಿ ಪುಲಗೇರಿಯ ಜಿನ್ನೋಜರ ಅಗ್ರಸುತಂ ಚಾವೋಜನ ಕಂಡರಿಣಿ"[೧೩೮] ಎಂದು ಹೇಳುತ್ತದೆ. ಅಂದರೆ ಈ ಶಾಸನವು ಕರ್ನಾಟಕದ ಸುಕವಿಗಳ ಮುಖ್ಯ ಪಂಡಿತರ ಕವಿತೆಯಾಗಿದ್ದು, ಇದರ ರೂವಾರಿ ಪುಲಗೆರಿಯ ಚಿನ್ನೊಜನ ದೊಡ್ಡ ಮಗನಾದಂತಹ ಚಾವೋಜನ ಕಂಡರಣಿ ಎಂದು ಈ ಶಾಸನ ಹೇಳುತ್ತದೆ.

ಕ್ರಿ.ಶ.೧೧೬೧ರ ಲಕ್ಷ್ಮೇಶ್ವರದ ಬಿಜ್ಜಳನ ಶಾಸನದ ಕೊನೆಯ ಸಾಲಿನಲ್ಲಿ "ನಾಗಾರ್ಜುನ ಕವಿತ್ವಂ"[೧೩೯] ಎಂದು ಹೇಳಲಾಗಿದೆ. ಈ ಶಾಸನದ ಕವಿತ್ವವನ್ನು ರಚಿಸಿದವನು ನಾಗಾರ್ಜ್ಜುನ ಎಂದು ತಿಳಿಸುತ್ತದೆ.

ಕ್ರಿ.ಶ.೧೧೮೪ರ ಡಂಬಳದ ನಾಲ್ಕನೇ ಸೋಮೇಶ್ವರನ ಕಾಲದ ಶಾಸನವಾಗಿದ್ದು, ಅದರ ೮೬ನೇ ಸಾಲಿನಲ್ಲಿ "ಶಾಸನಮಂ ವಿರಚಿಸಿ ಬರೆದ ಕವಿ ಬಮ್ಮರಸನ ಸುತ ನಾಗದೇವಭಟ್ಟವರಿಷ್ಟಂ"[೧೪೦] ಎಂದು ಹೇಳಿದೆ. ಈ ಶಾಸನವನ್ನು ರಚಿಸಿದವನು, ಬರೆದವನು ಬಮ್ಮರಸನ ಮಗನಾದ ನಾಗದೇವಭಟ್ಟ ಎಂಬುದಾಗಿ ಹೇಳಿಕೊಂಡಿದ್ದಾನೆ.

ಕ್ರಿ.ಶ.೧೧೯೨ರ ಗದುಗಿನ ಶಾಸನವು ಹೊಯ್ಸಳ ದೊರೆ ೨ನೇ ವೀರಬಲ್ಲಾಳನ ಕಾಲದ್ದಾಗಿದ್ದು ಅದರಲ್ಲಿ "ಅಗ್ನಿಶ್ರಾಮ್ಮನ ರಚಿತ ಶಾಸನ"[೧೪೧] ಎಂಬುದಷ್ಟನ್ನು ಹೇಳುತ್ತದೆ.

ಕ್ರಿ.ಶ.೧೨೧೫ರ ಲಕ್ಷ್ಮೇಶ್ವರದ ಸಿಂಘಣನ ಶಾಸನವನ್ನು "ಶ್ರೀಮದ್ರುದ್ರ ಭಟ್ಟೋಪಾಧ್ಯಾಯಸೂಮನಾಲಿಖಿತಂ" ಎಂದು ಹೇಳಿದೆ. ಶ್ರೀಮದ್ರುದ್ರ ಭಟ್ಟೋಪಾಧ್ಯಾಯನು ಬರೆದುದಾಗಿ ತಿಳಿಸುತ್ತದೆ.

ಕ್ರಿ.ಶ.೧೪೧೨ರ ಒಂದನೇ ದೇವರಾಯನ ಕಾಲದ ಶಾಸನವು ಲಕ್ಷ್ಮೇಶ್ವರದಲ್ಲಿದ್ದು, ಅದು ಜೈನರಿಗೂ, ಶೈವರಿಗೂ ಆದ ವಿವಾದವನ್ನು ಬಗೆಹರಿಸಿದ ಶಾಸನವಾಗಿದ್ದು, ಅದರಲ್ಲಿ "ಸಂಗಮ ದೇವಗಳ ವಿದ್ವಾಂಸುಗಳ ಸುಹಸ್ತದ ಬರಹಂಗಳು, ಸಂಗಮದೇವಗಳ ಬರಹ, ತಾರ್ಕಿಕ ನರಹರಿಭಟ್ಟರ ಬರಹ. ಶ್ರೀಧರ ದೀಕ್ಷಿತರ ಬರಹ,[೧೪೨] ವಿರುಪಾಕ್ಷ ಭಟ್ಟರ ಬರಹ, ಚಂನಕ್ರಷ್ಣದೀಕ್ಷಿತರ ಬರಹ, ಬುಕ್ಕಂಣಗಳ ಬರಹ" ಎಂದು ಎಲ್ಲಾ ಪ್ರಮುಖವಾಗಿ ಬರೆದವರ ಅಥವಾ ಆ ವಿವಾದ ಬಗೆಹರಿಸಿದ ಸಾಕ್ಷಿಗಳ ಸಹಿಯಾಗಿರಬಹುದು.

ಕ್ರಿ.ಶ.೧೫೪೮ರ ಲಕ್ಷ್ಮೇಶ್ವರದ ಶಾಸನವು ಕೊನೆಯಲ್ಲಿ "ಸುಡಗಾಡ ಲಿಂಗ ಸೆಟ್ಟಿ ಬಿಡಿಸಿದ"[೧೪೩] ಎಂದು ಹೇಳುತ್ತದೆ. ಅಂದರೆ ಲಿಂಗಸೆಟ್ಟಿ ಎಂಬುವವನು ಈ ಶಾಸನವನ್ನು ಬಿಡಿಸಿದುದಾಗಿ (ಬರೆದಿದುದಾಗಿ) ಹೇಳಲಾಗಿದೆ.

ಲಿಪಿಕಾರರು ಇಲ್ಲದಿದ್ದರೆ ನಮ್ಮ ಲಿಪಿಯು ಉಳಿಯುವುದೇ ಕಷ್ಟವಾಗುತ್ತಿತ್ತು ಎಂದೇ ಹೇಳಬಹುದು. ಇವರು ಶಿಲೆಯ ಮೇಲೆ ಅಕ್ಷರಗಳನ್ನು ಖಂಡರಿಸದೆ ಹೋಗಿದ್ದರೆ ನಮ್ಮ ಲಿಪಿಶಾಸ್ತ್ರ ಹುಟ್ಟುತ್ತಲೇ ಇರಲಿಲ್ಲ ಅಲ್ಲದೆ ಅಕ್ಷರಗಳು ಕಾಲದಿಂದ ಕಾಲಕ್ಕೆ ಹೇಗೆ ಬದಲಾಗುತ್ತ ಬಂದವು ಎಂಬುದನ್ನು ನಾವು ಶಾಸನಗಳಲ್ಲಿ ಈ ಲಿಪಿಕಾರರಿಂದ ತಿಳಿಯಬಹುದಾಗಿದೆ. ಲಿಪಿಕಾರರು ಇಲ್ಲದೆ ಹೋಗಿದ್ದರೆ ಅಂದಿನ ಕಾಲದ ಇತಿಹಾಸವನ್ನೇ ತಿಳಿಯುವುದು ಕಷ್ಟವಾಗುತ್ತಿತ್ತು. ಇವರು ತಮ್ಮ ಬಗ್ಗೆ ಹೆಚ್ಚಿನ ವಿಷಯಗಳನ್ನು ಶಾಸನಗಳಲ್ಲಿ ತಿಳಿಸದೇ ಇದ್ದರೂ ಸಹ ಜಗತ್ತಿಗೆ ಬೆಳಕನ್ನು ಕೊಡುವ ಮಿಣಕು ದೀಪಗಳಂತೆ ನಮ್ಮ ಸಾರಸ್ವತಾ ಲೋಕಕ್ಕೆ ಅಮೋಘ ಕೊಡುಗೆಯನ್ನು ನೀಡಿದ್ದಾರೆ. ಇರುವ ಕಡಿಮೆ ಸ್ಥಳಾವಕಾಶದಲ್ಲಿ ಸಣ್ಣ ಸಣ್ಣ ಕಾವ್ಯಗಳನ್ನು ರಚಿಸಿ ಅಂದಿನ ವಿಷಯಗಳು ಮುಂದಿನ ತಲೆಮಾರಿಗೆ ಹರಿದು ಬರುವಂತೆ ಮಾಡುವಲ್ಲಿ ಇವರ ಪಾತ್ರ ಬಹುಮುಖ್ಯವಾದುದಾಗಿದೆ. ರಾಜಪ್ಪ ದಳವಾಯಿಯವರು ಹೇಳುವಂತೆ ಕನ್ನಡದ ಶಾಸನಸಾಹಿತ್ಯಚರಿತ್ರೆ ರಚನೆಯಾದಲ್ಲಿ ಮಾತ್ರ ಕನ್ನಡದ ಸಾಹಿತ್ಯಲೋಕ ಪರಿಪೂರ್ಣವಾದಂತಾಗುತ್ತದೆ ಎಂಬ ಮಾತು ಕಟುಸತ್ಯ. ಆಗ ಮಾತ್ರ ಲಿಪಿಕಾರರ, ರೂವಾರಿಗಳ ಚಿತ್ರಣವನ್ನು ನೀಡಿದಂತಾಗುತ್ತದೆ.

**ಅಡಿಟಿಪ್ಪಣಿಗಳು**

೧. ಮೇವುಂಡಿ, ಎಸ್.ಐ.ಐ ೧೧ ಶಾ.ಸಂ.೧೧ ಕ್ರಿ.ಶ.೮೬೫

೨. ಮೇವುಂಡಿ, ಎಸ್.ಐ.ಐ ೧೧ ಶಾ.ಸಂ.೨೨ ಕ್ರಿ.ಶ.೮೯೭

೩. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೧೧. ಕ್ರಿ.ಶ.೮೬೭-೬೮

೪. ಇ.ಸಿ. ೨ ಮತ್ತು ೬

೫. ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ

೬. ಕನ್ನಡ ಲಿಪಿಶಾಸ್ತ್ರ, ಸಂ:ಎಂ.ಜಿ.ಮಂಜುನಾಥ, ದೇವರಾಜ ಸ್ವಾಮಿ

೭. ಮೌರ್ಯ ಮತ್ತು ಶಾತವಾಹನ ಯುಗ, ಪ್ರೊ. ಲಕ್ಷ್ಮಣ ತೆಲಗಾವಿ

೮. ಬಳ್ಳಾರಿ ಜಿಲ್ಲಾ ಶಾಸನಸಂಪುಟ

೯. ಮೌರ್ಯ ಮತ್ತು ಶಾತವಾಹನ ಯುಗ, ಪ್ರೊ. ಲಕ್ಷ್ಮಣ ತೆಲಗಾವಿ

೧೦. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೨೪೫ ಕ್ರಿ.ಶ.೯೬೮-೬೯

೧೧. ಜಾನಪದ, ಮುಂಡರಗಿ ಸ್ವಾತಂತ್ರ ಹೋರಾಟ ಸಂಗ್ರಾಮ

೧೨. ಜಾನಪದ, ಮುಂಡರಗಿ ಸ್ವಾತಂತ್ರ ಹೋರಾಟ ಸಂಗ್ರಾಮ

೧೩. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೦೩

೧೪. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೪. ೭. ೫೬,

೧೫. ಶಾಸನಸಂಪದ

೧೬. ಶಾಸನಸಂಪುಟ, ೯ ಪ್ರ: ಕ.ವಿ.ವಿ.

೧೭. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೦೩

೧೮. ಶಾಸನಸಂಪುಟ ೯ ಪ್ರ: ಕ.ವಿ.ವಿ

೧೯. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೪,೫,೬,೭.

೨೦. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೦೪ ಕ್ರಿ.ಶ.೬೮೩

೨೧. ಕುರ್ತುಕೋಟಿ, ಎಸ್.ಐ.ಐ ೧೧ ಶಾ.ಸಂ. ಕ್ರಿ.ಶ.೭೩೩

೨೨. ಲಕ್ಷ್ಮೇಶ್ವರ. ಎಸ್.ಐ.ಐ ೨೦ ಶಾ.ಸಂ.೨೦ ಕ್ರಿ.ಶ.೭೩೫

೨೩. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೪ ಕ್ರಿ.ಶ.೬೮೩

೨೪. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೫ ಕ್ರಿ.ಶ.೭೨೩

೨೫. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೬ ಕ್ರಿ.ಶ.೭೩೦

೨೬. ಲಕ್ಷ್ಮೇಶ್ವರ, ಇ.ಐ.೪ ಪು.ಸಂ.೧೬೩-೬೭ ಕ್ರಿ.ಶ.೯೧೭

೨೭. ಅಸುಂಡಿ, ಎಸ್.ಐ.ಐ.೧೧. ಶಾ.ಸಂ. ೩೪ ಕ್ರಿ.ಶ.೯೨೫

೨೮. ಗದಗ, ಎಸ್.ಐ.ಐ ೧೧ ಶಾ.ಸಂ.೪೮ ಕ್ರಿ.ಶ.೧೦೦೨

೨೯. ಪೇಠಾಅಲೂರು, ಇ.ಐ.೧೧ ಪು.ಸಂ.೨೭-೩೧ ಕ್ರಿ.ಶ.೧೦೧೦

೩೦. ಕೋಟಮಚಗಿ, ಎಸ್.ಐ.ಐ ೧೧ ಶಾ.ಸಂ.೫೬ ಕ್ರಿ.ಶ.೧೦೧೨

೩೧. ಗದಗ, ಇ.ಐ.೧೫ ಪು.ಸಂ ೩೪೮ ಕ್ರಿ.ಶ.೧೧೯೯

೩೨. ಲಕ್ಷ್ಮೇಶ್ವರ, ಎಸ್.ಐ.ಐ೨೦ ಶಾ.ಸಂ.೫೩ ಕ್ರಿ.ಶ.೧೦೮೧

೩೩. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೧೩೭ ಕ್ರಿ.ಶ.೧೧೬೧

೩೪. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೧೩೭ ಕ್ರಿ.ಶ.೧೧೬೧

೩೫. ಲಕ್ಷ್ಮೇಶ್ವರ, ಅಪ್ರಕಟಿತ ಸಂ. ಡಾ॥ಡಿ.ವಿ.ಪರಮಶಿವಮೂರ್ತಿ

೩೬. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೧೬೭ ಕ್ರಿ.ಶ.೧೧೮೯

೩೭. ಗದಗ, ಎಸ್.ಐ.ಐ ೧೫ ಶಾ.ಸಂ.೧೯೯ ಕ್ರಿ.ಶ.೧೨೧೩

೩೮. ಗದಗ, ಎಸ್.ಐ.ಐ.೧೫ ಶಾ.ಸಂ ೧೫೦ ಕ್ರಿ.ಶ. ೧೧೯೧

೩೯. ನಾಗಾವಿ, ಎಸ್.ಐ.ಐ ೧೫ ಶಾ.ಸಂ.೧೮೯ ಕ್ರಿ.ಶ.೧೨೫೫

೪೦. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೨೧೭ ಕ್ರಿ.ಶ.೧೨೪೯

೪೧. ಹೊಸೂರು, ಎಸ್.ಐ.ಐ ೧೫ ಶಾ.ಸಂ.೨೦೭ ಕ್ರಿ.ಶ.೧೧೯೨

೪೨. ಮೇವುಂಡಿ, ---- -- -- ಕ್ರಿ.ಶ.೧೧೯೬

೪೩. ಗದಗ, ಎಸ್.ಐ.ಐ ೧೫ ಶಾ.ಸಂ.೨೦೮ ಕ್ರಿ.ಶ.೧೧೯೨

೪೪. ಕಣವಿ, ಎಸ್.ಐ.ಐ೨೦ ಶಾ.ಸಂ.೨೭೬ ಕ್ರಿ.ಶ.೧೩೨೯

೪೫. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೨೩೨ ಕ್ರಿ.ಶ.೧೪೧೨

೪೬. ಗದಗ, ಎಸ್.ಐ.ಐ ೨೦ ಶಾ.ಸಂ. ೨೮೦ ಕ್ರಿ.ಶ.೧೫೬೯

೪೭. ಗದಗ, ಎಸ್.ಐ.ಐ ೧೫ ಶಾ.ಸಂ.೨೫೩ ಕ್ರಿ.ಶ.೧೫೩೯

೪೮. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ.೨೩೮ ಕ್ರಿ.ಶ.೧೫೪೭

೪೯. ಮೇವುಂಡಿ, ಎಸ್.ಐ.ಐ ೧೧ ಶಾ.ಸಂ.೧೧ ಕ್ರಿ.ಶ.೮೬೫

೫೦. ಮೇವುಂಡಿ, ಎಸ್.ಐ.ಐ ೧೧ ಶಾ.ಸಂ.೨೨ ಕ್ರಿ.ಶ.೮೯೭

೫೧. ಡಂಬಳ ಸಾಂಸ್ಕೃತಿಕ ಅಧ್ಯಯನ, ಹನುಮಾಕ್ಷಿ ಗೋಗಿ, ಪಿ.ಕೆ.ರಾಠೋಡ

೫೨. ಡಂಬಳ ಸಾಂಸ್ಕೃತಿಕ ಅಧ್ಯಯನ, ಹನುಮಾಕ್ಷಿ ಗೋಗಿ, ಪಿ.ಕೆ.ರಾಠೋಡ

೫೩. ಶಾಸನ ಸಂಪುಟ, ೨ ಪ್ರ: ಕ.ವಿ.ವಿ

೫೪. ಡಂಬಳ, ಎಸ್.ಐ.ಐ ೧೧ ಶಾ.ಸಂ.೧೨೬ ಕ್ರಿ.ಶ.೧೦೮೦

೫೫. ಚಿಕ್ಕವಡ್ಡಟ್ಟಿ, ಎಸ್.ಐ.ಐ ೨೦ ಶಾ.ಸಂ.೨೩೮ ಕ್ರಿ.ಶ.೧೫೪೭

೫೬. ಸೊರಟೂರು, ಎಸ್.ಐ.ಐ ೧೧ ಶಾ.ಸಂ.೧೨ ಕ್ರಿ.ಶ.೮೬೭

೫೭. ಶಿರೂರು, ಎಸ್.ಐ.ಐ ೧೧ ಶಾ.ಸಂ ೭೫ ಕ್ರಿ.ಶ.೧೦೪೨

೫೮. ಶಿರೂರು, ಎಸ್.ಐ.ಐ ೧೧ ಶಾ.ಸಂ ೭೫ ಕ್ರಿ.ಶ.೧೦೪೮

೫೯. ಶಿರೂರು,

೬೦. ಕೋರ್ಲಹಳ್ಳಿ, ಎಸ್.ಐ.ಐ ೧೧ ಶಾ.ಸಂ ೮೬ ಕ್ರಿ.ಶ.೧೦೫೦

೬೧. ತಾಮ್ರಗುಂಡಿ, ಎಸ್.ಐ.ಐ ೧೧ ಶಾ.ಸಂ ೯೨ ಕ್ರಿ.ಶ.೧೦೫೪

೬೨. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ ೨೧೫ ಕ್ರಿ.ಶ.೧೨೪೭

೬೩. ಡೋಣಿ, ಎಸ್.ಐ.ಐ ೧೧ ಶಾ.ಸಂ ೧೪೦ ಕ್ರಿ.ಶ.೧೦೯೬

೬೪. ಕಕ್ಕೂರ, ಎಸ್.ಐ.ಐ ೧೧ ಶಾ.ಸಂ ೧೬೫ ಕ್ರಿ.ಶ.೧೧೧೩

೬೫. ಡಂಬಳ,

೬೬. ಅಸುಂಡಿ, ಎಸ್.ಐ.ಐ ೧೧ ಶಾ.ಸಂ ೬೩ ಕ್ರಿ.ಶ.೧೦೨೬

೬೭. ಚಿಂಚಲಿ, ಎಸ್.ಐ.ಐ ೧೧ ಶಾ.ಸಂ ೧೫ ಕ್ರಿ.ಶ.೮೭೧

೬೮. ಚಿಂಚಲಿ, ಎಸ್.ಐ.ಐ ೧೧ ಶಾ.ಸಂ ೨೭ ಕ್ರಿ.ಶ.೯೦೪

೬೯. ಎಲಿಶಿರೂರ, ಎಸ್.ಐ.ಐ ೧೫ ಶಾ.ಸಂ ೨೫ ಕ್ರಿ.ಶ.೯೦೧

೭೦. ಶಿರುಂಜ, ವೀರಗಲ್ಲು

೭೧. ಕುರ್ತುಕೋಟಿ, ಎಸ್.ಐ.ಐ ೧೧ ಶಾ.ಸಂ ೩೭ ಕ್ರಿ.ಶ.೯೪೬

೭೨. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ ೨೪೫ ಕ್ರಿ.ಶ.೯೬೮-೯೬೯

೭೩. ಎಲಿಶಿರೂರ, ಎಸ್.ಐ.ಐ ೧೧ ಶಾ.ಸಂ ೫೦ ಕ್ರಿ.ಶ.೧೦೦೫

೭೪. ಪೇತಾಆಲೂರು, ಇ.ಐ. ಪು.ಸಂ.೨೩-೩೧ ಕ್ರಿ.ಶ.೧೦೧೦

೭೫. ಮುಳಗುಂದ, ಎಸ್.ಐ.ಐ ೧೧ ಶಾ.ಸಂ ೯೭ ಕ್ರಿ.ಶ.೧೦೬೨

೭೬. ಮುಳಗುಂದ, ಎಸ್.ಐ.ಐ ೧೬ ಶಾ.ಸಂ ೫೧೭ ಕ್ರಿ.ಶ.೧೦೨೮

೭೭. ಗದಗ, ಎಸ್.ಐ.ಐ ೨೦ ಶಾ.ಸಂ ೭೦ ಕ್ರಿ.ಶ.೧೦೬೪

೭೮. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ ೪೭ ಕ್ರಿ.ಶ.೧೦೭೪

೭೯. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ ೫೫ ಕ್ರಿ.ಶ.೧೦೮೨

೮೦. ಲಕ್ಷ್ಮೇಶ್ವರ, ಎಸ್.ಐ.ಐ ೨೦ ಶಾ.ಸಂ ೭೮ ಕ್ರಿ.ಶ.೧೧೧೮

೮೧. ಹೊಸೂರು, ಎಸ್.ಐ.ಐ ೧೧ ಶಾ.ಸಂ ೪೭ ಕ್ರಿ.ಶ.೯೪೪-೯೫

೮೨. ಲಕ್ಕುಂಡಿ, ಎಸ್.ಐ.ಐ ೧೫ ಶಾ.ಸಂ ೨೧ ಕ್ರಿ.ಶ.೧೧೪೧

೮೩. ಕಣವಿ, ಎಸ್.ಐ.ಐ ೧೫ ಶಾ.ಸಂ -- ಕ್ರಿ.ಶ.೧೧೪೨

೮೪. ಲಕ್ಕುಂಡಿ, ಎಸ್.ಐ.ಐ ೧೫

೮೫. ಬೂದಿಹಾಳ, ಎಸ್.ಐ.ಐ ೧೫ ಶಾ.ಸಂ ೩೩ ಕ್ರಿ.ಶ.೧೧೪೭

೮೬. ಸೊರಟೂರು, ಎಸ್.ಐ.ಐ ೧೧ ಶಾ.ಸಂ -- ಕ್ರಿ.ಶ.--

೮೭. ಎಲೆಶಿರೂರು, ಎಸ್.ಐ.ಐ ೧೧ ಶಾ.ಸಂ ೭೫ ಕ್ರಿ.ಶ.೧೦೪೨

೮೮. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.—ಕ್ರಿ.ಶ.೧೧೩೮

೮೯. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ೧೨೨ ಕ್ರಿ.ಶ.೧೧೫೩

೯೦. ಗದಗ, ಎಸ್.ಐ.ಐ.೧೧. ಶಾ.ಸಂ.೨೦೧

೯೧. ಲಕ್ಷ್ಮೇಶ್ವರ, ಎಸ್.ಐ.ಐ.೨೦. ಶಾ.ಸಂ.೧೩೭ ಕ್ರಿ.ಶ.೧೧೬೧

೯೨. ಲಕ್ಕುಂಡಿ

೯೩. ಲಕ್ಷ್ಮೇಶ್ವರ

೯೪. ಗದಗ, ಎಸ್.ಐ.ಐ.೧೧. ಶಾ.ಸಂ.೪೮ಕ್ರಿ.ಶ.೧೦೦೨

೯೫. ಮುಳಗುಂದ, ಎಸ್.ಐ.ಐ.೨೦. ಶಾ.ಸಂ.—ಕ್ರಿ.ಶ.೮೬೯

೯೬. ಹರಿಹರನ ಪುಷ್ಪರಗಳೆ

೯೭. ಜನಪದ

೯೮. ಡಂಬಳ, ಎಸ್.ಐ.ಐ.೧೫ ಶಾ,ಸಂ.೫೭೦ ಕ್ರಿ.ಶ.೧೨೮

೯೯. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೧೧ ಕ್ರಿ.ಶ.೮೬೫

೧೦೦. ಡೋಣಿ, ಎಸ್.ಐ.ಐ.೧೧ ಶಾ.ಸಂ.೧೨೬ ಕ್ರಿಶ.೧೦೮೦

೧೦೧. ಪೇಠಾಆಲೂರು, ಇ.ಐ ೧೬ ಪು.ಸಂ ೨೭–೩೧

೧೦೨. ಶಿರೂರು ಅಪ್ರಕಟಿತ ಶಾಸನ

೧೦೩. ಬರದೂರು, ಎಸ್.ಐ.ಐ.೧೫ ಶಾ.ಸಂ.೫೨೮ ಕ್ರಿಶ.೧೦೩೨

೧೦೪. ಚಿಕ್ಕವಡ್ಡಟ್ಟಿ, ಎಸ್.ಐ.ಐ.೧೧ ಶಾ.ಸಂ.೧೭೮ ಕ್ರಿಶ.೧೧೨೭

೧೦೫. ತಾಮ್ರಗುಂಡಿ, ಎಸ್.ಐ.ಐ.೧೧ ಶಾ.ಸಂ.೯೨ ಕ್ರಿಶ.೧೦೫೪

೧೦೬. ಕಣವಿ, ಎಸ್.ಐ.ಐ.೧೧ ಶಾ.ಸಂ.೧೫೬ ಕ್ರಿಶ.೧೧೦೫

೧೦೭. ಎಲೆಹೊಸೂರು, ಎಸ್.ಐ.ಐ.೧೧ ಶಾ.ಸಂ.೪೭ ಕ್ರಿಶ.೧೦೨೮–೨೯

೧೦೮. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೧೨೭ ಕ್ರಿಶ.೧೦೮೨

೧೦೯. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೧೧ ಕ್ರಿಶ.೮೬೫

೧೧೦. ನೀಲಗುಂದ, ಇ.ಐ೬ ಪು.ಸಂ. ೯೮–೧೦೮ ಕ್ರಿ.ಶ.೮೬೬

೧೧೧. ಸೊರಟೂರು, ಎಸ್.ಐ.ಐ.೧೧ ಶಾ.ಸಂ.೧೨ ಕ್ರಿಶ.೮೬೭–೬೮

೧೧೨. ಚಿಂಚಲಿ, ಎಸ್.ಐ.ಐ.೨೦ ಶಾ.ಸಂ –– ಕ್ರಿಶ.೮೭೧

೧೧೩. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೨೨ ಕ್ರಿಶ.೮೯೭

೧೧೪. ನಾಗಾವಿ, ಎಸ್.ಐ.ಐ.೧೧ ಶಾ.ಸಂ.೪೧ ಕ್ರಿಶ.೯೬೯

೧೧೫. ಚಿಂಚಲಿ, ಎಸ್.ಐ.ಐ.೧೧ ಶಾ.ಸಂ.೨೪ ಕ್ರಿಶ.೮೯೭

೧೧೬. ಅಸುಂಡಿ, ಎಸ್.ಐ.ಐ.೧೧ ಶಾ.ಸಂ.೩೪ ಕ್ರಿಶ.೯೨೫

೧೧೭. ನೀಲಗುದ, ಇ.ಐ. ೪ ಪು.ಸಂ೨೦೪-೨೦೮ ಕ್ರಿ.ಶ.೯೮೨

೧೧೮. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೫೧೭ ಕ್ರಿಶ.೧೦ಶ

೧೧೯. ಗದಗ, ಎಸ್.ಐ.ಐ.೧೧ ಶಾ.ಸಂ.೪೮ ಕ್ರಿಶ.೧೦೦೨

೧೨೦. ಲಕ್ಕುಂಡಿ, ಎಸ್.ಐ.ಐ.೧೧ ಶಾ.ಸಂ.೫೨ ಕ್ರಿಶ.೧೦೦೭

೧೨೧. ಪೇಠಾಆಲೂರು, ಇ.ಐ ೧೬ ಪು.ಸಂ ೨೭-೩೧ ಕ್ರಿ.ಶ.೧೦೧೦

೧೨೨. ನಾಗರಹಳ್ಳಿ, ,ಎಸ್.ಐ.ಐ.೧೧ ಶಾ.ಸಂ.೫೮ ಕ್ರಿಶ.೧೦೨೨

೧೨೩. ಶಿರೂರು, ಎಸ್.ಐ.ಐ.೧೧ ಶಾ.ಸಂ.೭೫ ಕ್ರಿಶ.೧೦೪೨

೧೨೪. ಬೆಂತೂರು, ಎಸ್.ಐ.ಐ.೧೧ ಶಾ.ಸಂ.೮೧ ಕ್ರಿಶ.೧೦೪೯

೧೨೫. ತಾಮ್ರಗುಂಡಿ, ಎಸ್.ಐ.ಐ.೧೧ ಶಾ.ಸಂ.೯೨ ಕ್ರಿಶ.೧೦೫೪

೧೨೬. ಮುಳಗುಂದ, ಎಸ್.ಐ.ಐ.೧೧ ಶಾ.ಸಂ.೯೭ ಕ್ರಿಶ.೧೦೬೨

೧೨೭. ಸೊರಟೂರು, ಎಸ್.ಐ.ಐ.೧೧ ಶಾ.ಸಂ.೧೧೧ ಕ್ರಿಶ.೧೦೭೬

೧೨೮. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೫೩೩ ಕ್ರಿಶ.೧೦೭೬

೧೨೯. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೧೨೭ ಕ್ರಿಶ.೧೦೮೨

೧೩೦. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೧೩೩ ಕ್ರಿ.ಶ.೧೦೮೭

೧೩೧. ಡೋಣಿ, ಎಸ್.ಐ.ಐ.೧೧ ಶಾ.ಸಂ.೧೪೦ ಕ್ರಿಶ.೧೦೯೬

೧೩೨. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೨೨ ಕ್ರಿಶ.೧೧೦೭

೧೩೩. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೭೪ ಕ್ರಿಶ.೧೧೧೨

೧೩೪. ಪೇಠಾಆಲೂರು, ಎಸ್.ಐ.ಐ.೧೧ ಶಾ.ಸಂ.೧೭೩ ಕ್ರಿಶ.೧೧೨೪

೧೩೫. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೨೦೦ ಕ್ರಿಶ.೧೧೨೬

೧೩೬. ಎಲೆಶಿರೂರು, ಎಸ್.ಐ.ಐ.-- ಶಾ.ಸಂ.-- ಕ್ರಿಶ.೧೧೩೮

೧೩೭. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೦೭ ಕ್ರಿಶ.೧೧೩೮

೧೩೮ ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೧೭ ಕ್ರಿಶ.೧೧೪೭

೧೩೯. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೩೭ ಕ್ರಿಶ.೧೧೬೧

೧೪೦. ಡಂಬಳ, ಎಸ್.ಐ.ಐ.೧೫ ಶಾ.ಸಂ.೫೭ ಕ್ರಿಶ.೧೧೪೮

೧೪೧. ಗದಗ, ಎಸ್.ಐ.ಐ.೧೫ ಶಾ.ಸಂ.೨೦೮ ಕ್ರಿಶ.೧೧೯೨

೧೪೨. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೯೧ ಕ್ರಿಶ.೧೨೧೫

೧೪೩. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೩೮ ಕ್ರಿ.ಶ.೧೫೪೭

೫

## ಶಾಸನ ಸಾಹಿತ್ಯ

ಇದುವರೆಗು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಸನಗಳನ್ನು ಗಂಭೀರವಾಗಿ ಪರಿಗಣಿಸಿಲ್ಲ. ಪರಿಗಣಿಸಿದ್ದರೂ ಅದು ನಗಣ್ಯ, ಆದರೆ ನೂರಾರು ಉತ್ತಮ ಶಾಸನಗಳು ನಮ್ಮ ಕವಿಗಳ ಪ್ರತಿಭಾಶಕ್ತಿಗೆ ಸಾಕ್ಷಯಾಗಿವೆ. ಅನೇಕ ಶಾಸನ ಕವಿಗಳ ಬಗ್ಗೆ, ಲಿಪಿಕಾರರ ಬಗ್ಗೆ ಶಾಸನಗಳು ಹೆಮ್ಮೆಯಿಂದ ಮಾತನಾಡುತ್ತವೆ. ಸ್ಥಳದ ಅಭಾವದ ಕಾರಣದಿಂದ ಶಾಸನ ಶಾಹಿತ್ಯಕ್ಕೆ ಅನೇಕ ಮಿತಿಗಳಿದ್ದರೂ ಕೂಡ ಸಿಕ್ಕ ಸ್ವಲ್ಪ ಸ್ಥಳದಲ್ಲಿಯೇ ತಮ್ಮ ಪ್ರತಿಭೆಯ ಮೂಲಕ ಸಾಹಿತ್ಯಾತ್ಮಕ ಪಾಟಗಳನ್ನು ಶಾಸನಗಳಲ್ಲಿ ಸಿರ್ಮಿಸಿರುವ ಹಲವು ಕವಿಗಳು ಇದ್ದಾರೆ. ಗದಗ ಭಾಗದ ಬಹುತೇಕ ಶಾಸನಗಳು ಕಾವ್ಯಾತ್ಮಕವಾಗಿವೆ. ಅವುಗಳನ್ನು ವ್ಯಕ್ತಿವರ್ಣನೆ, ಗ್ರಾಮವರ್ಣನೆ, ಪ್ರಕೃತಿವರ್ಣನೆ ಹೀಗೆ ಅನೇಕ ರೀತಿಯ ವರ್ಣನಾತ್ಮಕ ಅಂಶಗಳನ್ನು ಅರಿಯಬಹುದಾಗಿದೆ.

ಒಂದು ಶಾಸನ ರಚನೆಯಾಗಬೇಕಾದರೆ ಕವಿ, ಲಿಪಿಕಾರ ಮತ್ತು ರೂವಾರಿಗಳು ಬಹಳ ಮುಖ್ಯ ಕನ್ನಡದ ಬಹಳಷ್ಟು ಕವಿಗಳು ಮೊದಲಿಗೆ ಶಾಸನ ಕವಿಗಳಾಗಿ ನಂತರ ಬೃಹತ್ ಕಾವ್ಯಗಳನ್ನು ಕನ್ನಡ ಕಾವ್ಯಲೋಕಕ್ಕೆ ರಚಿಸಿಕೊಟ್ಟಿದ್ದಾರೆ. ಉದಾಹರಣೆಗೆ ರನ್ನನು ಲಕ್ಕುಂಡಿಯ ಅತ್ತಿಮಬ್ಬೆಯ ಶಾಸನವನ್ನು ರಚಿಸಿದ್ದಾನೆ. ಇದಕ್ಕೆ ಸಾಕ್ಷಿಯಾಗಿ ಈ ಶಾಸನದಲ್ಲಿರುವ ಎರಡು ಪದ್ಯಗಳನ್ನು ಅಜಿತಪುರಾಣದಲ್ಲಿ ಆತನು ಹೇಳಿರುಪುದನ್ನು ನೋಡಬಹುದು. ಅಲ್ಲದೇ ಜನ್ನನು ಕಾವ್ಯಗಳನ್ನು ರಚಿಸುವ ಮೊದಲು ಅಮೃತಾಪುರ ಮತ್ತು ತರೀಕೆರೆ ಶಾಸನಗಳನ್ನು ರಚಿಸಿರುವುದನ್ನು ಗಮನಿಸಬಹುದು.

೫.೧. ನಾಡವರ್ಣನೆ

ಕಾವ್ಯಗಳಲ್ಲಿ, ಪುರಾಣಗಳಲ್ಲಿ ನಾಡವರ್ಣನೆ ಬಹಳವಾಗಿ ಬರುತ್ತದೆ. ಆದರೆ ಹೇಳಬೇಕಾದ ವಿಷಯವನ್ನು ಹೇಳಿ, ಬಹುಬೇಗ ಮುಗಿಸುವ ಶಾಸನಗಳಲ್ಲಿಯೂ ಸಹ ನಾಡಿನ ಬಗ್ಗೆ ವರ್ಣಿಸಿರುವುದನ್ನು ನೋಡಿದರೆ, ಇಲ್ಲಿ ನಮ್ಮ ಕವಿಗಳು ಎಷ್ಟು ಚತುರರಾಗಿದ್ದರು ಎಂದು ತಿಳಿಯುತ್ತದೆ. ನಮ್ಮ ನಾಡನ್ನು ವರ್ಣಿಸುವಾಗ ಆ ನಾಡಿನ ಮೇರೆಗಳು, ಆ ನಾಡು ಇರುವ ಜಾಗ, ಅಲ್ಲಿಯ ಬೆಳೆಗಳು ಹೇಗೆ ಇದ್ದವು, ಕೋಟೆಗಳು, ಅಲ್ಲಿನ ಜನರು ಹೀಗೆ ಎಲ್ಲ ವಸ್ತುಗಳನ್ನು ಶಾಸನದಲ್ಲಿಯೂ ಕಾವ್ಯಗಳಷ್ಟೇ ಪರಿಣಾಮಕಾರಿಯಾಗಿ ವರ್ಣಿಸಿದೆ. ಅಲ್ಲದೆ ಸಾಮಂತರನ್ನು, ಆಳ್ವಿಕೆಯ ಅರಸರನ್ನು ಸಮರ್ಥವಾಗಿ ಹೊಗಳಲಾಗಿದೆ.

ಡಂಬಳದ ಕ್ರಿ.ಶ.೧೨ನೇ ಶತಮಾನದ ಶಾಸನವೊಂದು ಮಾಸವಾಡಿ ನಾಡನ್ನು ಈ ರೀತಿಯಾಗಿ ವರ್ಣಿಸಿದೆ.

"ಕುಂತಳ ವಿಷಯದ ದಕ್ಷಿಣಗಂಗಾ ನದಿಯೋತ್ತರ
ತೀರಂ ಬೀಡಿದೊರ್ಪ್ಪುತಿರ್ಪ್ಪ ಮಾಸವಾಡಿ ನಾಡದೆಂ
ತನೆ ॥ ಬೆಳಸಲ್ಲವಲ್ಲವರಿಸನ ಮೆಣಸು ಸರಾಜಾ
ನವಿಕ್ಷುವ್ರಿಕ್ಷಮವೆಲ್ಲಂ ಹಲಸಿಗಳ ಮಾಮರ ಸತು
ಕುಲರು ಸಪುಣ್ಯರ್ಸ್ವರೂಪಿಗಳು ನರರೆಲ್ಲಂ ॥
ಅಲ್ಲಿ ॥ ಪ್ರಿಯದೊಂ ಚಕ್ರಿಯೆ ಮೆಚ್ಚ ವಿಕ್ರಮದೆ ಪೆ
ತ್ತಂ ರೂಡಿಯಂ ಮಾಸವಾಡಿ ಪೆರ್ಮ್ಮಾಡಿ ತದಾ
ದ್ಯಜಂ ಹರಿಹರಂ ಪುತ್ರಂ ತದೀಯಾನುಜಂ ನ
ಯ ಕೌರ್ಯ್ಯ ಪ್ರಭು ಕುಪ್ಪಭೂಪತಿಳಕ ಕೃಪ್ಪಾ
ಳಾಪಮಂ ತತ್ಸುತಂ ನಿಯತಾಂಮ್ನಾಯಪ
ದೋಚಿತಂ ಹರಿಹರಂ ಶ್ರೀಮಲ್ಲಿದೇವಾಗ್ರಜಂ . . . . . ."[೧]

ಇಲ್ಲಿ ನಾಡು ಎಲ್ಲಿತ್ತು? ಎಂಬುದಕ್ಕೆ ಕುಂತಳ ಎಂಬ ವಿಷಯದ ದಕ್ಷಿಣದಗಂಗೆ ಎಂದು ಕರೆಸಿಕೊಳ್ಳುವ ತುಂಗಭದ್ರಾ ನದಿಯ ಉತ್ತರ ತೀರದಲ್ಲಿ ಮಾಸವಾಡಿನಾಡು ಇತ್ತು. ಇಲ್ಲಿ ಶುಂಠಿ, ಅರಿಶಿಣ, ಸರಾಜಾ, ನವಿಕ್ಷುವನ್ನು ಬೆಳೆಯುತ್ತಿದ್ದರು. ಇಲ್ಲಿ ಹಲಸು, ಮಾವು ಮರಗಳು ಬೆಳೆದು ನಿಂತಿದ್ದವು. ಇಂತಹ ನಾಡಿನಲ್ಲಿ ಹುಟ್ಟಿದ ಜನರು ಅಸಮಾನ್ಯರು, ಸತ್ಕುಲದವರು, ಸಪುಣ್ಯ ಪಡೆದವರು ಅಲ್ಲದೆ ಚಕ್ರಿಯಾದಂತಹ ವಿಷ್ಣುವನ್ನೆ ಪರಾಕ್ರಮದಲ್ಲಿ ಮೆಚ್ಚಿಸಿದವರು ಎಂದು ಹೇಳುತ್ತದೆ. ಮತ್ತೊಂದು ಕ್ರಿ.ಶ.೧೧೮೪ರ ಶಾಸನವು,

"ಆತನಿಂ ಪರೀಕ್ಷ್ಯ ಮಾಡಿರ್ದ ಮಾಸೇವಾಡಿ ನಾಡಿಗೆ
ಕಟ್ಟಿದ ಪಟ್ಟಮುವಿಟ್ಟ ಬೊಟ್ಟಮಳವಟ್ಟ ಕಳಸಮುವಿ
ರ್ಪಂತೆ ಧರ್ಮವೊಳಲೆಂಬ ಮಹಾಪಟ್ಟಣಂ ವಿರಾಜಿ
ಸುತಿರ್ಪ್ಪುದದರ ಮಹಿಮೆಯಂ ಪೇಳ್ವಡೆ" ॥[೨]

ಎಂದು ವರ್ಣಿಸುತ್ತದೆ. ಅಂದರೆ "ಧರ್ಮೊವೊಳಲೆಂಬ ಪಟ್ಟಣವು ಮಾಸವಾಡಿ ನಾಡಿಗೆ ಪಟ್ಟವನ್ನು ಕಟ್ಟಿ, ಹಣೆಗೆ ತಿಲಕದ ಬೊಟ್ಟನ್ನು ಇಟ್ಟು, ಕಳಶವಿಟ್ಟಂತೆ ತೋರುತ್ತಿತ್ತು ಈ ಪಟ್ಟಣ" ಎಂದು ಹೊಗಳಲಾಗಿದೆ. ಇಲ್ಲಿಯ ಕ್ರಿ.ಶ.೧೧೮೪ರ ಇದೇ ಶಾಸನವು ದೇವಾಲಯವನ್ನು ವರ್ಣಿಸುತ್ತ

ಕುಳಪರ್ವ್ವತಮಮಂ ತಂದದ ।
ನಳವಿಗೆವರೆ ಕಡೆದು ಪಡೆದರೆನಿಸಿಯುಮಂತಾ ॥
ಪೊಳಲಿಂಗೆ ಕಳಶದಂತಿರೆ ।
ವಿಳಾಸಮಂ ತಾಳ್ದಿತ್ತಜ್ಜಮೇಶ್ವರ ಭವನಂ ॥[೩]

ಎನ್ನುತ್ತದೆ. ಅಂದರೆ ಕುಲಪರ್ವತವನ್ನು ತಂದು, ಅದನ್ನು ಕಡೆದು ದೇವಾಲಯವನ್ನು ನಿರ್ಮಿಸಿದ್ದು, ಅದು ಡಂಬಳ ಪಟ್ಟಣಕ್ಕೆ ಕಲಶವಿಟ್ಟಂತೆ ತೋರುತ್ತಿತ್ತು ಎಂದು ಬಣ್ಣಿಸಲಾಗಿದೆ. ಇದು ಕಂದ ಪದ್ಯವಾಗಿದ್ದು ಒಂದು ಮತ್ತು ಮೂರನೇ ಸಾಲಿನಲ್ಲಿ ೪ ಮಾತ್ರೆಯ ಮೂರು ಗಣಗಳೂ ಮತ್ತು ಎರಡು ಮತ್ತು ನಾಲ್ಕನೇ ಸಾಲಿನಲ್ಲಿ ೪ ಮಾತ್ರೆಯ ೫ ಗಣಗಳು ಸರಿಯಾಗಿ ಬರುವುದಿಲ್ಲ ಕಂದ ಪದ್ಯದ ಲಕ್ಷಣವನ್ನು ಹೊಂದಿರುತ್ತದೆಯಾದರೂ ಸಹ ಎರಡನೇ ಸಾಲಿಸಲ್ಲಿ ೧೯ ಆತ್ರೆಗಳನ್ನು ನಾಲ್ಕನೇ ಸಾಲಿನಲ್ಲಿ ೨೧ ಮಾತ್ರೆಗಳನ್ನು ಹೊಂದಿರುತ್ತದೆ.

UU_|UU_| _UU|
ಕುಳಪರ್ವ್ವತಮಮಂ ತಂದದ ।

UUUU|UUUU|UUUU|UU U _ _
ನಳವಿಗೆವರೆ ಕಡೆದು ಪಡೆದರೆನಿಸಿಯುಮಂತಾ ॥

UU _| U UUU|_UU
ಪೊಳಲಿಂಗೆ ಕಳಶದಂತಿರೆ ।

U_ U| _ _| _ _|U _ U|U UU_
ವಿಳಾಸಮಂ ತಾಳ್ದಿತ್ತಜ್ಜಮೇಶ್ವರ ಭವನಂ

ಚಿಕ್ಕವಡ್ಡಟ್ಟಿಯ ಕ್ರಿ.ಶ.೧೧೨೭ರ ಶಾಸನವು ಆ ಊರನ್ನು "ದ್ರೋಣಪರ್ವತದ ಮೇಗೆಸೆದೊಪ್ಪುವ ದಿವ್ಯತೀರ್ಥದೊಳು ಉದಯಿಸಿದುದು ಬೈರದೇವನ ರಕ್ಷಕ" ಇಲ್ಲಿ ಸಂಪಿಗೆ, ಕೇದಿಗೆ, ಮುಸುಕುಂದ, ಸೀವ, ನಾರಗಲವ ಹೂ ಗಿಡಗಳಿವೆ. ಚಿಲಿಪಿಲಿಗುಟ್ಟುವ ಗಿಳಿವಿಂಡು, ಬೆಟ್ಟದ ತಪ್ಪಲಲ್ಲಿ ಉಲಿವ ಕೋಗಿಲೆ, ಕೊಳದಲ್ಲಿ ಈಜುವ ಹಂಸಗಳಿವೆ. ತಾಳೆ, ತೆಂಗು, ಶ್ರೀತಾಳಿ, ತಮಾಳ, ಶ್ರೀಗಂಧ, ಬಾಳೆ ತೋಟಗಳು ಇವೆ. ನಾಲ್ಕು ದಿಕ್ಕಿನಲ್ಲಿ ಹೂದೋಟಗಳಿಂದ ತುಂಬಿದೆ. ಕೆರೆಗಳು ತುಂಬಿ ಹರಿಯುತ್ತವೆ. ಇಂತಹ ನಾಡು "ಶ್ರೀ ಲಲನೆಗೆ ಕೈಯಿಂಗಂ ನಡೆಯೆನೆ ಪುಲಿಗೆರೆ ನಾಡೊಳೆಸೆರು ಮಾಸಿವಟಮ್" ಎನ್ನುತ್ತದೆ. ಅಂದರೆ ಲಲನೆಗೆ ಹಿಡಿದ ಕೈಗನ್ನಡಿಯಂತೆ ಈ ಪುರವು ಇತ್ತು. ಅಲ್ಲಿ ಸಿಂಹಗಳು ಗರ್ಜಿಸುತ್ತಿದ್ದವು, ಆನೆಗಳು ಘೀಳಿಡುತ್ತಿದ್ದವು, ನವಿಲು ನರ್ತನಗೈಯುತ್ತಿದ್ದವು ಎಂಬುದಾಗಿ ವರ್ಣಿಸಿದೆ.[೪]

ಚಿಕ್ಕವಡ್ಡಟ್ಟಿಯ ಮತ್ತೊಂದು ಶಾಸನವು

ಶ್ರೀ ಮತ್ಕುಂತಳ ಭೂಮಿ ಕಾಮಿನಿಯ
ವಕ್ತ್ರಾದರ್ಶಮಂ ಮೋತ್ತು
ಸದ್ಧಾಮಂ ಶೋಭೆಗೆ ಮಾಸವಾಡಿಯಸುಗಂ
ನಾಡದಂತದಂ ಎಂದು ಬಣ್ಣಿಸಿದೆ.

ಕುಂತಳ ಭೂಮಿ ಎಂಬ ಕಾಮಿನಿಯ ನಡುವಿನ ವಡ್ಯಾಣದಂತೆ ಇತ್ತು ಎಂದು ಹೇಳುತ್ತದೆ.

ಇಟ್ಟಳ ...... ನಿದಿಂ ಗಿಳಿವಿಂಡಿ ನೋಳಿಯಿಂ ।

ಬೆಟ್ಟದ ತರ್ಪ್ಪಲಿಂದುಲಿವ ಕೋಗಿಲೆಯುಂ ಕೊಳದಿಂದ ಹೂ ಹಾಡಿ.......ಡ್ಡಿದ ಕೋಟಿ ಯಿಂದೆಸೆಯ ಸುರಾಗ್ರಿ ಹಂಸಗಳಿಂದೊಪ್ಪುವ

ಒಡ । ವಡ್ಡಿ ಕರಂತಿರಮ್ಯ ವಾಗಿಂದ್ರನ ಪುರಕೆಣೆಯೆರಲು
ಸೊಗಯಿಸುತಿರ್ಪುದು ಸೇವಟಮೆಂತಿ ನೋರ್ಪಡೆ ॥

ಎನ್ನುತ್ತದೆ. ಈ ಶಾಸನ ಇಲ್ಲಿ ಊರಿನ ಉತ್ತರದಲ್ಲಿ ದ್ರೋಣಗಿರಿಯಿತ್ತು. ಅಲ್ಲಿ ಗಿಳಿಗಳು ಉಲಿಯುತ್ತ, ಕೋಗಿಲೆ ಕೂಗುತ್ತಿದ್ದವು, ಕೊಳಗಳಲ್ಲಿ ಹಂಸಗಳು ಹಾಡುತ್ತಿದ್ದವು. ಅಂತಹ ಜಾಗೆಯಲ್ಲಿ ದೊಡ್ಡ ಕೋಟೆಯಿಂದ ಸುತ್ತುವರೆದ ಒಡವಡ್ಡಿ ಶೋಭಿಸುತ್ತಿತ್ತು ಎಂಬುದಾಗಿ ಹೇಳಲಾಗಿದೆ. ಕ್ರಿ.ಶ.೧೨೩೬ರ ಲಕ್ಕುಂಡಿಯ ಶಾಸನವೊಂದು ಈ ರೀತಿಯಾಗಿ ಹೇಳುತ್ತದೆ.

ಸರಸಿಯ ಯೋನಿ ಬಿನ್ನಪನರಿಯಲ್ಕ
ಮರಾಪತಿ ಲೊಕ್ಕಿಗುಂಡಿ ಎಂಬೆ
ರೆಡು ಮನೆಯ್ದು ತೊರಲ್ ಅಮರಾವತಿ
ಮುಟ್ಟಿದುದೂರ್ದ್ವ ಲೋಕಮಂ ॥

ಲಕ್ಕುಂಡಿಯ ವೈಭವವನ್ನು ಕೇಳಿದ ಇಂದ್ರನು, ಅದನ್ನು ನೋಡಲು ಬಂದು ಲಕ್ಕುಂಡಿ ಮತ್ತು ಅಮರಾವತಿಯನ್ನು ತೂಗಿ ನೋಡಲು, ಅಮರಾವತಿ ಊರ್ಧ್ವ ಲೋಕವನ್ನು ಮುಟ್ಟಿತು. ಅಂದರೆ ಲಕ್ಕುಂಡಿಯ ಸಮಾನವಾಗಿ ಅಮರಾವತಿ ತೂಗಲಿಲ್ಲ ಎಂಬುದಾಗಿ ತಿಳಿಸುತ್ತದೆ.[೫] ಲಕ್ಷ್ಮೇಶ್ವರದ ಶಾಸನವೊಂದು

ಭರತಾವನಿಯೊಳು ಕುಂತಳ ।
ಧರಿತ್ರಿ ರಂಜಿಸುವುದರಲ್ಲಿ ಪುರಿಕರ ದೇಶಂ ॥
ಕರೆವೊಪ್ಪುಗುಮಾ ವಿಷಯಾಂ।
ತರರಾಜದ್ರಾಜಧಾನಿ ಪುರಿಕರ ನಗರಂ॥

ಎಂದು ವರ್ಣಿಸುತ್ತದೆ. ಅಂದರೆ ಭರತ ಖಂಡದ ಕುಂತಳ ನಾಡಿನಲ್ಲಿ ಪುರಿಕರದೇಶ ಇತ್ತು.[೬] ಅದು ರಾಜಧಾನಿ ನಗರವಾಗಿತ್ತು ಎಂದು ಬಣ್ಣಿಸಿದೆ.

ಕ್ರಿ.ಶ.೧೦೮೭ರ ಆರನೇ ವಿಕ್ರಮಾದಿತ್ಯನ ಕುರ್ತುಕೋಟಿಯ ಶಾಸನವು ಬೆಳ್ವೊಲ ಪ್ರದೇಶವನ್ನು ಈ ರೀತಿಯಾಗಿ ವರ್ಣಿಸಲಾಗಿದೆ.

"ವಾರಿಧಿ ವೇಷ್ಟಿತಾವನಿಲತಾಂಗಿಗೆ ಕುಂತಲದೇಶಮಾಸ್ಯಮಂತಾ ರಮಣೀಯಮಪ್ಪ ಮುಖಪಂಕರುಹಕ್ಕೆ ಲಲಾಟದಂತೆ ವಿಸ್ತಾರದಿನೊಪ್ಪಿತೋರುವುದು ಬೆಳ್ವಲಮಲ್ಲಿ ಲಲಾಮದೊನ್ದಳಂಕಾರ ಸಮನ್ವಿತಂ ಕುರುತಕೋಂಟೆ ವಿರಾಜಿಪುದೀ ಧರಿತ್ರಿಯೋಳ್" ಅಂದರೆ ಸಮುದ್ರ ಸುತ್ತುವರೆದಿರುವ ಲತಾಂಗಿಯಂತಿರುವ ಕುಂತಲದೇಶವೆಂಬ ಹೆಣ್ಣಿನ ವಿಸ್ತಾರವಾದ ಮುಖದಲ್ಲಿ ಹಣೆಯಿರುವಂತೆ ವಿಸ್ತಾರವಾಗಿರುವುದು ಬೆಳ್ವಲವೆಂಬ ನಾಡು. ಅಲ್ಲಿ ಅಲಂಕಾರಿಕ ಬೊಟ್ಟಾಗಿರುವುದು ಈ ಕುರ್ತುಕೋಟಿ ಎಂದು ಬಣ್ಣಿಸಿದೆ.[೭]

ಡೋಣಿಯ ಕ್ರಿ.ಶ.೧೦೯೬ರ ಆರನೇ ವಿಕ್ರಮಾದಿತ್ಯನ ಕಾಲದ ಶಾಸನವು "ಬಳಸಿರ್ದ್ದದ್ರೀಂದ್ರದಿಂ ಸುತ್ತಿರೆದೊಡವಿದ ನಾನಾವನಬ್ರಾತದಿಂ ಕೋಕಿಳಕೇಕೀಕೀರನಾದಂಗಳಿನೆಸೆವ ತಟಾಕಂಗಳಿಂ ದೇವಭೋಗಂಗಳಿಂ ನತ್ಯುತ್ತುಂಗ ಕೋಟಾನ್ತರ ತಟವಿಕಟ್ಟಾಲಕಾನೀಕದಿಂ ಕಣ್ಗೊಳಿಸಿರ್ಕುಂ ಭೂಮಿ ಭಾಮಾಮಳ ಮುಖತಿಳಿಕಂ ದ್ರೋಣಿಕಾಗ್ರಾಮವೆತ್ತಂ॥ ಎನಿಸಿದ ದ್ರೋಣೀಪುರಮಂ" ಎಂದು ವರ್ಣಿಸಲಾಗಿದೆ.[೮] ಅಂದರೆ ಬಳಸಿರ್ದ್ದ ಇಂದ್ರಿಯಗಳು ಸುತ್ತುವರೆದ ನಾನಾ ವನಗಳಿಂದ ಕೋಕಿಲ ಧ್ವನಿ ಕೇಳಿಬರುತ್ತಿತ್ತು. ಶೋಭಿಸುವ ತಟಾಕಂಗಳು ದೇವಭೋಗದ ಅತ್ಯುತ್ತಮವಾದ ವಸ್ತುಗಳಿಂದ ಕಣ್ಣಿಗೆ ಶೋಭಾಯಮಾನವಾಗಿ ಭೂಮಿ ಎಂಬ ಭಾಮೆಯ ಮುಖತಿಲಕದಂತೆ ದ್ರೋಣಿಕಾಪುರವಿತ್ತೆಂದು ಹೇಳುತ್ತದೆ.

ಕ್ರಿ.ಶ.೧೧೦೩ರ ಹೊಸೂರು ಶಾಸನದಲ್ಲಿ "ಬಳಸಿದ ಪೂಗೊಳಂ ಪೊಳದೊಳೊಳ್ತಲರ್ದ್ದಂಬುಜ, ವಂಬುಜಕ್ಕೆ ಪಾಯ್ವಳಿ ಯಳಿಗೀತಿಗಳ್ಕಿಸುಗಿದಿರ್ಪ್ಪ ವಿಯೋಗಿ ನೋಡಿ ಸಂಚಳಿಸೆ ಮರಲ್ದರಲ್ದ ಪೊಸಮಲ್ಲಿಗೆ ಮಲ್ಲಿಗೆ ಗಾಢಗಂಧಮಂ ಬಳಳಿತರಳ್ಚಿ ತೀಡುವೆಲ್ಲರಿಂ" ಎಂದು ಬಣ್ಣಿಸುತ್ತದೆ.[೯] ಸುತ್ತಲು ಇರುವ ಕೊಳಗಳು, ಕೊಳಗಳಲ್ಲಿ ಇರುವ ಅಂಬುಜ (ತಾವರೆ)ಗಳು, ಆ ಅಂಬುಜಕ್ಕೆ ಎರಗುವ ದುಂಬಿಗಳು, ಸುಗಂಧ ಮೈವೆತ್ತಂತೆ ಕಾಣುವ ಮಲ್ಲಿಗೆಯ ಗಾಢವಾದ ಸುಗಂಧ ಇವೆಲ್ಲವುಗಳಿಂದ ಶೋಭಾಯಮಾನವಾಗಿ ಕಾಣುತ್ತಿತ್ತು ಎನ್ನುತ್ತದೆ. ಅಷ್ಟೇ ಅಲ್ಲದೇ "ಎಳೆದಳಿರ್ವ್ವೆರೆದಾಂಬ್ರತರು ಕೆಂದಳಿರ್ದ್ದೊಂಗಲ ನಾನ್ತಶೋಕೆಕಾಯ್ಗಳ ಹೊರೆವೊತ್ತತಂಗಲರ್ದ್ದ ಮಲ್ಲಿಗೆ ತಳ್ತೆಲವಳ್ಳಿ ಪಣ್ತು ತಣ್ಮಲೆವ ಮಯಿಂದವಾಳೆ ನನೆವೊತ್ತದಿರ್ಮ್ಮುತ್ತ ಬೆಡಂಗನಾವಗಂ ತಳೆದಿದೆ ತತ್ಪುರೋಪವನ ವೇನೆಸೆದಿರ್ಪ್ಪುದೂ ನೋಡೆನಾಡೆಯುಂ॥" ಅದು ಸುರಶೈಲದನ್ತೆವಿಬುದಾಶ್ರಯಾಂಬುಧಿಯೆಂತೆ ಬಾಡವಾಸ್ಪದ ವಹಿರಾಜಭೂಷಣ ಸಭಾಂತರದಂತ ವೃಷಾಭಿರಾಮಮಂ ಬರತಳದಂತೆ ಸೌಮ್ಯಸುರಧಿಷ್ಣ್ಯ ವಿರಾಜಿತವೆಂದಡೆಂತು ವೆಯ್ದಿದಪುವೆನೆ ॥ ಅಂದರೆ "ಹಬ್ಬಿರುವ ತರುಲತೆಗಳು, ಕಾಯ್ಗಳ ಹೊರೆಹೊತ್ತುನಿಂತ ತೆಂಗು, ಮಲ್ಲಿಗೆ ಹೂಗಳನ್ನು ಮೈತುಂಬಿ ಹಬ್ಬಿರುವ ಮಲ್ಲಿಗೆ ಬಳ್ಳಿ ಇಂತಹದರಿಂದ ತುಂಬಿತ್ತು. ಆ ಬೆಡಗನ್ನು ಹೊಗಳಲು ಸಾದ್ಯವೇ? ಅಂತಹ ನಾಡಿನಲ್ಲಿ ಸುರಶೈಲದನ್ತೆ ಬುಧರಿಗೆ ಆಶ್ರಯ ತಾಣವಾಗಿ ವಹಿರಾಜಭೂಷಣ ಸಭಾಂತರದಂತೆ ಮೆರೆದಿತ್ತು ಈ ನಾಡು" ಎಂಬುದಾಗಿ ಬಣ್ಣಿಸಲಾಗಿದೆ.

ಕ್ರಿ.ಶ.೧೧೦೫ರ ಕಣಿವಿಯ ಶಾಸನದಲ್ಲಿ[೧೦] ಮೇಲಿನಂತೆಯೇ ವರ್ಣಿಸಿ ನಂತರ "ಅದು ದೇವಾಯತನೋದ್ಧಿತ ಧ್ವಜ ಪಿತಾಕಾನೀಕದಿಂ ದೇವಲೋಕದ ಚೆಲ್ವಂ ಕರೆವನ್ತಿರಿಪ್ಪುವದು ನಾನಾವಸ್ತು ಸಂತಾನ ಸಂಪದವಾ ದಾವಣದಿಂ ಕುಬೇರ ಪುರಮಂ ಪೋಡಾಡಿ ಮಿಕ್ಕಂತಿರಿಪ್ಪುದು ರಾರಾಜಿತರ ವ್ಯಹಮ್ಯಕಳಶಂ ಪ್ರೋಲ್ಲೇಖನಾಂಭೋಧರ" ಅದು ದೇವಲೋಕದಲ್ಲಿ ಇರ್ಪ್ಪಂತೆ ಎಲ್ಲಾ ವಸ್ತುಗಳು ಇವೆ. ದೇವಲೋಕದ ಚೆಲುವೇ ಮೈವೆತ್ತಂತೆ ಇದೆ. ಅಲ್ಲಿ ನಾನಾ ವಸ್ತುಗಳು, ಸಂತಾನ ಸಂಪದಗಳು ಇದ್ದು ಕುಬೇರನ ಪುರದಂತಿದೆ ಎನ್ನುತ್ತದೆ.

ಗದಗಿನ ಕ್ರಿ.ಶ.೧೧೧೬ರ ಆರನೇ ವಿಕ್ರಮಾದಿತ್ಯನ ಕಾಲದ ಶಾಸನವೊಂದು[೧೧] "ವನಧಿ ಪರೀತ ಭೂತಳದೊಳೊಪ್ಪುವ ಬೆಳ್ವಲ ದೇಶಮೆಂಬ ಕಾಮಿನಿಯ ಘನೋನ್ನತ ಸ್ತನ ಮನೋಹರ ಹಾರಮನಾ ಬೃಹನ್ನಿತಂಬಿನಿಯ ಕಟೀತ ಭಸ್ಪಿತ ವಿರಾಜಿತ ಕಾಂಚಿಯನೆಯ್ದೆ ಪೋಲ್ತು ಚೆಲ್ವನೆ ನೆರೆ ತಾಳ್ದಿ ಬಟ್ಟಕೆರೆ ನೆಟ್ಟನೆ ಕಣ್ಗೆಸೆದೊಪ್ಪಿ ತೋರೆಗುಂ" ಎಂದು ಬೆಳ್ವೊಲನಾಡನ್ನು ವರ್ಣಿಸುತ್ತದೆ. ಈ ಪ್ರದೇಶದಲ್ಲಿ "ಸುತ್ತುವರೆದ ವನಗಳಿದ್ದು, ಬೆಳ್ವಲದೇಶಮೆಂಬ ಕಾಮಿನಿಯ ಘನೋನ್ನತ ಸ್ತನಗಳು ಮನೋಹರವಾಗಿರುವಂತೆ ಬೃಹನ್ನಿತಂಬಿನಿಯಂತೆ ತುಂಬಿ ತುಳಿಕಿದಂತೆ ಕಾಣುತ್ತಿತ್ತು ಬಟ್ಟಕೆರೆಯ ವೈಭವ" ಎಂದು ತಿಳಿಸುತ್ತದೆ.

ಕ್ರಿ.ಶ.೧೧೨೪ರ ಡಂಬಳದ ಆರನೇ ವಿಕ್ರಮಾದಿತ್ಯನ ಶಾಸನವು "ಶ್ರೀಮತ್ಕುಂತಳ ಭೂಮಿ ಕಾಮಿನಿಯ ವಕ್ತ್ರಾದರ್ಶಮಮಂ ಪೊಲ್ತುಸದ್ಧಾಮಮಂ ಶೋಭೆಗೆ ಮಾಸವಾಡಿಯೆಸಗುಂ ನಾಡಂತದೆಂ ಕಾಮಿನೀಕಾಮಂ ಭೂಪಲಲಾಮನುಗ್ರರಿಪುಭೀಮಂ ಶಿಷ್ಟಕೋಟಿಕ್ರಿತಪ್ರೇಮಮಂ ॥[೧೨] ಅಂದರೆ ಕುಂತಳ ಭೂಮಿಯೆಂಬ ಹೆಣ್ಣಿನ ಮುಖವದನದಂತೆ ಯಾವಾಗಲು ಶೋಭಾಯಮಾನವಾಗಿ ಶೋಭಿಸುತ್ತಿದ್ದ ಮಾಸವಾಡಿ ನಾಡು ಎಂದು ಅರ್ಥೈಸುತ್ತದೆ.

ಕ್ರಿ.ಶ.೧೨೧೩ರ ಯಾದವ ದೊರೆ ಸಿಂಘಣನ ಶಾಸನ[೧೩] ಗದಗನಲ್ಲಿದ್ದು ಅದು ಪಾಂಡುವಂಶಜನಾದ ಜಯಮೇಜಯರಾಜ ಸರ್ಪಯಜ್ಞವನ್ನು ಮಾಡಿದ್ದ ಪುಣ್ಯಭೂಮಿ, ವೇದ ವೇದಾಂಗ ಮೀಮಾಂಸ, ಪುರಾಣ ಇತಿಹಾಸ ಪುಣ್ಯಭೂಮಿ ಎಂಬುದಾಗಿ ತಿಳಿಸುತ್ತದೆ.

ನಮ್ಮ ಕನ್ನಡ ನಾಡಿನಲ್ಲಿ ಸಾಹಿತ್ಯಸಂಪತ್ತು ವಿಶ್ವಮಾನ್ಯವಾದುದು. ಯುದ್ಧವಿದ್ಯೆಯಿಂದ ಹಿಡಿದು ವೈದ್ಯ ವಿದ್ಯೆಯವರೆಗೆ ಎಲ್ಲಾ ಸಾಹಿತ್ಯಪ್ರಕಾರಗಳ ರಚನೆಯಾಗಿದೆ. ಇಲ್ಲಿ ಯಾವ ಸಾಹಿತ್ಯಪ್ರಕಾರವೇ ಆಗಲಿ, ಅದು ಪದ್ಯ ಶೈಲಿಯಲ್ಲೇ ರಚನೆಯಾಗಿರುವುದು ವಿಶೇಷ. ಇಂತಹದರಲ್ಲಿ ಗದ್ಯಪದ್ಯ ಮಿಶ್ರಶೈಲಿಯಾದ ಚಂಪೂಸಾಹಿತ್ಯವೂ ಒಂದು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಂಪೂಸಾಹಿತ್ಯದಲ್ಲಿ ರಚನೆಯಾದ ನೂರಾರು ಕಾವ್ಯಗಳು ದೊರೆತಿವೆ. ಅಂತಹ ಕಾವ್ಯಗಳನ್ನು ರಚಿಸುವಾಗ ನಮ್ಮ ಕವಿಗಳು ಹಲವು ವಿಧವಾದ ಛಂದಸ್ಸುಗಳನ್ನು, ಅಷ್ಟದಶವರ್ಣನೆಗಳನ್ನು, ನವರಸಗಳನ್ನು ಬಳಸಿ ಒಂದು ಕಾವ್ಯವನ್ನು ರಚಿಸುತ್ತಿದ್ದರು. ಆದರೆ ಶಾಸನಗಳಲ್ಲಿ ಅವೆಲ್ಲವುಗಳನ್ನು ಬಳಸುವುದು ಕಷ್ಟ. ಇಲ್ಲಿ ಸ್ಥಳದ ಅಭಾವವಿರುತ್ತದೆ. ಮಹಾಕಾವ್ಯಗಳಷ್ಟು ವಿಸ್ತಾರವಾಗಿ ಪ್ರಸಂಗಗಳನ್ನು ವರ್ಣಿಸಲು ಅವಕಾಶವಿರುವುದಿಲ್ಲ. ಆದರೂ ಸಹ ವಿಶೇಷ ರೀತಿಯಲ್ಲಿ ಶಾಸನಗಳಲ್ಲಿ ಕಂದ ಮತ್ತು ವೃತ್ತಪದ್ಯಗಳನ್ನು ರಚಿಸಿರುವುದು ವಿಶೇಷ. ನಾಡವರ್ಣನೆಗಳಲ್ಲಿ, ರಾಜರ ವೈಭವವನ್ನು ಪೋಣಿಸುವುದರಲ್ಲಿ, ಈ ಶಾಸನಗಳಲ್ಲಿ ಪದ್ಯಗಳು ವಿಶೇಷ ಸ್ಥಾನಗಳನ್ನು ಪಡೆದಿವೆ. ಅಂತಹ ಪದ್ಯಗಳನ್ನು ನಾವು ಈ ಭಾಗದಲ್ಲಿ ಗಮನಿಸುತ್ತಿದ್ದೇವೆ. ಕ್ರಿ.ಶ. ೭ನೇ ಶತಮಾನದಿಂದಲೂ ಶಾಸನಗಳಲ್ಲಿ ಕನ್ನಡದ ತಾಯಿಬೇರಾದ ತ್ರಿಪದಿ ಪದ್ಯಗಳನ್ನು ಬಳಸಿರುವುದು ನಮಗೆ ತಿಳಿಯುತ್ತದೆ. ಮುಂದೆ ಕಂದ ಮತ್ತು ವೃತ್ತ ಪದ್ಯಗಳನ್ನು ಬಳಸಿದ್ದಾರೆ. ಕ್ರಿ.ಶ.೯೬೯ರ ನಾಗಾವಿಯ ಶಾಸನದಲ್ಲಿ ರಾಷ್ಟ್ರಕೂಟದೊರೆ ನಿತ್ಯವರ್ಷದೇವ ಕೊಟ್ಟಿಗನ ಬಗ್ಗೆ ಹೇಳಿರುವ ಕಂದ ಪದ್ಯವೊಂದು ಇದ್ದು, ಅದು ಈ ರೀತಿ ಇದೆ.[೧೪]

ಜಳಧಿಚರ ಸಕಳಕೇಳೀ
ವಿಳಾಸ . ದದುತ್ತರಂಗಸೀಕರಮಾಳಾ
ಲುಳಿತ ಪ್ರವಾಳ ಮುಕ್ತಾ
ಫಳನಿ . . . ದ್ರ ಮುದ್ರಿತೋರ್ವ್ವೀತಳಂ

ಎನ್ನುತ್ತದೆ. ಅಂದರೆ ಸಾಗರದಂತೆ ಅಚಲನಾದವನು, ಸಕಲ ಸುಖಸಂಪದಗಳನ್ನು ಪಡೆದವನು, ಎಳೆಯ ಚಿಗುರೆಲೆಯ ಮೇಲೆ ನಿಂತ ಇಬ್ಬನಿಯ ಮುತ್ತಿನ ಹನಿಗಳಂತೆ ಕಂಗೊಳಿಸುವ ವ್ಯಕ್ತಿಯಾದ ಈತನು, ಸಮುದ್ರದೋಪಾದಿಯಲ್ಲಿ ಗಾಂಭೀರ್ಯವುಳ್ಳವನು ಎನ್ನುತ್ತದೆ. ಈ ಪದ್ಯವು ತ್ರುಟಿತವಾಗಿರುವುದರಿಂದ ಕೆಲವು ವಿಚಾರಗಳನ್ನು ಸ್ಪಷ್ಟವಾಗಿ ನಮೂದಿಸಲು ಸಾಧ್ಯವಾಗಿರುವುದಿಲ್ಲ. ಈ ಶಾಸನದ ಮುಂದಿನ ಪದ್ಯಗಳಲ್ಲಿ

. . . . . . . . . . . . . . .

. . . . . . . . ..ವನತ ಪದದ್ವಯಮನೂದಿತವಚ

ನೋತ್ಪಾವನ ಚರಿತಂ ರಟ್ಟ

ತಿಳಕಂ ಶ್ರೀಮಾನ್ಯಖೇಟದೊಳ್ನೆಲಸಿರ್ದ್ದಂ

ತ್ರುಟಿತಗೊಂಡಿರುವ ಪದ್ಯವಾಗಿದ್ದು, ಇದು ಪ್ರಾಸ ಮತ್ತು ಪ್ರಸ್ತಾರ ವಿಂಗಡಣೆಗೆ ತೊಂದರೆಯಾಗಿದ್ದು, ಇದರ ಅರ್ಥದಲ್ಲಿ ರಟ್ಟತಿಳಕ ಮಾನ್ಯಕೇಟದಲ್ಲಿ ನೆಲಸಿದ್ದನು ಎನ್ನುತ್ತದೆ. ಇದರಲ್ಲಿ ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಟವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ತ್ರುಟಿತಗೊಂಡು "ವನತ ಪದದ್ವಯಮನೂದಿತ ವಚನೋತ್ಪಾವನ" ಎಂಬುದು ಸ್ಪಷ್ಟವಾಗುವುದಿಲ್ಲ. ಇಲ್ಲಿ ಯಾವುದೊ ದೇವರ ಪದದ್ವಯ ಎಂದು ಹೇಳಿರಬಹುದು.

. . . ಸ್ವಸ್ತಿ ಸಮಸ್ತ ವಿ

ರೋಧಿ ಬಳಾಸ್ತಮಿತಂ . . ದನ್ತವ್ರಜ ವಿ

ನ್ಯ ಸ್ತಯಶಂಸೆಲೆ ನೆಗಳ್ದ ನಿ

ಳಾಸ್ತುತ್ಯಂ ಪಾಪಕಲ್ಲಕುಲ ಕುಲತಿಲಕಂ

ಆದಜಿದ ವಿರೋಧಿಯ . .

. . . .ತಳ್ತಿಜಿ ದರ್ಪ್ಪಡೆ ಪೊಗಜೆಗೂ ಜಾ

ಲ್ಮಲ್ದುಧಾತ್ರಿಗೆ. . . . . . . . . . . . . .

ಈ ಪದ್ಯಗಳಲ್ಲಿ ಅವನ ಸಾಮನ್ತನಾದ ದೊರೆ ಯಾವ ರೀತಿ ಇದ್ದನೆಂಬುದನ್ನು ತಿಳಿಸುತ್ತದೆ. ವಿರೋಧಿಗಳ ಬಲವನ್ನು ಅಡಗಿಸುವವನು, ವಜ್ರಕಾಯನು, ಪಾಪಕಾರ್ಯಗಳನ್ನು ತೊಳೆಯುವವನು, ತಿಲಕದಂತವನು ಆಗಿದ್ದನು ಎಂದು ತಿಳಿಸುತ್ತದೆ. ಈ ಪದ್ಯಗಳು ತ್ರುಟಿತಗೊಂಡಿರುವುದರಿಂದ ವಿಶ್ಲೇಷಣೆಗೆ ತೊಂದರೆಯಾಗಿದೆ. ಮುಂದೆ ಶಾಸನದಲ್ಲಿ

ಬಜೆದಲ್ತು ಮೆಚ್ಚುಶೌಚಂ

ಕಿಜಿದಲ್ತಾವರಜಗಣ್ದು ಕೊಣ್ಡತ್ತಿ ಸಕಂ

ಪೌ . . . . . . ಮಸು

ವಜೆ ಯಲ್ತೆನಿಸಿದುದು ನಿಜಗುಣಂಬೋಟುಗನ

ಬರಿದೆ ಮೆಚ್ಚುವುದೇಕೆ ಮನಸ್ಸಿನಲ್ಲಿ ಪರಿಶುದ್ಧನು, ಕಿರಿಯವನಾದರು ಜಗದಲ್ಲಿ ಎಲ್ಲರೂ ಮೆಚ್ಚುವಂತಿದ್ದನು, ಪೌರುಷವಂತನು, ನಿಜವಾಗಿಯೂ ಶೋಭಿಸುವವನು ಮತ್ತು ದೇವತೆಯಂತವನು ಎನ್ನುತ್ತದೆ. ಮುಂದಿನ ಪದ್ಯದಲ್ಲಿ

. . ನುಡಿ ಹಿಮಾಚಳ

ಭೂತಾದಿಪಹಸನ ಶಾರದೋಜ್ಜ್ವಳ ತಚ್ಚ

ನ್ದಾತ್ರಪದಿ ಗಂಗ ನಾಸಂ

ಗೀತ ಯಶೋರೋಚಿರಾಜ ನನುಪಮತೇಜಂ॥

ಇವನು ನುಡಿದರೆ ಹಿಮಾಚಲದಂತೆ, ಶಾರದೆಯ ಕೃಪಾಕಟಾಕ್ಷವುಳ್ಳವನು, ಸಂಗೀತ ಸಾಹಿತ್ಯಾಸಕ್ತಿವುಳ್ಳವನು, ಯಶೋಭಿವೃದ್ಧಿಯುಳ್ಳವನು, ಅನುಪಮ ತೇಜಸ್ಸಿನವನು ಎಂದು ಹೊಗಳಿದೆ. ಅದರ ನಂತರ ಬರುವ ಮಹಾಸ್ರಗ್ಧರವೃತ್ತದಲ್ಲಿ

ಧುರದೊಳ್ಳಳ್ತಿಜೆದೊನ್ದಗುರ್ಬ್ಬಿನಳವಂ ಮಾಜಾನ್ತವಂ ಕಣ್ಣುಮೈಯ್ಯ

. . ಯಲ್ಕುಪ್ಪುಯದೋನೆಮಲ್ತುಭಯದಿನ್ದಾ ಪೊಟ್ಟು . . ಂಚಿಸಂ

ಗರಮಂನಾ . . ರಾದೆನ್ದೊಡೆಹಿತಾನೀತಕ್ಕೆ ಪುಲ್ಲಯ್ಕಿ ತುಂ

ಟರ ಮುಂಬರ್ಪ್ಪವ . ನಿಸರ್ವ್ವ. . .ಟ್ಸಂಗ್ರಾಮ ಕೌನ್ತೇಯನಂ

ಯುದ್ಧದಲ್ಲಿ ಪರಾಕ್ರಮಶಾಲಿಯಾದ ಈತನು ಧುರಿತದಲ್ಲಿ ವೈರಿಗಳನ್ನು ಸೋಲಿಸಿ, ಮಾಳವರನ್ನು ರಾಜ್ಯದಿಂದ ಹೊರಹಾಕಿದವನು, ತುಂಟರಿಗೆ ಬುದ್ಧಿಕಲಿಸುವವನು ಆಗಿದ್ದನು ಎಂದು ಹೇಳುತ್ತದೆ. ಮುಂದಿನ ಪದ್ಯದಲ್ಲಿ

ಕಂದ:- ಭಂಗಿಯೊಳರಾತಿ ಬಳಚತು

ರಂಗವ ಮುಲ್ಲಸಿತ ಸಿಶಿತವರ ಧಾರಾ

ಸಂಗಮಜಲದೊಳ್ ಮುಳುಗಿಸು

ವಂಗಂ ಕೊಟ್ಟಿಗನುದಗ್ರನುಗ್ರಾಜಿಗಳೊಳ್ ॥

ಚತುರಂಗ ಬಲವನು ಹೊಂದಿ ಉಲ್ಲಾಸಿತನು, ಸಂಗಮ ಜಲಧಾರೆಯಲ್ಲಿ ತಮ್ಮ ಕುದುರೆಗಳನ್ನು ಮಿಹಿಸಿದವನು, ಕೊಟ್ಟಿಗನ ಆಸ್ಥಾನದಲ್ಲಿ ಅಗ್ರಸ್ಥಾನ ಉಳ್ಳವನು, ಎಂದು ಹೊಗಳಲಾಗಿದೆ.

ಕ್ರಿ.ಶ.೯೬೮-೬೯ ಲಕ್ಷ್ಮೇಶ್ವರದ ಗಂಗ ದೊರೆ ಮಾರಸಿಂಹನಕಾಲದ್ದಾಗಿದ್ದು, ಅದರಲ್ಲಿ ಇರುವ ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿರುವ ಪದ್ಯವು[೧೫]

"ಅಪಿ ಚ॥ ವೃತ್ತಂ॥ ಸೀಜ್ಜಗದ್ಗಹನರಕ್ಷಣರಾಜಸಿಂಹಃಕ್ಷ್ಮಾಮಣ್ಡನರಾಜಹಂಸಃ ಶ್ರೀಮಾರಸಿಂಹ
ಇತಿ ಬೃಂಹಿತಬಾಹುಕೀರ್ತ್ತಿಸ್ತಸ್ಯನುಜಃ ಕೃತಯುಗಕ್ಷಿತಿಪಾಳಕೀರ್ತ್ತಿ॥
ನಿರ್ವ್ವಾದೋಜ್ವಳ ಬೋದಪೋತ ಬಳತಸ್ಸಿದ್ಧಾನ್ತರತ್ನಾಕರಂ
ಚಾರಿತ್ರೋತ್ತುಪ್ಲುತ ಯಾನಪಾತ್ರಬಳಸ್ಸಂಸಾರ ಮಿಸಾಕರಂ।
ಉತ್ತೀರ್ಣಸ್ಸಮುದೀರ್ಣ್ನಭಕ್ತಿವಿನತೈರ್ವ್ವಂದ್ಯಾಬಿ ವಾನೋರ್ವ್ವು ದೈ
ರಾಸೀದ್ದೇವಗಣೇರ್ಗ್ಗುಣ ನಿಧಿರ್ದ್ದೇವೇಂದ್ರ ಭಟ್ಟಾರಕಃ ॥

ಧರ್ಮದಲ್ಲಿ ಉಜ್ವಲನಾದವನು, ಜ್ಞಾನದಶಿಶುವಾಗಿಯೆ ಜನಿಸಿದವನು, ಸಿದ್ಧಾಂತ ಶಾಸ್ತ್ರಗಳ ಕಣಜದಂತವನು, ಚಾರಿತ್ರದಲ್ಲಿ ಧೀರ್ಪವಂತನು, ತೀರ್ಥಯಾತ್ರೆಯೆಂಬ ಕಾರ್ಯದಲ್ಲಿ ಹೊಳೆಯುವವನು, ಭಕ್ತಿ, ಜ್ಞಾನ, ವಿನಯ ಮಾರ್ಗಗಳಲ್ಲಿ ಜಯಿಸಿ ಬಂದವನು, ಇಡೀ ಪಂಡಿತ ಗಣಕ್ಕೆ ಅಗ್ರಮಾನ್ಯನು ಆಗಿದ್ದವನು, ಈ ಭಟ್ಟಾರಕ ಎಂದು ಮನೋಜ್ಞಾನವಾಗಿ ಈ ಪದ್ಯವು ಅವನ ವಿನಯ, ಜ್ಞಾನ, ಆಚಾರ, ವಿಚಾರಗಳೆಲ್ಲವನ್ನು ವರ್ಣಿಸಿದ್ದಾನೆ.

ಕ್ರಿ.ಶ.೯೮೬ರ ಜಂತ್ಲಿಶಿರೂರಿನ ಶಾಸನದಲ್ಲಿ ಅತ್ತಿಮಬ್ಬೆಯ ಬಗ್ಗೆ ತಿಳಿಸಿದ್ದು, ಇದರಲ್ಲಿ ಎರಡು ಕಂದ ಪದ್ಯಗಳಿದ್ದು ಒಂದನೇ ಪದ್ಯದಲ್ಲಿ[೧೬]

ಕಂದ:– ಆಹವಮಲ್ಲನ ಚರ. . . . .
. . . . ದಿಂ ಸನ್ದ ನಾಗದೇವನ ಮಗ
. . . . . . . . . . . . . . .
. . . . . . .ಸಿದ ನಾಗದೇವನ ಮಗಂ ॥
ಧ. . . . . . . . . . . . . . . . . . .
ಮ. ಈನನಿಳಯನಿವಹಕೆಲ್ಲಂ ಮುನ್ನಂ ಕರುವೆನು ಮಾಡಿಸಿದಳ್
ಸಿರಿವುರದೊ . . . . . . . . . .

ಈ ಪದ್ಯಗಳಲ್ಲಿ ನಾಗದೇವನ ವಂಶಾವಳಿಯನ್ನು ಹೇಳಿದ್ದು ಅತ್ತಿಮಬ್ಬೆ ಬಸದಿಯನ್ನು ಮಾಡಿಸಿದ ಬಗ್ಗೆ ಪದ್ಯಗಳು ತಿಳಿಸುತ್ತವೆ.

ಕ್ರಿ.ಶ.೧೦೦೭ರ ಲಕ್ಕುಂಡಿಯ ಸತ್ಯಾಶ್ರಯ ಇರಿವಬೆಡಂಗನ ಕಾಲದ ಶಾಸನವು ಸಂಪೂರ್ಣವಾಗಿ ಅತ್ತಿಮಬ್ಬೆಯ ಬಗ್ಗೆ ತಿಳಿಸುತ್ತದೆ.[೧೭] ಇದರಲ್ಲಿ ಇರಿವಬೆಡಂಗನನ್ನು ಹೊಗಳುವ ಮತ್ತು ಅಜಿತಪುರಾಣದ ೨ ಪದ್ಯಗಳಿವೆ.

ಶಾರ್ದೂಲ ವಿಕ್ರೀಡಿತ :– ಶ್ರೀಮದ್ರಾಮ ಮ[ಹೀಂ]ದ್ರದತ್ತ ಸಕಳಕ್ಷೋಣೀ ವಧೂಮಣ್ಡನೇ
ಸಾಕ್ಷಾತ್ಕೋಕನದಾಸನೇನ ಸದೃಶಂ ಬ್ರಹ್ಮಾತ್ಮ ಜೈಸ್ಸೇವಿತೇ

ಶುಂಭತ್ತೋಯಜನಾಭ ಪತ್ತನ ನಿಭೇ ಶ್ರೀಲೊಕ್ಕಿಗುಣ್ಡ್ಯಾಹ್ವಯೇ
ಜೈನಸ್ಥಾನ ಮಚೀಕರದ್ಗುಣನಿಧಿಃ ಶ್ರೀದಾನಚಿನ್ತಾಮಣಿಃ

ಚಾಲುಕ್ಯ ಚಕ್ರವರ್ತಿಯ ಸೈನ್ಯವನ್ನು ಸಲಹಿದ ಮಾತೆಯಾದ ಅತ್ತಿಮಬ್ಬೆಯು, ಲೊಕ್ಕಿಗುಂಡಿಯ ಸಹಸ್ರ ಬ್ರಾಹ್ಮಣರನ್ನು ಸಲಹುದಕ್ಕೆ ಜಿನಬಸದಿಯನ್ನು ಮಾಡಿಸಿ ಸಮರ್ಪಿಸಿದಳು.

ಉಪಜಾತಿ:– ಚಾಳುಕ್ಯ ಚಕ್ರಧ್ವಜಿನೀಪ ಮಾತ್ರಾ
ಸಮರ್ಪ್ಪಿತಃ ಕಾರಿತಜೈನಗೇಹಃ
ಶ್ರೀಲೊಕ್ಕಿಗುಣ್ಡ್ಯಾ[ಃ] ಪರಿಪಾಳನಾರ್ತ್ಥಂ
ಸಹಸ್ರಸಂಖ್ಯೇಷು ಧರಾಮರೇಷು॥

ಚಾಲುಕ್ಯ ಚಕ್ರವರ್ತಿ ತನ್ನನ್ನೇ ಸಮರ್ಪಿಸಿಕೊಂಡವನು. ಜೈನಧರ್ಮವನ್ನೇ ತನ್ನ ದೇಹವನ್ನಾಗಿ ಉಳ್ಳವನು. ಅಕ್ಷಪಟಳಾಧಿಪತಿಯಾಗಿ ವೃತಿಯನ್ನು ಮಾಡುವದಕ್ಕೋಸ್ಕರವಾಗಿ ಲೊಕ್ಕಿಗುಂಡಿಯನ್ನು ಉಂಬಳಿಯಾಗಿ ಪಡೆದ ಉದಾರಗುಣವುಳ್ಳವನು ಆಗಿ ಆಳುತ್ತಿರುವವನು ನಾಗಿಮಯ್ಯ ಎನ್ನುತ್ತದೆ.

ಕಂದ:– ಮಲ್ಲಾ ಮಲ್ಲಿಯೊಳಾನ್ತರಿ
ಮಲ್ಲರನಾಹವದೊಳೊತ್ತಿಗೋಳ್ಮುರಿ ಗೊಳ್ವೀ
ಬಲ್ಲಾಳ್ತನದಿ ನ್ನಾಹವ
ಮಲ್ಲನ ಭುಜಾದಣ್ಡಮೆನಿಸಿಧಂಲ್ಲಂ ನೆಗಟ್ದಂ॥

ಮಲ್ಲ–ಮಲ್ಲರೊಳಗೆ ಮಲ್ಲನೆನಿಸಿ, ಯುದ್ಧದಲ್ಲಿ ಮಲ್ಲರ ಗೋಣು ಮುರಿವ ಶೌರ್ಯತನದ ಅಹವಮಲ್ಲನ ಭುಜದಣ್ಡಾದಿಪತಿಯಾಗಿ ಧಲ್ಲಪಯ್ಯನು ಶೋಭಿಸುತ್ತಿದ್ದನು ಎಂದು ಹೇಳುತ್ತದೆ.

ಚಂಪಕಮಾಲವೃತ್ತ :– ಪೊಣರ್ದ್ದಿದಿರಾಗಿ ತಾಗಿದೊರ ನಾನೆಯೊಳೊಕ್ಕುವನೆಂದು ಬೆರ್ಚ್ಚ ಕೊಂ
ಕಣಮೆಟ್ಟಿಯಿಕ್ಕೆ ಬೆಂಗಿಬೆಱ ಗಾಗೆ ತಿವುಳ್ಳೆಲನಳ್ಳೆ ಮಾಳವ
ಮಣಿಯಿ ಪೊದಳ್ದುದಿರ್ಕ್ಕೆಲದ ಮುಂದ್ದಣ ಪಿನ್ದಣಮಣ್ಣಳಕ್ಕೆ ಭೀ
ಷಣಮತಿ ರೌದ್ರಮದ್ಭುತಮಗುರ್ವ್ವಿನ ತೇಜದಳುರ್ಕ್ಕೆಧಲ್ಲನ

ಯುದ್ಧವೇನಾದರೂ ಎದುರಾದರೆ ತಾನೇ ಮೊದಲಿಗೆ ಯುದ್ಧದಲ್ಲಿ ಪಾಲ್ಗೊಳ್ಳುವೆನೆಂದು ಹೇಳಿ, ತಾನೇ ಯುದ್ಧದಲ್ಲಿ ಮೊದಲಿಗನಾಗಿ ಪಾಲ್ಗೊಂಡು ಎಲ್ಲರೂ ಬೆರಗಾಗುವಂತೆ, ತನ್ನ ಎದುರಾದ ಅಕ್ಕ ಪಕ್ಕದ ಶತ್ರುಗಳೆಲ್ಲರನ್ನು ಭೀಷಣವಾಗಿ, ರೌದ್ರತನದಲ್ಲಿ ಸೋಲಿಸಿ ಅಧ್ಬುತವಾಗಿ ಯುದ್ಧವನ್ನು ಮಾಡುವವನು, ತೇಜಸ್ಸಿನಿಂದ ಕೂಡಿದವನಾಗಿದ್ದನು ಎನ್ನುತ್ತದೆ.

ಕಂದ :– ಧಲ್ಲಂಗಂ ನೆಗಟ್ದಾಹವ
ಮಲ್ಲಂಗಂ ಭೇದಮುಂಟೆ ವಿಭವದೊಳದನೇ

ನೆಲ್ಲರು ಮಱೆಯರ್ ಧರಣೀ

ವಲ್ಲಭ ಸಿಂಹಾಸನೈಕಭೇದಮೆ ಭೇದಂ॥

ಅವನಿಗೂ ದೊರೆಗೂ ಇದ್ದ ಭೇದವನ್ನು ಶಾಸನ 'ಧರಣೀವಲ್ಲಭ ಸಿಂಹಾಸನ ಏಕ ಭೇದ' ಎಂದು ಹೇಳುತ್ತದೆ. ಅಹವಮಲ್ಲನಿಗೂ ಧಲ್ಲಪನಿಗೂ ಭೇದಮುಂಟೆ. ಪದವಿ, ಗೌರವ, ದೊಡ್ಡಸ್ತಿಕೆ, ಐಶ್ವರ್ಯ, ಹಿರಿಮೆ, ಹಣ ಇದರಲ್ಲಿ ಎಲ್ಲರೂ ಮೆರೆಯಲು ಸಾಧ್ಯವಿಲ್ಲ. ಅಂತಹ ಧರಣಿಪಾಲಕನಿಗೂ ಇವನಿಗೂ ಭೇದಮಿಲ್ಲ ಎನ್ನಲಾಗಿದೆ.

ಮತ್ತೇಭವಿಕ್ರೀಡಿತ ವೃತ್ತ:- ಭರದಿಂ ರಾಮಣಸೇನೆಯಂ ತವಿಸಿ ಗೆಲ್ದಾ ಗಣ್ಡರುಂ ಭಣ್ಡಣಾ

ಜಿರದೊಳ್ ಕೌರವಸೇನೆಯಂ ತುಳಿದು ಗೆಲ್ದಾಗಣ್ಡರುಂ ಗಣ್ಡಮ

ಚ್ಚರದಿಂ ಶಕ್ತಿಯ ಬೀರರಂ ಪೊಣಟ್ಟು ಗೆಲ್ದಾ ಗಣ್ಡರು ವೀತಮ

ತ್ಸರದಿಂ ಭಾವಿಸುವಾಗಳೀ ಸಮರಕೊಳ್ಗಣ್ಡಂ ಬರಂ ಗಣ್ಡರೇ

ಯುದ್ಧದಲ್ಲಿ ರಾವಣನ ಸೈನ್ಯವನ್ನು ನಾಶಮಾಡಿದವರು, ಕೌರವ ಸೈನ್ಯವನ್ನು ತುಳಿದವರು ವೀರರೇ ಅಲ್ಲ. ಈಗ ಹೋರಾಟವನ್ನು ಮಾಡುವವನು ನಿಜವಾಗಿಯೂ ಪೌರುಷವಂತರು ಎಂದು ಹೇಳುತ್ತದೆ.

ಉತ್ಪಲಮಾಲವೃತ್ತ :-ಧಾಳಿಯೊಳಿಂದ್ರನಂ ಪಿಡಿದಪೆಂ ಮಗಧೇಶನ ನಿಕ್ಕಿ ಮೆಟ್ಟಿಪೆಂ

ಲಾಳನ ಗಂಟಲಂ ಮುರಿದಪೆಂ ಖಸನಂ ಪುಡಿಯೊಳ್ಪೊರಳ್ಚಿಪೆಂ

ಕೋಳದೊಳಿಕ್ಕಿಪೆಂ ಮಲೆನಪಾಣ್ಡ್ಯನ ನಾಹಮಲ್ಲದೇವನಿಂ

ಪೇಳೆನುತಿರ್ಪ್ಪನೀದೊರೆತು ಶೌರ್ಯ್ಯಗುಣೋನ್ನತಿ ನಾಗದೇವನ ॥

ಇದು ಉತ್ಪಲಮಾಲವೃತ್ತವಾಗಿದ್ದು ಇದರ ಲಕ್ಷಣವು ಈ ರೀತಿಯಿರುತ್ತದೆ ಉತ್ಪಲಮಾಲೆಯಪ್ಪುದು ಭರಂನಭಭಂರಲಗಂನೆಗಟ್ಟಿರಲ್. ಈತನು ದಾಳಿಯಲ್ಲಿ ಇಂದ್ರನನ್ನು ಹಿಡಿಯುತ್ತೇನೆ, ಮಗಧೇಶದ ರಾಜನನ್ನು ಸೋಲಿಸಿ, ಲಾಳನ ಗಂಟಲನ್ನು ಮುರಿಯುತ್ತೇನೆ, ಕೊಬ್ಬಿದ ಮಲೆಯ ಪಾಣ್ಡ್ಯರನ್ನು ಸೆರೆ ಹಿಡಿಯುತ್ತೇನೆ, ಅಲ್ಲದೆ ಮುಂದಿನ ಆಕ್ರಮಣ ಯಾವುದೆಂದು ಕೇಳುತ್ತಿದ್ದ ಶೌರ್ಯಗುಣಸಂಪನ್ನನಾದ ನಾಗೀದೇವ ಎಂದು ವರ್ಣಿಸಿದೆ.

ಉತ್ಪಲಮಾಲವೃತ್ತ :- ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಹೋಗಿ ಕಾ

ಣ್ಬನ್ನೆಗಮನ್ನಮಂ ತೊಱೆದು ಪರ್ವ್ವತಮಂ ಮುದದೇಱೆ ತಜ್ಜಿನಾ

ಸನ್ನದೊಳತ್ತಿಯಬ್ಬೆಗೆ ಪಥಶ್ರಮ ಮಾದೊಡಕಾಳವೃಷ್ಟಿಯಾ

ಯ್ತಿನ್ನವು ದೇವಭಕ್ತಿಗದು ಚೋದ್ಯಮೆ ಕೊಳ್ಳದೆ ಪುಟ್ಟಿವೃಷ್ಟಿಗಳ್

ಶ್ರವಣಬೆಳಗೊಳದ ಕುಕ್ಕುಟೇಶ್ವರ ಜಿನನಾದ ಬಾಹುಬಲಿಯನ್ನು ಅತ್ತಿಮಬ್ಬೆ ಹೋಗಿ ನೋಡುವವರೆಗೂ ಅನ್ನವನ್ನು ತ್ಯಜಿಸಿದಳು. ಸಂತೋಷದಿಂದ ಬೆಟ್ಟವನ್ನು ಹತ್ತುತ್ತಿರುವಾಗ ಅತ್ತಿಮಬ್ಬೆಗೆ

ಮಾರ್ಗಾಯಾಸವಾಯಿತು. ಆಗ ಅಕಾಲವೃಷ್ಟಿಯಾಯಿತು. ದೈವಭಕ್ತಿಗೆ ಅದು ಆಶ್ಚರ್ಯವೇನಲ್ಲ. ನ್ಯಾಯವಾಗಿ ಹೂವಿನಮಳೆ ಬೀಳಬೇಕಾಗಿತ್ತು ಎಂದು ಹೇಳುತ್ತದೆ. ಈ ಪದ್ಯವು ರನ್ನನ ಅಜಿತಪುರಾಣದಲ್ಲಿಯೂ ಇದೆ.

ಕಂದ:– ನರಪನ ಬೆಸದಿಂ ಜಿನನಂ
ಶಿರದೊಳ್ಸಲೆ ತಾಳ್ದಿ ದಾನಚಿಂತಾಮಣಿ ನಿ
ರ್ಭರ ಗೋದಾವರಿಯಂ ಪುಗೆ
ಪರಿ ಯುಡುಗಿದುದೆಂದೂಡೊಳ್ಪನದನೇ ವೇಳ್ವೆಂ ॥

ಚಾಲುಕ್ಯ ಸೈನ್ಯವು ಗೋದಾವರಿ ನದಿಯನ್ನು ದಾಟಿ ಆಚೆಯ ದಡದಲ್ಲಿರುವ ಶತ್ರು ಸೈನ್ಯವನ್ನು ಎದುರಿಸಬೇಕಾಗಿರುತ್ತದೆ. ಆದರೆ ನದಿಯಲ್ಲಿ ನೀರು ತುಂಬಿ ಹರಿಯುತ್ತಿದ್ದರಿಂದ ಆ ಕಡೆಗೆ ಸಾಗಲು ಸಾದ್ಯವಿಲ್ಲದಂತಹ ಪರಿಸ್ಥಿತಿ. ಆಗ ರಾಜನು ಚಿಂತಾಕ್ರಾಂತನಾಗಿ ಅತ್ತಿಮಬ್ಬೆಯಲ್ಲಿ ಪ್ರಾರ್ಥಿಸಲು, ಆ ಪ್ರಾರ್ಥನೆಗೆ ಒಪ್ಪಿದ ಅತ್ತಿಮಬ್ಬೆ ಜಿನಮೂರ್ತಿಯನ್ನು ತಲೆಯ ಮೇಲೆ ಹೊತ್ತು ಗೋದಾವರಿ ನದಿಯಲ್ಲಿ ಇಳಿದೊಡನೆ ನದಿಯ ನೀರು ಜಲ್ಲನೆ ಇಳಿದು ನಡೆದಾಡುವ ಮಟ್ಟಕ್ಕೆ ಬಂದಿತು. ಈ ಸಂತೋಷದಿಂದ ರಾಜನು ಗೌರವದಿಂದ ಅತ್ತಿಮಬ್ಬೆಗೆ ಪೂಜೆ ಸಲ್ಲಿಸಿದನು.

ಕಂದ:– ಮದವತ್ಕರಿಸೆಜೆಯಂ ಪಜೆ
ದೊದವಿದ ಮುಳಿಸಿಂದೆ ಭೋರನೆಯ್ತಂದೊಡದ ।
ರ್ಕ್ಷದಿರದಿರೆ ಭಕ್ತಿಯಿಂದದು
ಪದಯುಗ ಕೆಜಗಿದುದು ದಾನಚಿಂತಾಮಣಿಯ ॥

ಮದವೇರಿದ ಆನೆಯೊಂದು ಕಟ್ಟಿದ ಕಟ್ಟನ್ನು ಬಿಚ್ಚಿಕೊಂಡು, ಬೀದಿಗಳಲ್ಲಿ ಹುಚ್ಚೆದ್ದು ಓಡುತ್ತಿರುವಾಗ, ಅದರಿಂದ ಗಾಬರಿಗೊಂಡು ತೊಂದರೆಗೊಳಗಾದ ಜನ ಅತ್ತಿಮಬ್ಬೆಯಲ್ಲಿ ಪ್ರಾರ್ಥಿಸಿದರು. ಆಗ ಅತ್ತಿಮಬ್ಬೆಯು ಶಾಂತಚಿತ್ತಳಾಗಿ, ಗಾಂಭೀರ್ಯದಿಂದ "ಣ"ಮೋಕಾರ ಮಂತ್ರ ಹೇಳುತ್ತಾ, ಆನೆಯ ಹೆಸರು ಕರೆದು ಈ ಉನ್ಮತ್ತತನವನ್ನು ಬಿಡಲು ಹೇಳಿದ ಕೂಡಲೇ ಮದವೇರಿದ ಆನೆ ತನ್ನ ಮದ ಕಳೆದುಕೊಂಡು ಅತ್ತಿಮಬ್ಬೆಯ ಕಾಲಿಗೆರಗಿತು.

ಕಂದ:– ಮುದದರ್ಚ್ಚಿಪ ಜಿನಬಿಂಬಂ
ನದಿಯೊಳ್ಕಯ್ಬುರ್ದ್ದಿಕಿ ಬಿಟ್ಟೊಡದು ಬಪ್ಪಿನ ಮು
ಣ್ಬುದ ನುಳಿದಿರ ಲೆಂಟುದಿನ
ಕ್ಕದು ಬಂದುದು ಕಯ್ಗೆ ದಾನಚಿಂತಾಮಣಿಯ ॥

ಮುದದಿಂದ ಪೂಜಿಸುತ್ತಿದ್ದ ಜಿನಬಿಂಬ, ನದಿಯಲ್ಲಿ ಪ್ರಯಾಣಿಸುವಾಗ ಕೈಜಾರಿ ಬಿದ್ದುಹೋಗಲು, ಆಗ ಅತ್ತಿಮಬ್ಬೆಯು ಚಿಂತಾಕ್ರಾಂತಳಾಗಿ ಆಹಾರ ನೀರು ತೊರೆದು, ಜೈನ ಬಸದಿಯಲ್ಲಿ "ಣ"ಮೋಕಾರ ಮಂತ್ರ ಜಪಿಸುತ್ತಾ ಕುಳಿತುಬಿಡುತ್ತಾಳೆ. ಆಗ ಎಂಟು ದಿನಗಳ ನಂತರ ಜಿನಬಿಂಬವು ಮರಳಿಬಂದು ಅತ್ತಿಮಬ್ಬೆಯ ಕೈಸೇರಿತೆಂದು ಈ ಪದ್ಯದಿಂದ ತಿಳಿದುಬರುತ್ತದೆ.

ಕಂದ:– ಪ್ರಳಯಾಗ್ನಿಯನ್ತೆ ಕಟಕಮ
ನೊಳಕೊಣ್ಡಿಳುರ್ವ್ವಗ್ನಿ ದಾನಚಿನ್ತಾಮಣಿ ನಿ
ರ್ಮ್ಮಳಜನ ಗನ್ಧೋದಕಮಂ
ತಳಿಯ ಲ್ಕುಪಶಮಿಸಿತೆನ್ದೊಡೇ ವಣ್ಣಿಸುವೆ ॥

ಬ್ರಹ್ಮಾಂಡವನ್ನೇ ಸುಟ್ಟು ಹಾಕುವ ಪ್ರಳಯಾಗ್ನಿಯೊಂದು ಕಟಕದಲ್ಲಿ ಕಾಣಿಸಲಾಗಿ, ದಿಕ್ಕೆಟ್ಟ ಜನ ಅತ್ತಿಮಬ್ಬೆಯಲ್ಲಿ ಮೊರೆಯಿಡಲಾಗಿ, ಅತ್ತಿಮಬ್ಬೆಯು ಜನತೆಗೆ ಧೈರ್ಯವನ್ನು ಹೇಳಿ, ನಿರ್ಮಲ ಮನಸ್ಸಿನಿಂದ ಜಿನಗಂಧೋದಕವನ್ನು ಅಗ್ನಿಗೆ ಚಿಮುಕಿಸಲು, ಅಗ್ನಿ ಮರುಕ್ಷಣವೆ ಉಪಶಮನವಾಯಿತು. ಹೀಗೆ ಆ ಶಾಸನದಲ್ಲಿ ಆಕೆಯ ಪವಾಡವನ್ನು ಹೊಗಳಲಾಗಿದೆ. ಇಲ್ಲಿ ಇದ್ದ ಮತ್ತೊಂದು ಶಾಸನ ಇಂದು ಇಲ್ಲವಾಗಿದೆ. ಇದರಲ್ಲಿ "ಸೆಟ್ಟಿಯ ಮಗಂ ಸೋವಿಸೆಟ್ಟಿ ಮುನ್ನಂ ಬಸದಿಯ ಮಾಡಿಸಿ ಬಿಟ್ಟ" ಎಂದು ಇದೆ. ಅಂದರೆ ಮೊದಲೇ ಸೋವಿಸೆಟ್ಟಿ ಎಂಬುವವನು ಬಸದಿಯನ್ನು ನಿರ್ಮಿಸಿದ್ದ ಎಂದು ತಿಳಿದುಬರುತ್ತದೆ. ಅಲ್ಲದೆ ಮೊದಲು ನಿರ್ಮಾಣವಾದಂತಹ ಬಸದಿಗಳಿಗೆ ನಮ್ಮ ಜನರು ಮಾನ್ಯತೆ ನೀಡಿ, ಅವುಗಳ ನಿರ್ವಹಣೆಗಾಗಿ ಮುಂದೆಯೂ ಶ್ರಮಿಸುತ್ತಿದ್ದುದು ನಮಗೆ ವೇದ್ಯವಾಗುತ್ತದೆ.

ಕಂದ:– ಒಡನೇಜಿ ಸವತಿ ನೂಂಕ
ಲ್ಕೊಡರಿಸಿ ತೊಱೆಯೊಳಗೆ ಪೞುಗಲತ್ತಿತ್ತಲಣಂ
ಮಿಡುಕದೆ ತಿರಿಯುತ್ತಿರೆ ಕ
ಣ್ಡಡಿಗೆಱಗಿದಳತ್ತಿಯಬ್ಬೆ ಸತಿಭಯವಶದಿಂ

ಒಮ್ಮಿಂದೊಮ್ಮೆಲೆ ಸವತಿಯು ಅತ್ತಿಮಬ್ಬೆಯನ್ನು ತೊರೆಯೊಳಗೆ ನೂಕಿದಾಗ, ಆಕೆಯು ಮುಳುಗದೆ ಮಿಡುಕದೆ ಇದ್ದಾಗ ಆ ಸವತಿಯು ಅತ್ತಿಮಬ್ಬೆಯ ಅಡಿಗಳಿಗೆ ಎರಗಿದಳು.

ಕಂದ:– ಜಿನಧರ್ಮ್ಮ ಪತಾಕೆಗೆ ವಿಮ
ಳ ನರ್ಮ್ಮದಾ ನದಿಯ [ಕು]ರುಳ ಪಾವೆಯ ಜಿನನಂ
ವಿನುತಂ ಕಾಣ್ಬೆನೆಗಂ ಕೂ
ಳನೆ ತೊಱೆದುದು ಸನ್ದುದನ್ತದಾ ಜನ್ಮಾನ್ತಂ ॥

ನಿರ್ಮಲ ಭಕ್ತಿಯಿಂದ ಜಿನಧರ್ಮದ ಕೀರ್ತಿಗೆ ಪತಾಕೆಯಂತೆ ಇದ್ದ ಅತ್ತಿಮಬ್ಬೆಯು ಪೂಜಿಸುತ್ತಿದ್ದ ಜಿನನಬಿಂಬ ನರ್ಮದಾ ನದಿಯಲ್ಲಿ ಕಾಣದಾದಾಗ, ಅನ್ನವನ್ನು ಮುಟ್ಟದೆ ಇದ್ದಾಗ ಮತ್ತೆಬಂದಿತು ಜನ್ಮಜನ್ಮದ ಸಂಬಂಧದಂತೆ ಆ ಜಿನಬಿಂಬ ಎಂದು ಚಿತ್ರಿಸಲಾಗಿದೆ.

UUU|U _U|_U U|U _U |U_ U|U_U| _U_

ಚಂಪಕಮಾಲವೃತ್ತ :- ಜಿನಪದ ಪಂಕಜಭ್ರಮರನೆಂಬ ನೆಗರ್ತ್ತೆಯನಾಳ್ದ ಮಲ್ಲಪ
ಯ್ಯನ ನೆಗೞ್ದಪ್ಪಕಬ್ಬೆಯ ಮಗಳ್ ಶಚಿವೋತ್ತಮನಪ್ಪ ಧಲ್ಲಪ
ಯ್ಯನ ಸೊಸೆ ನಾಗದೇವನ ಕುಳಾಂಗನೆ ತೈಲನ ತಾಯ್ಜಸಕ್ಕೆ ಭಾ
ಜನಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತಮಿಟ್ಟಿಪಳ್॥

ಇದು ಚಪಕಮಾಲಾವೃತ್ತವಿದ್ದು ನಜಭಜಜಂಜರಂಬಗೆಗೊಳುತ್ತಿರೆ ಚಂಪಕಮಾಲೆಯೆಂದಪರ್ ಸೂತ್ರವನ್ನು ಹೊಂದುತ್ತದೆ. ಇಂತಹ ಹಲವು ಪದ್ಯಗಳನ್ನು ನೋಡಬಹುದು. ಜಿನಪದವೆಂಬ ಕಮಲದಹೂವಿಗೆ ಎರಗುವ ದುಂಬಿಯಂತಿರುವ, ಮಲ್ಲಪಯ್ಯನ ಹೆಂಡತಿ ಅಪ್ಪಕಬ್ಬೆಯ ಮಗಳು ಶಚಿವೋತ್ತಮನಾದ ನೂರ್ಮಡಿ ತೈಲಪನ ಮಹಾಮಂತ್ರಿ ಧಲ್ಲಪನ ಸೊಸೆಯಾಗಿ, ನಾಗದೇವನಿಗೆ ಕುಲಾಂಗನೆಯಾಗಿ, ತೈಲನ ತಾಯಿಯಾಗಿ, ತಾಯ್ತನಕ್ಕೆ ಹೆಸರಾದ ಅತ್ತಿಮಬ್ಬೆಯು, ಸದಾಕಾಲ ಜಿನಧರ್ಮವನ್ನು ಬೆಳಗುತ್ತಿದ್ದಳು ಎಂದು ಈ ಶಾಸನ ಹೇಳುತ್ತದೆ. ಈ ಪದ್ಯವೂ ಸಹ ರನ್ನನ ಅಜಿತ ಪುರಾಣದಲ್ಲಿ ಇದೆ.

ಚಂಪಕಮಾಲವೃತ್ತ :- ಎಣೆ ಮರುದೇವಿ ಪಾಸಟಿ ಸುಷೇಣೆ ಸಮಂ ಶಿವದೇವಿ ಪಾಟಿ ಲ
ಕ್ಷ್ಮಣೆ ಸದೃಶಂ ಮಹಾವಿಜಯಸೇನೆ ಸಮಾನೆ ಸುಸೀಳೆ ಪೋಲ್ವೆ ರು
[ಕ್ಮಿ]ಣಿ ಸರಿ ಸತ್ಯಭಾಮೆ ತೊಣೆ ಮಿಕ್ಕ ಸುಳೋಚನೆ ತತ್ಸ್ವರೂಪೆ ರೋ
ಹಿಣಿ ದೊರೆ ಸಂದರುನ್ಧತಿ ಪೆಱಜ್ದೊರಯೇ ಗುಣದಂಕಕಾರ್ತ್ತಿಯೋಳ್॥

ಮರುದೇವಿಗೆ ಸಮಾನವಾದವಳು, ಸುಷೇಣೆಯಂತವಳು, ಶಿವದೇವಿಯಂತೆ ಸುಲಕ್ಷಣಉಳ್ಳವಳು, ಮಹಾವಿಜಯಿಸೇನೆಯನ್ನು ಸಾಕಿದವಳು, ರುಕ್ಮಿಣಿಯನ್ನು ಹೋಲುವವಳು, ಸತ್ಯಭಾಮೆಯಂತೆ ಹೊಣೆಹೊತ್ತವಳು, ಸರ್ವ ಗುಣಗಳ ಆಗರವೇ ಆಗಿದ್ದಳು ಈಕೆ ಎಂದು ವಿವರಿಸುತ್ತದೆ.

UU_| _UU|_U _|U UU|_ _ _|U_ _|U _

ಮತ್ತೇಭ ವಿಕ್ರೀಡಿತ:- ಪರಮ ಶ್ರೀ ಜಿನನಾಥ ಗೇಹ ವಿಳಚ್ಛಂದೋಹ ಸಂದೋಹ ಭಾ
ಸುರ ಜೈನ ಪ್ರತಿಮಾ ವಿಚಿತ್ರ ಮಣಿಘಂಟಾ ಮಾಳಿಕಾ ಸಂಖೆ ಸಾ
ಯಿರದಯ್ದೂಱಿವು ಬೇ[ಱೆ]ವೇ[ಱೆ]ನಿಪಿನಂ ನಿರ್ಮ್ಮಾಪಣಂ ಗೆಯ್ದು ಭೂ
ಭರದೊಳ್ ಧರ್ಮ್ಮಮನತ್ತಿಮಬ್ಬೆಯವೊಲಿನ್ತಾರುಜ್ವಳಮಾಡಿದರ್॥

ಪರಜಿನನಾಥನ ಸಾವಿರದ ಐದುನೂರು ಪ್ರತಿಮೆಗಳನ್ನು ಮಾಡಿಸಿ ದಾನನೀಡಿ ಜಿನಧರ್ಮವು ಇನ್ನೂ ಹೆಚ್ಚು ಬೆಳೆಯಲು ಅತ್ತಿಮಬ್ಬೆ ನೆರವಾದಳು ಎಂದು ಆಕೆ ಜೈನಧರ್ಮಕ್ಕೆ ತಾನು ನೀಡಿದ ಕೊಡುಗೆಯನ್ನು ಇದು ಚಿತ್ರಿಸುತ್ತದೆ. ಅಲ್ಲದೆ ನಿರ್ಮಲ ಮನಸ್ಸಿನಿಂದ ಭೂಮಿಯ ಮೇಲೆ ಜೈನಧರ್ಮ ಉಜ್ವಲವಾಗಿ ಬೆಳೆಯುವಂತೆ ಈಕೆ ಮಾಡಿದಳು ಎಂಬುದಾಗಿ ಈ ಪದ್ಯದಲ್ಲಿ ವರ್ಣಿಸಿದೆ. ಈ ಪದ್ಯವು ಮತ್ತೇಭವಿಕ್ರೀಡಿತ ವೃತ್ತದಲ್ಲಿದ್ದು ಸಂಪೂರ್ಣ ಲಕ್ಷಣವನ್ನು ಹೊಂದಿರುತ್ತದೆ.

ಕಂದ:– ಆ ಪರಮೇಶ್ವರ್ರಿಗೆ ಜಗ
ದ್ವ್ಯಾಪಕ ಶುದ್ಧೇಂದುಕೀರ್ತ್ತಿ ಪಿರಿಯಮಗಂ ಲ।
ಕ್ಷ್ಮೀಪತಿ ಸಮಗ್ರ ವಿಜಯ
ಶ್ರೀಪತಿಯನೆ ಧರೆಗೆ ನೆಗಟ್ದಪಡವಳ ತೈಲಂ॥

ಅಂತಹ ಪರಮೇಶ್ವರಿಗೆ, ಜಗತ್ತಿಗೆ ವ್ಯಾಪಕವಾಗಿ ಶುದ್ಧಕೀರ್ತಿವಂತನಾದ, ಹಿರಿಯಮಗನಾದ ತೈಲಪನು ಲಕ್ಷ್ಮೀಪತಿಯಾಗಿ, ಸಮಗ್ರ ವಿಜಯಕ್ಕೆ ಶ್ರೀಪತಿಯೆನಿಸಿ, ಭೂಮಿಯಲ್ಲಿ ಪ್ರಖ್ಯಾತಿ ಪಡೆದಿದ್ದನು.

ಚಂಪಕಮಾಲವೃತ್ತ :– ಪಗರಣಮಣ್ಮಮೆಚ್ಚು ಪನಿ ಘೃಷ್ಟಿಯೆ ಬೂದಿಯಿ(ಂ) ಬೊಟ್ಟು ಗಣ್ಡವಾ
ತುಗಿಬಗಿ ಕೀರ್ತ್ತಿ ಕುಪ್ಪಕುಜೆ ಮುತ್ತರ ಮೂದಲೆ ಪೆಂಪು ವಿಕ್ರಮಂ
ಭಗವತಿಯೇೞು ಶೌಚಗುಣ ಮತ್ತಿಯಪಣ್ಣೆನಿಪೇಳಮುಣ್ಡರಂ
ತಗಳ್ವುದುದಾರ ಚಾರು ಚರಿತಪ್ರಭೆಯಿಂ ಪಡೆವಳ್ಳ ತೈಲನಾ॥

ತೈಲನ ಚಿತ್ರಣವನ್ನು ಈ ಪದ್ಯ ಬಿಂಬಿಸುತ್ತದೆ. ಇವನಿಗೆ ಶತೃಗಳನ್ನು ಮರ್ದನ ಮಾಡುವುದು ಅವನ ಕೀರ್ತಿಗೆ ತಿಲಕವಿಟ್ಟಂತೆ. ಇವನ ಪೌಕರುಷತನ ಮೂಲೆ–ಮೂಲೆಗೆ ಹಬ್ಬಿ ಪಸರಿಸಿತ್ತು, ಆತನ ಗುಣವು ಚರಿತ್ರೆಯಲ್ಲಿ ಬೆಳಗುತ್ತಿದೆ ಎಂದು ತಿಳಿಸುತ್ತದೆ.

ಮಹಾಸ್ರಗ್ಧರಾವೃತ್ತ :– ವಿಳಸದ್ಭೂದೇವವೇದಧ್ವನಿಸಮುಚಿತ ಧರ್ಮ್ಮಾರ್ತ್ಥಶಾಸ್ತ್ರಾರ್ತ್ಥವನ್ನಿ
ರ್ಮ್ಮಳ ಧರ್ಮ್ಮೋರ್ತ್ಥೋಕ್ತಿ ನಾನಾಜನಪದ ಜ[ನ] ತಾನನ್ದ ಕೋಳಾಹ. .
. . . ಣ್ಯ ಸಂಪದ್ವಿಳಸನ ಮಳವಟ್ಟಿರ್ಪ್ಪಿನಂ ತನ್ನೊ ಳು ವ್ವಿ೯
ಲಲನಾ ಲಾಲಾಟ ಲೀಳಾತಿಳಕಮೆನಿಸಿ ಸಂ. . . ಹಾರಂ. . .

ಚಂಪಕಮಾಲವೃತ್ತ :– . . . . . . . .ರಣಾಗತವಾರಿಧಿ ತಚ್ಚರರ್ಯ್ಯಶಃ
ಪ್ರಸರ ವಿಲಾಸ ರಂಜಿತ ದಿಶಾವಳಯರ್ದ್ವಿಜ ಮುಖ್ಯರಾನ
. . . . . ದರ್ನ್ನಯ ಶಾಸ್ತ್ರವಿಶಾರದ ವ್ವಿರಾ
ಜಿಸುತಿರಲಾ ಚುತುಸ್ಸೆಮಯ ರಕ್ಷಕರುದ್ವ ಗುಣೌಘ ರಂಜಿತರ್

ಈ ಪದ್ಯದಲ್ಲಿ ನಕ್ಷತ್ರದಂತೆ ಶೋಭಾಯಮಾನಳಾದ, ತಾಯಿಯಿಂದ ಜನಿಸಿದ, ವೇದ ಧರ್ಮ ಶಾಸ್ತ್ರಗಳನ್ನು ತಿಳಿದ, ಧರ್ಮೋಕ್ತಿಗಳನ್ನು, ನಾನಾ ಜನಪದಗಳನ್ನು ಅರಿತವನು ಮುಂತಾಗಿ ವರ್ಣಿಸಲಾಗಿದೆ. ಪದ್ಯ ತೃಟಿತವಾಗಿದೆ.

ಉತ್ಪಲಮಾಲೆ:- ಇನ್ತೆನಿಸಿಬ್ದ [ತ]ತ್ಪುರವರಾಚಳ ಶೇಖರಮೇಂಬಿನಂ ದಿಶಾ
ದನ್ತಿಯ ದನ್ತಕಾನ್ತಿ ನಿಜಸೌಧ ವಿಶಾಳವಿಲೋಳ ಭಿತ್ತಿಯೊ
ಳ್ಸಂತತಮೊಪ್ಪು ತಿರ್ಪ್ಪಿನೆಗಮೂರ್ಜ್ಜಿತಮಪ್ಪಿನಮತ್ತಿಯಬ್ಬೆ ಚೈ
ರನ್ತನ ಚೇಳಿನೀ ಚರಿತ ಮಾಡಿಸಿದಳ್ಜಿನರಾಜಗೇಹಮಂ॥

ಈ ರೀತಿ ಇದ್ದ ಆ ಪುರದಲ್ಲಿ ಕಿರೀಟದಂತಿರುವ, ನಾಲ್ಕೂ ದಿಕ್ಕುಗಳಿಗೆ ಶಿಖರದಂತೆ ವಿಶಾಲವಾಗಿಯೂ, ಸುಂದರವಾಗಿಯೂ ಇರುವಂತೆ, ಅತ್ತಿಮಬ್ಬೆಯು ಗುರುವಿನಿಂದ ಪಡೆದ ಗುರೂಪದೇಶದಂತೆ ಆ ಭವನವನ್ನು (ಬಸದಿಯನ್ನು) ಮಾಡಿಸಿದಳು.

UU_| _ _U| _ _ U|UUU|UU_| _ U _ | _ U_ | _

ಮಹಾಸ್ರಗ್ಧರೆ:-ಜಿತದೇವಾಧೀಶ ವಾಸಾಸ್ಪದಮಧರಿತ ನಾ[ಗೇ]ಂದ್ರ ನೀಡೋನ್ನತಂ ರಂ
ಜಿತ ನಾನಾ ಕೂಟ ಶೋಭಾ ವಿಭವಮುದಿತ ತತ್ಕಾಮಿನೀ ಚಾರುಕೀರ್ತ್ತಿ
ಪ್ರತತಿ ಪ್ರೋತ್ಕಂದಮೆಂಬನ್ತೆಸೆದುದಸದಳಂ ಲೊಕ್ಕಿಗುಣ್ಡೀ ಪುರೋರ್ಬ್ಬಿ
ಪತಿಚಂಚದ್ರತ್ನ ಕೋಟಿಸ್ಫುರಿತ ಮಕುಟ ಸಂಭಾಸ ಜೈನಾಧಿವಾಸಂ॥

ಈ ಪದ್ಯವು ಮಹಾಸ್ರಗ್ಧರಾವೃತ್ತದಲ್ಲಿದ್ದು ಸಪೂರ್ಣ ಲಕ್ಷಣಗಳನ್ನು ಹೊಂದಿದೆ ಇಂತಹ ಹಲವಾರು ಪದ್ಯಗಳನ್ನು ಶಾಸನಗಳಲ್ಲಿ ನೋಡಬಹುದು. ದೈವಾಂಶವನ್ನು ಹೊಂದಿದವನು, ದಾನಧರ್ಮಗಳನ್ನು ಮಾಡುವವನು, ಶೋಭಾಯಮಾನನು, ಉನ್ನತಪದವಿಭಾಜನನು, ಜೈನಗುರು ಚಾರುಕೀರ್ತಿಯವರ ಆಶೀರ್ವಾದದ ಫಲದಿಂದ ಶೋಭಿಸುತ್ತಿರುವುದು ಲಕ್ಕುಂಡಿಯ ಜೈನ ಬಸದಿಯು.

ಕಂದ:- ಆ ಸತಿ ಮುಮ್ಮಾಡಿಸಿದಾ
ಸಾಸಿರದಯ್ನೂಱು ಬಸದಿಗಿದು ಕಳಶಮೆನ
ಲ್ಭಾಸುರಮಾಯ್ತು ಜಿನೇಂದ್ರಾ
ವಾಸಂ ತೊಳಗುವ ಸುವರ್ಣ್ನ ಕಳಶೋನ್ನತಿಯಿಂ

ಆ ಸತಿ ಮೊದಲು ಮಾಡಿದ ಸಾವಿರದಯನೂರು ಬಸದಿಗಳಿಗೆ ಚಿನ್ನದ ಕಳಶವಿಟ್ಟಂತೆ ಈ ಲಕ್ಕುಂಡಿಯ ಬಸದಿಯು ಶೋಭಿಸುತ್ತಿತ್ತು ಎಂದು

ಕಂದ:- ಬ್ರಹ್ಮನೆ[ದ]ಲ್ನಮಗಾದೀ
ಬ್ರಹ್ಮಜಿನಂ ತಾನೆನುತ್ತೆ ಸಾಸಿರ್ವ್ವರುಮೀ

ಬ್ರಹ್ಮ ಜಿನ ನಿಳಯಕಿತ್ತರ್

[ಬ್ರ]ಹ್ಮಜಿನಳಯಮೆನಿಪ್ಪ ಪೆಸರಂ ಮುದದಿಂ

ಬ್ರಹ್ಮನೆ ಬೆರಗಾಗಿ ನೋಡುವಂತೆ, ವೈಭವದಿಂದ ಸಾಸಿರ್ವರು ಬ್ರಹ್ಮಜಿನಾಲಯಕ್ಕೆ ಈ ಹೆಸರನ್ನು ಅತಿ ಸಂತೋಷದಿಂದಿಟ್ಟರು.

ಚಂಪಕಮಾಲವೃತ್ತ :– ಕಳಶದಿನುದ್ಧ ಕನ್ನಡಿಯಿನುನ್ನತ ಚಾಮರದಿಂ ಕರಂ ಮನಂ
ಗೊಳಿಸುವ ಶಂಖದಿಂದುಭಯ[ಚೌ]ಕದಿನುಜ್ವಳ ಛತ್ರದಿನ್ದನಾ
ವಿಳಕುಳ ಲಂಜಿತೋತ್ಕರದಿನೊಪ್ಪುವ ಪಂಚಮಹಾನಕಂಗಳಿಂ
ಬಳಸಿ ಪೊದಳ್ದ ವಾಜಿದಳದಿಂದಮಗುರ್ವ್ವಿಪ ವೀರ ಕೋಟಿಯಿಂ॥

ಕಳಸ, ಕನ್ನಡಿ, ಉನ್ನತ ಚಾಮರದಿಂದ ಕಂಗೊಳಿಸುವ, ಶಂಖದಿಂದ ಉಭಯ ಉಜ್ವಲವಾಗಿರುವ ಸಮುದ್ರವನ್ನೇ ಲಂಘಿಸುವಂತೆ, ಪಂಚಮಹಾನಕಂಗಳಿಂ ಬಳಸಿ ಹೋಗುವ ಕುದುರೆ ದಳದಿಂದ, ಶತೃರಾಜರನ್ನು ಸೋಲಿಸಿ, ರಾಜಧಾನಿಗೆ ಬರುವ ವೀರಸೈನಿಕರನ್ನು ನೋಡುವುದೇ ಒಂದು ಸೊಗಸು ಎಂದು ಲಕ್ಕುಂಡಿಯ ಶಾಸನವು ವರ್ಣನಾಮಯವಾದ ಒಂದು ಸಣ್ಣ ಕಾವ್ಯದಂತೆಯೇ ಕಾಣುತ್ತದೆ.

ಮತ್ತೇಭ ವಿಕ್ರೀಡಿತ:– ಶಬಳಂ ರತ್ನದ ತೇಜಮುನ್ತುಮಧಿದೆಯ್ವಂ ಶಂಕಿಡೀಯೂರ್ಗ್ಗೆ ಚಂ
ದ್ರಬಳಂ ಬ್ರಹ್ಮ ಜಿನೇಂದ್ರ ಗೇಹಮೆನುತಂ ಬಂದರ್ತ್ತಿಯಿಂ ಸೇಸೆಗೊ
ಣ್ಡು ಬಲಂಗೊಣ್ಡು ಸಮನ್ತು ಪೋದನೆಸೆವೀ ಗ್ರಾಮಾಧಿಪಂ ಸಂದ ಬಾ
ದುಬೆ ದೀಪಾವಳಿ ಕಾರಪುಣ್ಣಮೆ ಯೆನಿಪ್ಪೀ ಮೂಱು ಪರ್ವ್ವಂಗಳೊಳ್॥

ಹಲವು ರತ್ನಗಳ ತೇಜಸ್ಸಿನಿಂದ ಕೂಡಿದ ಕುಲದೇವರು, ಚಂದ್ರಬಲದಿಂದ ಬ್ರಹ್ಮಜಿನ ದೇಹಮೆನುತ ಬಂದು, ಸೇಸೆಯನ್ನು (ಅಕ್ಷತೆಯನ್ನು) ಪಡೆದು ಸಮಾಧಾನದಿಂದ ಹೋದನು. ಪ್ರಖ್ಯಾತಿಪಡೆದ ಗ್ರಾಮಾಧಿಪತಿಯು ದೀಪಾವಳಿ ಮತ್ತು ಕಾರಹುಣ್ಣಿಮೆಯ ಮೂರುಪರ್ವಗಳಲ್ಲಿ

ಕಂದ:– ಬತ್ತಿಯಿ. . .[ಗು]ದ
ಲ್ಮಾತ್ತಾರ್ಗ್ಗಂ ಸಲ್ಲದೀ ಬಸದಿಯೊಡೆಮೆಯನತ್ಯು
ದೃತ್ತಂಗನ್ತದು ತಾನೆಟ್ಟೆ
ಗುತ್ತಂ ಗ್ರಾಮಕ್ಕೆ . . . ಧರ್ಮ್ಮದ್ರೋಹಂ ॥

ಈ ಪದ್ಯವು ತೃಟಿತಗೊಂಡಿದ್ದು, ಬಸದಿಯ ವಸ್ತುಗಳನ್ನು ಬಳಸಿದೊಡೆ ಅದು ಧರ್ಮದ್ರೋಹ ಎನ್ನುತ್ತದೆ. ಅಲ್ಲದೆ ದೇವಾಲಯದ ಸೊತ್ತು ದೇವಾಲಯಕ್ಕಲ್ಲದೆ ಅನ್ಯ ಕಾರ್ಯಗಳಿಗೆ ಬಳಸುವುದು ಉಚಿತವಲ್ಲವೆಂದು ಈ ಪದ್ಯದಲ್ಲಿ ತಿಳಿಸಲಾಗಿದೆ.

ಕಂದ:- ಒಸೆದಿತ್ತ ರ್ಮ್ಮಾಜನಮಿೂ

ಬಸದಿಯ ಸೂಳೆಗೆ ವಿಶೇಷದಿಂ ಪರಿಯರಮ್ಮೆಂ

ದ ಸತುದಜಿಮ್ಮೆಂದಿ ಕರವಡ

ವಿಸಿವಾಕೂಳ್ಳಾಳ[ಗ್ಯೆ] ಯ್ದು ತಳಬೋಗ ವಿವಾ

ಬಸದಿಯ ಸೂಳೆಗೆ ಆನಂದದಿಂದ ವಿಶೇಷವಾಗಿ ಕೊಟ್ಟ ಹಿರಿಯರ ಅಪ್ಪಣೆಯಂತೆ, ಆಕೆಗೆ ಎಲ್ಲಾ ತೆರನಾದ, ಬದುಕಲು ಯೋಗ್ಯವಾದ ಅನುಕೂಲಗಳನ್ನು ಮಾಡಿಕೊಡುವುದು ಅಲ್ಲದೆ ವೇಶ್ಯೆಯರನ್ನು ನಿಕೃಷ್ಟವಾಗಿ ನೋಡದೇ ಅವರೂ ಸಹ ಸಾಮಾನ್ಯ ಮನುಷ್ಯರಂತೆ ಬದುಕಲು ಅರ್ಹರು, ಆದ್ದರಿಂದ ಅವರಿಗೂ ಸಾಮಾನ್ಯ ಜನರಿಗೆ ದೊರಕುವಂತಹ ಅನುಕೂಲಗಳು ದೊರೆಯುವುದು ನ್ಯಾಯಸಮ್ಮತವಾದುದು ಎನ್ನುತ್ತದೆ ಈ ಪದ್ಯ.

ಕಂದ:- ಆವಂ ಬಸದಿಗಳೊಳಕ್ಕೆ

ದೇವಗ್ಗೇಸೆವಗ್ರಪೂಜೆ ಪೂಜಾರಿಗಮೆ

ನ್ದೀವರೊಸೆದಿತಂ ಕುಪಿಣದ

ದೇವರ ವಲ್ಲಭನ ತೇಜಮನಿತುಂ ನಡೆಗುಂ

ಅವನು ಬಸದಿಯೊಳಗೆ ದೇವರಿಗೆ ಶೋಭಿಸುವ ಅಗ್ರಪೂಜೆಯನ್ನು ಮಾಡಿಕೊಂಡು, ದೇವರ ನಿತ್ಯ ಪೂಜೆಗಳನ್ನು ನಡೆಸಿಕೊಂಡು ಹೋಗುವುದು.

ಕಂದ:- ಬೋಧಿಸವೆ ಪೆಱವು ಜಿನಗೃಹ

ಕ್ಕಾಧಿಕ್ಯಮದಿಲ್ಲೇನಿಪ್ಪುದಂ ಸನ್ಯಸನಾ

ರಾಧನೆಯ ಜವದಿ ಸನ್ದ ನಿ

ಶ್ರೀಧಿಗೆಯಡ್ಡಣಿಗೆ ಥಳಿಗೆ ಪಟ್ಟಮಿವಿ[ನಿ]ತುಂ

ಈ ಜಿನಧರ್ಮ ಬೋಧನೆಯಂತೆ ಸನ್ಯಾಸವನ್ನು ಕೈಗೊಂಡು, ಜಪ-ತಪಗಳನ್ನು ಮನಗೊಂಡು ಮಾಡುವುದು ಜೊತೆಗೆ ದೇವರಿಗೆ ನೈವೇದ್ಯಗಳನ್ನು ನಡೆಸಿಕೊಂಡು ಹೋಗುವುದು.

ಕಂದ:- . . . . . . . .ಗಣ

ಮಾಗಣಮೀಗಣಮಿವೆನ್ನವೆನ್ನದೆ ಧರ್ಮ್ಮೋ

ದ್ಯೋಗದಿದಂ ರಕ್ಷಸುವ

ಸ್ಸವಾಗಾರ ಸುಮಾರ್ಗ್ಗ ನಿರತರಿಲ್ಲಿಯ ಭವ್ಯರ್

ಆ ಗಣ ಈ ಗಣವೆನ್ನದೆ ಇಲ್ಲಿ ಜಾತಿ, ಅಂತಸ್ತು, ಲಿಂಗವೆನ್ನದೆ ಧರ್ಮದಿಂದ ಧರ್ಮವನ್ನು ರಕ್ಷಿಸುವುದು ಇಲ್ಲಿಯ ಜನರ ಮುಖ್ಯ ಕರ್ತವ್ಯವಾಗಿತ್ತು.

ಸನದೊಳ್ಪಾಣಿನಿ ಪಾಣಿನೀಯದೊಳ್ ಚನ್ದ್ರಂ ಚಾನ್ದ್ರದೊಳ್ ತಜ್ಜಿನೇ
ನ್ದ್ರನೆ ಜೈನೇನ್ದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ಪೋಲ್ಪರೆ
ನ್ತೆನೆ ಪೋಲರ್ನ್ನಯಸೇನಪಣ್ಡಿತರೊಳನ್ಯರ್ವ್ವಾರ್ದ್ಧಿವೀತೋರ್ವ್ವಿಯೊಳ್॥

ಶಬ್ದಾನುಶಾಸನದಲ್ಲಿ ಶಾಕಟಾಯನ ಮುನೀಂದ್ರನಂತೆ, ಪಾಣಿನಿಯಲ್ಲಿ ಪಾಣಿನಿಯಂತೆ, ಚಂದ್ರನಲ್ಲಿ ಚಂದ್ರನಂತೆ, ಜಿನೇಂದ್ರದಲ್ಲಿ ಜೀನೇಂದ್ರನಂತೆ, ಕೌಮಾರ್ಯದಲ್ಲಿ ಕುಮಾರನ ತರಹ ನಯಸೇನಸೂರಿ ಶೋಭಿಸುತ್ತಿದ್ದನು.

ಕ್ರಿ.ಶ.೧೦೬೨ರ ಕಲ್ಯಾಣ ಚಾಲುಕ್ಯರ ದೊರೆ ಒಂದನೇ ಸೋಮೇಶ್ವರನ ಕಾಲದ ಶಾಸನವು ಮುಳಗುಂದದ ನಗರೇಶ್ವರ ಗುಡಿ ಹಿಂದೆ ಇದ್ದು, ಇದರಲ್ಲಿ ೫ ಸಾಲಿನ ಚಂಪಕಮಾಲಾ ವೃತ್ತವಿದೆ.[೯]

ಚಂಪಕಮಾಲವೃತ್ತ :- ಮುನಿಗಳೊಳಾ ಮಹಾಮುನಿ ಧ್ರುವೇಶ್ವರ ಪಣ್ಣಿತರೀ ಜಗತ್ರಯಂ
ಪೊಗಳೆ ತಪಪ್ರಭಾವ ನಿಧಿ . . . ದೊರೆ ಪದ್ಮ ಸಂಭವಂ ದೊರೆ
ಮುನಿ ಯಾವಸಿಷ್ಠ ಮುನಿಯುಂ ಸಮನಾದನಘಸ್ತ್ಯನುತ್ತಮಂ ಸರಿ
ಯೆನೆ ಬಣ್ಣಿಸಲು ತ್ರಿಭುವನಂ ಪೊಗಳುತ್ತಿರೆ ಯಾಮುನೀಶನುತ್ತಿ
ಮ ನಿರ ಪೂಜ್ಯಮಾಗಿ ನಗರೇಶ್ವರದೀ ಮಠಮೊಪ್ಪಿತೋಱುಗುಂ

ಈ ಒಂದು ಪದ್ಯದಲ್ಲಿ ಒಬ್ಬ ಮುನಿಯ ವರ್ಣನೆಯನ್ನು ಮಾಡಲಾಗಿದೆ. ಆ ಮುನಿ ಹೇಗೆ ಇದ್ದನೆಂದರೆ, ಮುನಿಗಳ ಗುಂಪಿನಲ್ಲಿ ಧ್ರುವೇಶ್ವರನಂತೆ ಎಂದು ಪಣ್ಡಿತರು ಮತ್ತು ಜಗತ್ತೇ ಹೊಗಳುತ್ತಿತ್ತು. ಆತನು ತಪನಿಷ್ಠನು ಕಮಲದಿಂದ ಉದ್ಭವಿಸಿ ಬಂದಂತೆ ವಸಿಷ್ಠಮುನಿಯ ಸಮಾನನು, ಅಘಸ್ತ್ಯಮುನಿಯಂತೆ ಉತ್ತಮನು, ಈತನನ್ನು ಈ ರೀತಿ ತ್ರಿಭುವನವೇ ಪೊಗಳುತ್ತಿರೆ, ಈ ಮುನೀಶನು ಉತ್ತಮನಾಗಿ, ಪುಣ್ಯನಾಗಿ ನಗರೇಶ್ವರ ದೇವಾಲಯ ಮಠವಾಗಿ ತೋರುತ್ತಿತ್ತು ಎಂದು ಈ ಪದ್ಯ ಚಿತ್ರಿಸುತ್ತದೆ.

ಕಂದ:- ಶ್ರೀಕಂಠಮುನಿಯೆ ಕಮಳಮು
ಖಾಕಂಠಂ ಸೇವ್ಯ ಸೇವ್ಯಮೂರ್ತ್ತಿ ಗುರುಖಿ
ಳಕಂ ಶ್ರೀಕಣ್ಠವೆನಿಸಿ ಪರಹಿತ
ನೀ ಕಣ್ಠಮುನೀನಲ್ತೆ ವಸುಧಾತಳದೊಳ್॥

ಶ್ರೀಕಂಠಮುನಿಯು ಕಮಲಮುಖವನ್ನು, ಮಧುರ ಧ್ವನಿಯನ್ನು ಹೊಂದಿದವನು, ಎಲ್ಲರೊಳಗೆ ಬೆರೆಯುವಂತವನು, ಗುರುವಾಗಿ ಪರಹಿತವನ್ನು ಬಯಸುತ್ತಿದ್ದವನು, ಇಂತವರು ಈ ಭೂಮಿಯೊಳಗೆ ಇತನಲ್ಲದೆ ಬೇರೆ ಇರುವರೇ? ಎಂಬುದಾಗಿ ಅವನ ವ್ಯಕ್ತಿ ಚಿತ್ರಣವನ್ನು ಕೊಡುತ್ತದೆ.

ಕ್ರಿ.ಶ.೧೦೭೧ರ ಕಲ್ಯಾಣಚಾಲುಕ್ಯ ದೊರೆ ೨ನೇ ಸೋಮೇಶ್ವರ ದೊರೆಯಕಾಲದ ಸೊರಟೂರಿನ ಜೈನಬಸದಿಯ ಮುಂದೆ ಇದ್ದು, ಇದರಲ್ಲಿ ನಾಲ್ಕು ಪದ್ಯಗಳು ಇವೆ. ಅವುಗಳನ್ನು[೨೦]

ಉತ್ಪಲಮಾಲವೃತ್ತ :- ಅಂಗವರಾಳ ಸಿಂಗಳೀಕಗುರ್ಜ್ಜರಮಾಳವ ಚೇರ ಪಾಣ್ಡ್ಯ ಕಾ
ಳಿಂಗ ಖಸಾನ್ದ್ರಯಾದವ ಮಹೀಭುಜಮೌಳಿಮಣಿಬ್ರಜಪ ಭಾ
ಲಿಂಗಿತ ಪಾದಪೀಠನಮರೇಂನ್ದ್ರ ವಿಳಾಸನವಾರ್ಯ್ಯ ವೀರ್ಯ್ಯನು
ತ್ತುಂಯಶಂ ಸಮಸ್ತಭುವನಾಶ್ರಯನಾಹವಮಲ್ಲನನ್ದನ

ಈ ಪದ್ಯದಲ್ಲಿ ೨ನೇ ಸೋಮೇಶ್ವರನನ್ನು ಅತಿಶಯವಾಗಿ ಹೊಗಳಲಾಗಿದೆ. ಇವನು ಅಂಗ, ವಂಗ, ಗುರ್ಜ್ಜರ, ಮಾಳವ, ಚೇರ, ಪಾಣ್ಡ್ಯ, ಕಳಿಂಗ, ಖಸಾನ್ದ್ರ, ಯಾದವ ಇವರೆಲ್ಲರನ್ನು ತನ್ನ ಭುಜಬಲದಿಂದ ಹಿಡಿತದಲ್ಲಿಟ್ಟುಕೊಂಡವನು, ವಿಳಾಸಪ್ರಿಯನು, ಶೌರ್ಯ್ಯವಂತನು, ಸಮಸ್ತಭುವನಾಶ್ರಯನು ಈ ಅಹವಮಲ್ಲನನ್ದನ ಎಂದು ಹೇಳಿದೆ. ನಂತರ ಪದ್ಯದಲ್ಲಿ

ಮತ್ತೇಭವಿಕ್ರೀಡಿತವೃತ್ತ :- ಪೊರೆದಾಳ್ದಂ ಭುವನೈಕಮಲ್ಲಮಹಿಪ ತನ್ನಿಷ್ಟದೈವಂ ಜಿನೇ
ಶ್ವರನಾತ್ಮಾಂಬಿಕೆ ಗೊಜ್ಜಿಕಬ್ಬೆ ಜನಕಂ ಗಂಗಾನ್ವಯ ಶ್ರೀವಧೂ
ವರ ನಪ್ಪಗ್ಗಳದೇವನಣ್ಣನನಘಂ ಬೆಳ್ದೇವನೆನ್ದಂದೆ ಭಾ
ಸುರ ತೇಜಂ ಬಲದೇವ ನೆಯ್ದೆ ಕೃತಕೃತ್ಯ. . ಚಕ್ರದೊಳ್

ಇಂತಹ ಧರೆಯನ್ನು ಪೊರೆಯುವ ಭುವನೈಕಮಲ್ಲನ ಇಷ್ಟದೈವ ಜಿನನ ಆತ್ಮಾಂಬಿಕೆಯಾದ ಗೊಜ್ಜಿಕಬ್ಬೆಯ (ಹುಲಿಯಬ್ಬಜ್ಜಿಕಬ್ಬೆಯ) ಜನಕ ಗಂಗಾನ್ವಯ ಶ್ರೀವಧೂವರನಪ್ಪಗ್ಗಳದೇವನ ಅಣ್ಣ ಅನಂಗ ಬೆಳ್ದೇವನೆಂಬ ಭಾಸುರ ತೇಜ ಬಲದೇವ ಎಂಬುವನು ಭೂಮಿಯಲ್ಲಿ ಇದ್ದನೆಂದು, ಮುಂದಿನ ಪದ್ಯದಲ್ಲಿ

ಕಂದ:- ಪರಮಜಿನಂ ತನಗಾಪ್ತಂ
ಗುರುಗ ಳ್ನಯಸೇನದೇವ ರೊರ್ಜ್ಜಿತ ಧರ್ಮ್ಮಂ
ಪಿರಿದಪ್ಪ ಬಸನಮೆಂದೊಡೆ
ಧರೆಯೊಳ್ ಬಲದೇವನನ್ತು ನೋನ್ತರು ಮೊಳರೇ

ಪರಮಜಿನನು ತನಗಾಪ್ತನಂತೆ ಇರುವ ನಯಸೇನದೇವಗುರುಗಳು ಊರ್ಜ್ಜಿತಗೊಳಿಸಿದ ಇವರಿಗೆ ಪಿರಿಯದಾದ ಚಿಂತೆಯೆಂದರೆ ಧರೆಯಲ್ಲಿ ಬಲದೇವನಂತವರು ಹುಟ್ಟುವರೆ ಎಂಬುದಾಗಿ ನಯಸೇನ ಗುರುಗಳ ಆಲೋಚನೆಯನ್ನು ಇದು ತಿಳಿಸುತ್ತದೆ. ನಾಲ್ಕನೇಪದ್ಯದಲ್ಲಿ

ಉತ್ಪಲಮಾಲವೃತ್ತ :- ಕನ್ತುಮದೇಭಸಿಂಹರನ ಸನ್ದಪೊಗರ್ತ್ತೆಯ ಚನ್ದಣನ್ದಿಸಿ
ದ್ಧಾನ್ತ ಮುನೀಶ್ವರ್ಗುರುಗಳೆಂಬ ನೆಗರ್ತ್ತೆಯ ದಾವಣನ್ದಿಸಿ

ದ್ಧಾನ್ತ ಮುನೀಶ್ವರರ್ತ್ತಮಗೆ ಶಿಷ್ಯಗಣಾಧಿಪರೆಂಬ ಪೆಂಪುಲೋ
ಕಾನ್ತ ಮನೆಯ್ದಿತ್ತೇಂ ಸಕಳ ಚನ್ದ್ರಮುನೀನ್ದ್ರರಗಣ್ಯಪುಣ್ಯರೋ.

ಮಹಾದೇವಸಿಂಹರನ ಒಂದು ಅಂಶವೇ ಆಗಿರುವ ಪ್ರಖ್ಯಾತಿ ಪಡೆದಿರುವ ಚಂದನಣನಂದಿ ಸಿದ್ಧಾಂತ ಮುನಿಗಳೆಂಬ ಗುರುಗಳದಾವಣ ಸಿದ್ಧಾಂತ ಮುನಿಶ್ವರರ ಶಿಷ್ಯ ಗಣಗಳೆಂಬ ಕೀರ್ತಿಯನ್ನು ಪಡೆದಿರುವ ಇವರು ಸಕಲ ಮುನಿಗಳಲ್ಲಿ ಅಗ್ರಗಣ್ಯರು ಪುಣ್ಯಪುರುಷರು ಹಾಗಿದ್ದರಂದು ಮುನಿಗಳ ಹಿರಿಮೆಯನ್ನು ತಿಳಿಸುತ್ತದೆ.

ಸಿನೇ ಇಂದ್ರನ ಕ್ರಿ.ಶ.೧೧೦೭೪ರ ಲಕ್ಷ್ಮೇಶ್ವರದ ಶಾಸನದಲ್ಲಿ.[೨೧]

ಶರ್ದೂಲವಿಕ್ರೀಡಿತವೃತ್ತ :– ನಾನಾ ದ್ವೀಪದೊಳಗ್ರಿಮಂ ನೆಗಟ್ದಿ ಜಂಬೂದ್ವೀಪಮಾ ದ್ವೀಪದೋಳ್
ನಾನಾಕ್ಷೇತ್ರದೊಳುತ್ತಮಂ ಭರತಮಾ ಭೂಭಾಗದೊಳ್ ಕುನ್ತಳಂ
ತಾನತ್ಯೂರ್ಜ್ಜಿತಮಲ್ಲ ಭೋಗಿಜನರಮ್ಯಂಬೆಳ್ವೊಲಂ ತನ್ಮುಖ
ಸ್ಥಾನಂ ಶೋಭೊಕುಮಾಗಳುಂ ಪುರಿಕರ ಶ್ರೀರಾಜಧಾನ್ಯಾಹ್ವಯಂ

ನಾನಾದ್ವೀಪಗಳಲ್ಲಿ ಅಗ್ರ ಮಾನ್ಯವಾದ ಈ ಜಂಬೂದ್ವೀಪ, ಅಂತಹ ದ್ವೀಪದಲ್ಲಿ ನಾನಾ ಕ್ಷೇತ್ರದಲ್ಲಿ ಉತ್ತಮವಾದ ಭರತಭೂಮಿಯಲ್ಲಿ ಕುಂತಳಪ್ರದೇಶ ಬೋಗಿಗಳ ರಮ್ಯಸ್ಥಳ. ಬೆಳ್ವೊಲ, ತನ್ನದೇ ಆದ ರೀತಿಯಿಂದ ಶೋಭಾಯಮಾನವಾದ ರಾಜಧಾನಿಯಾಗಿದೆ ಎಂದು ಚಿತ್ರಿಸುತ್ತ ಮುಂದುವರೆದು.

ಕಂದ:– ಪುರಿಕರಪುರವರಪರಮೇ
ಶ್ವರನುಜ್ವಳಕೀರ್ತ್ತಿ ಸಗರಮಾರ್ತ್ತಣ್ಡಂ ಕೇ
ಸರಿಕೇತು ರಾಷ್ಟ್ರಕೂಟಕ
ವರನಾ ತ್ರಿಶತಕ್ಕಮಿಂದ್ರಕೇಶಿ ನರೇಂದ್ರಂ

ಪುಲಿಗೆರೆ ನಗರದ ಒಡೆಯನಾದ ಪರಮೇಶ್ವರನು ಉಜ್ವಲವಾದಕೀರ್ತಿ ಪಡೆದವನು ಸಗರಮಾರ್ತಂಡ ಕೇಸರಿಯಂತವನು ರಾಷ್ಟ್ರಕೂಟ ದೊರೆಯಾದ ಇಂದ್ರಕೇಶಿ ರಾಜ ಮೆರೆದಿದ್ದನು ಎಂಬುದಾಗಿ ಇಂದ್ರನ ವ್ಯಕ್ತಿತ್ವವನ್ನು ಇದು ಚಿತ್ರಿಸುತ್ತದೆ.

ಕಂದ– ತತ್ಪುರಿಕರವಿಷಯಾಧಿಪ
ನುತ್ಪಾಟಿತವೈರಿ ನೆಗಟ್ದಮಣಲರ ಭೀಮಂ
ಸತ್ಪಾತ್ರದಾನನಿಧಿಯ
ರ್ಹತ್ಪಾದಾಬ್ಜಾಳಿ ಯಿಂದ್ರಕೇಶಿನರೇಂದ್ರ

ಇಂತಹ ಪುಲಿಗೆರೆಯ ಅಧಿಪತಿಯು ವೈರಿಗಳನ್ನು ಉಚ್ಚಾಟಿಸಿದವನು, ಸತ್ಪಾತ್ರ ನಿಧಿಯು ಆದ ಮಣಲರ ಭೀಮ ಇಂದ್ರನಿಗೆ ಆಪ್ತನಾಗಿದ್ದನು. ಎಂದುಅವರ ಮಿತ್ರತ್ವವನ್ನು ಹೇಳುತ್ತದೆ.

ಕಂದ:- ಆತನ ಪಿರಿಯರಸಿ ಗುಣಾ
ನ್ವಿತೆ ಪತಿವ್ರತೆ ಚರಿತ್ರವತಿ ವಿಶದಗುಣ
ಖ್ಯಾತವತಿ ಸತ್ಯವತಿ ಧಾ
ತ್ರೀತಳದೋಳ್ ಚಂಡಿಕಬ್ಬೆಯೆನೆ ಪೊಗಳ[ದ]ರಾರ್

ಆತನ ಹಿರಿಯರಾಣಿ ಗುಣಗಳ ಖಣಿ, ಪತಿವ್ರತೆ, ಚರಿತ್ರವತಿ, ಸತ್ಯವಂತೆ ಚಂಡಿಕಬ್ಬೆಯನ್ನು ಹೊಗಳುವುದು ಯಾರಿಂದ ಸಾಧ್ಯ? ಎಂಬುದಾಗಿ ಭೀಮನ ಪತ್ನಿಯಾದ ಚಂಡಿಕಬ್ಬೆಯ ಶೀಲ ಚಾರಿತ್ರವನ್ನು ಇದು ವಿವರಿಸುತ್ತದೆ.

ಕಂದ:- ಅವರ್ಗ್ಗಗ್ರಸೂನುಭಾವೋ
ದ್ಭವಮೂರ್ತಿ ಸುಧಾಂಶುವಿಶದಕೀರ್ತ್ತಿ ಜಯ
ದೇವನಮಳಲಕುಳವಳಯ
ಶ್ರೀತಾಂಶುಸಗರಮಾರ್ತ್ತಣ್ಣನ್ರಿಪಂ

ಅವರಿಗೆ ಹಿರಿಯಮಗನೂ ಭಾವೋದ್ಭವಮೂರ್ತಿಯೂ ಚಂದ್ರನತೆ ಕೀರ್ತಿಯನ್ನು ಪಡೆದವನು ಆದ ಜಯದೇವನು ಒಳ್ಳೆಯ ಕೀರ್ತಿವಂತನು, ಮಾರ್ತಂಡನು, ಸಕಲಗುಣ ಸಂಪನ್ನನು ಆಗಿದ್ದನು.

ಕಂದ:- ಶ್ರೀರಮಣಿಗೆ ಸಮರಜಯ
ಶ್ರೀರಮಣಿಗೆ ತಾರಹಾರ ಶಶಿವಿಶದಯಶ
ಶ್ರೀರಮಣಿಗೆ ಸಕಳವಚ
ಶ್ರೀರಮಣಿಗೆ ರಮಣನಲ್ತೆ ಜಯಕೇಶಿನ್ರಿಪಂ

ಶ್ರೀರಮಣಿಗೆ ಸಮರಜಯ ತಾರಹಾರ, (ನಕ್ಷತ್ರದಹಾರ) ಅಂದರೆ ಯುದ್ಧದಲ್ಲಿ ಜಯಗಳಿಸಿ ಜಯಲಕ್ಷ್ಮಿಯನ್ನು ವರಿಸಿದ, ಐಶ್ವರ್ಯಲಕ್ಷ್ಮಿಯ ಚಂದ್ರಬಿಂಬದ ಎದೆಹಾರದಂತಿದ್ದು ಭೂರಮಣಿಯ ನೆಚ್ಚಿನ ನಲ್ಲನಾಗಿ ಜಯಕೇಶಿ ರಾಜ್ಯಭಾರ ಮಾಡಿದನು.

ಕಂದ:- ಆನ್ತೇನಿಸಿದ ಜಯಲಕ್ಷ್ಮೀ
ಕಾನ್ತಂ ದುಷ್ಟಾಶ್ವಚಯಕಿದಾನೆನ್ತನರೇ
ವನ್ತಂ ವಿದ್ವಿಟ್‌ನ್ರಿಪತಿಕ್ರಿ
ತಾನ್ತಂ ಸುಖದಿನ್ದಮಿಟ್ಟು ವಿಜಯಕೇಶಿನ್ರಿಪಂ

ಅಂತೆನಿಸಿದ ಜಯಲಕ್ಷ್ಮಿಗೆ ಅಧಿಪತಿಯಾಗಿ, ದುಷ್ಟಜನರ ನಿವಾರಕನಾಗಿ, ವಿದ್ವತ್ತಿನಲ್ಲಿ ಕೀರ್ತಿವಂತನಾಗಿ ಸುಖದಿಂದ ಇದ್ದನು ವಿಜಯಕೇಶಿರಾಜ. ಎಂದು ವಿಜಯಕೇಶಿ ರಾಜನನ್ನು ಹೊಗಳುತ್ತದೆ.

ಕಂದ:- ಪುರಿಗೆಱೆಯೊಳ್ಪೆರ್ಮಾಡಿಯ ಪುರ
ವರಮಳಿದಿಟ್ಟುದಂ ಗಜಾರಿಧ್ವಜನಾ
ದರದಿನ್ದಮೇ ನೋಡಿ ಪುನ
ರ್ಭರಣಂ ಮಾಡಲ್ಕೆ ವೇಡಿ ಜಯಕೇಶಿನ್ರಿಪಂ

ಪುಲಿಗೆರೆನಗರದ ಪೆರ್ಮಾಡಿಯರಸನು ನೀಡಿದ ಶಾಸನವನ್ನು ನೋಡಿ, ಪುನಃ ಆ ದಾನವನ್ನು ಪುನರ್ದಾನವಾಗಿ ಈ ಜಯಕೇಶಿರಾಜ ಬಿಟ್ಟ ವಿಷಯವನ್ನು ಈ ಪದ್ಯ ಸೂಚಿಸುತ್ತದೆ.

ಡೋಣಿಯಲ್ಲಿರುವ ಕ್ರಿ.ಶ.೧೧೮೮ರ ಆರನೇ ವಿಕ್ರಮಾದಿತ್ಯನ ಕಾಲದ ಶಾಸನವು ೫ ಪದ್ಯಗಳನ್ನು ಹೊಂದಿದೆ.[೨೨]

ಮಹಾಸ್ರಗ್ಧರಾವೃತ್ತ :- ದ್ರವಿಳಕ್ಷ್ಮಾಪಾಳಕಾಳಾನಳ ನಖಿಳಕಳಿಂಗಾವನೀನಾಥವಂಶಾ
ರ್ಣ್ನವ ಕುಂಬೋದ್ಭೂತ ನಂಧ್ರಾ ಚಳಕುಳ ಕುಳಿಶಂ ಮಾಳವೋಗ್ರೇಭಕಂಠೀ
ರವ ನಂಗಾನಂಗರುದ್ರ ಸ್ಫುರಿತನಿಟಳನೇತ್ರಾನಳಂ ಮಾಗಧೋರ್ಬ್ಬಿ
ಧವ ದೋರ್ಗ್ಗರ್ಬ್ಬ ಪ್ರತಾಪ ಪ್ರಬಳಕ ಬಳನಂ ವಿಕ್ರಮಾದಿತ್ಯದೇವ.

ಅತ್ಯಂತ ಪರಾರಮಿಯಾದ ಇವನು ಕಳಿಂಗ ವಂಶದ ಸತ್ಕುಲದಲ್ಲಿ ಹುಟ್ಟಿ ವಿಕ್ರಮಾದಿತ್ಯ ಹೆಸರಿಗೆ ಅನ್ವರ್ಥಕವೆಂಬಂತೆ ಅತಿಬಶಾಲಿಯಾಗಿದ್ದು ವೈರಿರಾಜರ ಅಹಂಕಾರ ಮುರಿದ ಪರಾಕ್ರಮಿ, ಶರಣಾಗತ ವೈರಿಗಳನ್ನು ಸ್ನೇಹಿತರಂತೆ ಕಾಣುವ ಔದಾರ್ಯ ಗುಣಗಳಿಂದ ಜನಾನುರಾಗಿಯಾಗಿದ್ದನು.

ಕಂದ:- ಯುವತೀ ಮುಖತಿಳಕಂ ಲೋ
ಳವಿಲೋಚನೆ ಸವತಿಗನ್ಧಹಸ್ತಿ ಮಹಾದಾ
ನವಿನೋದ ಯೆನಿಸಿ ನೆಗೆಟ್ದಳ್
ಭುವನದೊಳೆ ಪುರಾಣಲಕ್ಷ್ಮಿ ಲಕ್ಷ್ಮೀದೇವಿ॥

ಡೋಣಿಯಲ್ಲಿರುವ ಶಾಸನಗಳು ಬಹುತೇಕ ದಾನಶಾಸನಗಳೇ ಆಗಿವೆ. ಈ ಶಾಸನಗಳಲ್ಲಿ ಡೋಣಿಯನ್ನು ದ್ರೋಣಾಪುರ, ದ್ರೋಣಾಮುಖವೆಂದು ಕರೆಯಲಾಗಿದೆ. ಕಲ್ಯಾಣಚಾಲುಕ್ಯದೊರೆ ಆರನೇ ವಿಕ್ರಮಾದಿತ್ಯನ ಪತ್ನಿ, ರಾಣಿಲಕ್ಷ್ಮೀದೇವಿಯ ಪರಿಚಯವನ್ನು ಮಾಡಿಕೊಡುವಲ್ಲಿ ಈ ಶಾಸನವು ಪ್ರಮುಖ ಪಾತ್ರವಹಿಸುತ್ತದೆ. ಡೋಣಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಈ ಪಿರಿಯರಸಿಯನ್ನು ೮ ಶಾಸನಗಳಲ್ಲಿ ಕೊಂಡಾಡಲಾಗಿದೆ. ಈಕೆಯು ಸೂಡಿಯ ಅಚಲೇಶ್ವರ ದೇವಾಲಯವನ್ನು ಕಟ್ಟಿಸಿ, ಅಲ್ಲಿದ್ದ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು, ಅನ್ನದಾನಕ್ಕಾಗಿ ಕಿಸುಕಾಡು-೭೦ರ ಮೊಂಗಲಿ ಗ್ರಾಮವನ್ನು ದತ್ತಿ ನೀಡಿರುವಳು. ೬ನೇ ವಿಕ್ರಮಾದಿತ್ಯನ ರಾಣಿಯರಲ್ಲಿ ಲಕ್ಷ್ಮೀದೇವಿ ಮತ್ತು ಚಂದಲಾದೇವಿ ಇಬ್ಬರು ಹೆಚ್ಚಾಗಿ ಸವತಿಮತ್ಸರದಿಂದ ಇದ್ದವರು. ಆದ್ದರಿಂದ

ಲಕ್ಷ್ಮೀದೇವಿಯನ್ನು ಸವತಿಮಥಭಂಜನಿ ಮತ್ತು ಸವತಿಹಸ್ತಿ, ಅಮಲಸವತಿ ಎಂಬುದಾಗಿ ವರ್ಣಿಸಲಾಗಿದೆ. ಈಕೆಯು ವೀರಶೈವ ಧರ್ಮದವಳಾಗಿದ್ದರೂ ಜೈನ, ಬೌದ್ಧ ಇತರೆ ಧರ್ಮಗಳಿಗೂ ದಾನದತ್ತಿಗಳನ್ನು ಕೊಟ್ಟು, ಸರ್ವಧರ್ಮ ಸಮನ್ವಯಳಾಗಿ ಇದ್ದಳೆಂದು ಶಾಸನದಲ್ಲಿ ಹೊಗಳಲಾಗಿದೆ.

ಮಹಾಸ್ರಗ್ಧರಾವೃತ್ತ :- ಬಳಸಿರ್ದ್ದಾದ್ತೀಂದ್ರದಿಂದಂ ಬಳೆದೊದವಿದ ನಾನಾವನ ಬ್ರಾತದಿಂದಂ
ಕಳಕಾತಧ್ವಾವದಿಂದಂ ವಿದಳಿತಕನ ಕಾಂಬೋಜಷಣ್ಡಂಗಳಿನ್ದಂ
ಕಳಕೀರಾರಾವದಿಂದಂ ಮಧುರ ಮಧುಕರೀಗೀತದಿಂದಂ ಬೆಡಂಗಂ
ತಳದಿರ್ಕ್ಕುಂ ಭೂವಿಭಾಮಾಮಳ ಮುಖತಿಳಕಂ ಡೋಣಿಕಾಗ್ರಾಮಮೆತ್ತ

ಈ ಪದ್ಯದಲ್ಲಿ ಡೋಣಿ ಗ್ರಾಮದ ವರ್ಣನೆಯನ್ನು ಮಾಡಲಾಗಿದೆ. ಬಳಸಿನಿಂದ ಬಳ್ಳಿಗಳು, ನಾನಾವನಗಳು, ಮನೋಹರವಾದ ವಿವಿಧ ಪಕ್ಷಿಗಳ ಕಲರವದಿಂದ, ಪುನ್ನಗವೃಕ್ಷಗಳಿಂದಾವರಿಸಿದ, ಕೋಗಿಲೆಯ ಮಧುರಕಂಠದ ಬೆಡಗಿನಿಂದ ಕೂಡಿದ, ಭೂಮಾತೆಯ ಮುಖತಿಲಕದಂತೆ ಡೋಣಿ ಗ್ರಾಮ ಶೋಭಿಸುತ್ತಿತ್ತು.

ಕಂದ:- ಸರಸಕಳಾಕೌಶಳ ದೊ
ಳ್ವರ ವೇದ ಸಮಸ್ತ ಶಾಸ್ತ್ರಚಯ ಪರಿಚಯದೊ
ಳ್ಪರಿ ಭಾವಿಸುವೊಡಜಂಗಂ
ಪಿರಿಯದ್ರ್ರೋಣ ಪುರೋಪಜನಿತ ಜನಂಗಳ್॥

ಡೋಣಿಯ ಜನರು ಸರಸಕಲಾವಿದರು, ಕೌಶಲವಂತರು, ವೇದಶಾಸ್ತ್ರಗಳ ಅರಿವನ್ನು ಹೊಂದಿದ ಅವರು, ಬ್ರಹ್ಮಸೃಷ್ಟಿಯನ್ನು ನಾಚಿಸುವಂತಹ ಪುನರ್‌ಸೃಷ್ಟಿಯನ್ನು ಮಾಡುವ ಕಲಾಕೌಶಲ ಅವರದಾಗಿತ್ತು ಜನಸಾಮಾನ್ಯನು ಉತ್ತಮಪಂಡಿತನಾಗಿದ್ದ ಎನ್ನುತ್ತದೆ ಈ ಪದ್ಯ.

ಚಂಪಕಮಾಲವೃತ್ತ :- ಸುರತರುವಿನ್ದೆ ಮಂದರ ಮಹೀಧರದಿಂದೆ ಪಯೋಧಿಯಿಂದೆ ಭೀ
ಕರ ಕರಿವೈರಿಯಿಂದ ಪರಿಭಾವಿಪೊಡೆನ್ತುಮುದಾರವೃತ್ತಿಯೊ
ಳ್ನಿರುಪಮಧೈರ್ಯ್ಯದೊಳ್ವರ ಗಭೀರತಯೊಳ್ಸಹಜಾತ ಶೌರ್ಯ್ಯದೊ
ಳ್ವಿರಿಯರೆನಲ್ಕೆ ದೋಣಿಯ ಮಹಾಜನಮಂ ಪೆಱರನ್ತು ಪೋಲ್ತಪರ್

ದೇವ ವೃಕ್ಷಗಳಿಂದ, ಮಂದರ ಪರ್ವತದಂತ ಪರ್ವತವನ್ನು ಹೊಂದಿ, ಭೀಕರ ಕರಿವೈರಿಯನ್ನು ಹೊಂದಿರುವ, ಉದಾರ ವೃತ್ತಿಗಳನ್ನು ನಿರ್ವಹಿಸುತ್ತ ಧೈರ್ಯದಿಂದ, ಗಂಭೀರತನದಿಂದ, ಶೌರ್ಯದಿಂದ ಡೋಣಿಯ ಮಹಾಜನಗಳು ಇದ್ದರು. ಇವರನ್ನು ಬೇರೆಯವರಿಗೆ ಹೋಲಿಸಲು ಸಾದ್ಯವೇ? ಎಂಬುದಾಗಿ ಅಲ್ಲಿಯ ಜನರ ಶೌರ್ಯವನ್ನು ಚಿತ್ರಿಸಿದೆ.

ಲಕ್ಷ್ಮೇಶ್ವರದ ಕ್ರಿ.ಶ.೧೦೮೧ರ ಶಾಸನವು.[೨೩]

ಧರೆಯಂ ವಾರಾಶಿಪರ್ಯನ್ತಮನವಯವದಿಂ ದುರ್ವ್ವಿನೀತಾಮನೀಪಾ
ಳರ ಬೇರಂ ಕಿರ್ತ್ತು ನೀರೊಳ್ಗಲಗಲನಲೆದೀಡಾಡಿ ಮುನ್ನಿನ್ತು ಚಕ್ರೇ
ಶ್ವರರಾರ್ ನಿಷ್ಕಂಟಕಂ ಮಾಡಿದರೆನೆ ಮಹಿ ನಿಷ್ಕಂಟಕಂ ಮಾಡಿ ಚಕ್ರೇ
ಶ್ವರರತ್ನಂ ಸನ್ತತಂ ಪಾಳಿಸಿದನತಿಬಳಂ ವಿಕ್ರಮಾದಿತ್ಯದೇವಂ ॥

ಈ ಪದ್ಯವು ೬ನೇ ವಿಕ್ರಮಾದಿತ್ಯನ ಶೌರ್ಯತನವನ್ನು ಹೊಗಳುತ್ತದೆ. ಚಕ್ರವರ್ತಿ ವಿಕ್ರಮನು ನಾಡನ್ನು ಚಿರಕಾಲ ನಿಷ್ಕಂಟಕ ಮಾಡಿದನು. ಇವನು ದುರ್ನಡತೆಯುಳ್ಳ ರಾಜರ ಬೇರನ್ನು ಕಿತ್ತು, ಅದನ್ನು ನೀರಲ್ಲಿ ಗಲಗಲನೆ ಅರೆದು ಚಲ್ಲಿದನೆಂದು, ಭೂಮಿಯನ್ನು ನಿಷ್ಕಂಟಕ ಮಾಡಿ, ಚಕ್ರೇಶ್ವರ ರತ್ನನಾಗಿ ಈ ಭೂಮಿಯನ್ನು ಪಾಲಿಸಿದನ್ನೆಂಬುದಾಗಿ ತಿಳಿಸುವ ಈ ಪದ್ಯವು ಮಹಾಸ್ರಗ್ಧರಾವೃತ್ತದಲ್ಲಿದೆ.

ಚಂಪಕಮಾಲವೃತ್ತ :– ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದು ನಾ
ನಿರೆನವಳಿರ್ಕ್ಕೆ ಚೀಃ ಸವತಿಯೊಳ್ಪುರಿವಾಳ್ವುದು ಕಷ್ಟಮೆನ್ದು ನಿ
ಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಪರಿದೇಜಿ ಕೀರ್ತ್ತಿ ತಾಂ
ಪುರುಡಿಸಿ ದೂಜಿಪಳ್ವರತಪೋನಿಧಿಯಂ ನಯಸೇನಸೂರಿಯಂ ॥

ಈ ಒಂದು ಪದ್ಯದಲ್ಲಿ ನಯಸೇನಸೂರಿಯೆಂಬ ಪಂಡಿತನ ಕೀರ್ತಿಯನ್ನು ಹೇಳಲಾಗಿದೆ. ಈತನ ಪತ್ನಿಯು, ತನ್ನ ಪತಿಯಾದ ನಯಸೇನನು ಸರಸ್ವತಿಯನ್ನು ವರಿಸಿ, ಪ್ರೀತಿಯಿಂದ ಹೊಂದಿಕೊಂಡಿದ್ದಾನೆ. ಛೀ! ಸವತಿಯೊಡನೆ ಇರುವುದು ಕಷ್ಟ, ಅವಳೇ ಇದ್ದುಕೊಳ್ಳಲಿ ಎಂದು ಆತನ ಮಡದಿ "ಕೀರ್ತಿ" ದಿಗ್ದಿಗಂತಗಳಲ್ಲಿ ಆತನನ್ನು ದೂರುತ್ತಿದ್ದಾಳೆ ಎಂದು ಅತ್ಯಂತ ಮಾರ್ಮಿಕವಾಗಿ ನಯಸೇನಸೂರಿಯ ಕೀರ್ತಿಯನ್ನು ಹೊಗಳಲಾಗಿದೆ.

ಕ್ರಿ.ಶ.೧೦೮೨ರ ಕುರ್ತುಕೋಟಿಯ ಶಾಸನವು ಕಲ್ಯಾಣಚಾಲುಕ್ಯರ ದೊರೆ ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು, ಅದರಲ್ಲಿ.[೨೪]

ಚಂಪಕಮಾಲವೃತ್ತ :– ಮನಸಿಜನಿಕ್ಷುಚಾಪಮೆನಿಸಿರ್ಪ್ಪತಿ ಮುಗ್ಧವಿದಗ್ಧಕಾಮಿನೀ
ಜನಕೆ ಮನೋಜರಾಜನಿಭನೆಂಬುದು ವಂದಿಜನಕ್ಕೆ ಸೂರ್ಯ್ಯನಂ
ದೆನನಿ ನನೂನದಾನಯುತನೆಂಬುದು ದುರ್ದ್ಧನವೀರ ವೈರಿಗಿಂ
ದ್ರನಸುತನಿಂದ ಮತ್ತ್ಯಧಿಕನೆಂಬುದು ಧಾರಿಣಿ ವಾಮದೇವನ॥

ಸುರಸುಂದರಿಯರ ಪಾಲಿಗೆ ಕಾಮದೇವನ ಕೈಯ್ಯಲ್ಲಿಯ ಹೂಬಾಣವೊ ಏನೋ ಎಂಬಂತೆ ವಂದಿಸುವ ಪ್ರಜಾಜನರ ಪಾಲಿಗೆ ದಾನಶೂರ ಕರ್ಣನೋ ಎಂಬಂತೆ, ವೈರಿಗಳ ಪಾಲಿಗೆ ಇಂದ್ರ ಸುತನಾದ

ಅರ್ಜುನನೋ ಎಂಬಂತೆ, ವಾಮದೇವನು ರಾಜ್ಯದ ಜನತೆಗೆ ಅಶ್ರಯದಾತನಾಗಿ ಅವರಿಂದ ತಕ್ಕ ಗೌರವಾದರಗಳನ್ನು ಪಡೆದಿದ್ದನು.

ಕಂದ:- ಇಱಿದಡೆ ಪನ್ನೆರಡು ಪಣಂ
ಕಱ್ದು ಬನ್ದು ಪೊಯ್ದುಡಾಱುಪಣಮು ದಂಡಂ
ನೆಱೆಬಯ್ದಡೆ ಮೂಱುಪಣಂ
ಕಱೆದನ್ದುಂ ದಣ್ಡಮಾಗಿ ನಡೆವುದುನಿಯತ॥

ಈ ಪದ್ಯದಲ್ಲಿ ಆಡಳಿತದ ಒಂದು ವೈಖರಿಯನ್ನು ತಿಳಿಸಲಾಗಿದೆ. ಕೊಂದರೆ ಹನ್ನೆರಡು ಹಣ, ಕದ್ದುಬಂದು ಹೊಯ್ದರೆ ಆರು ಹಣ ದಂಡ, ನೆರೆಯ ಬೈದರೆ ಮೂರು ಹಣ ದಂಡವಾಗಿ ಕೊಡುವುದು ನಿಯಮಿತವಾಗಿ ಬಂದಿರುವ ಪದ್ಧತಿಯೆಂಬುದು ಈ ಪದ್ಯದಲ್ಲಿ ಆಡಳಿತದ ಕ್ರಮವನ್ನು ತಿಳಿಸಲಾಗಿದೆ.

ಚಂಪಕಮಾಲವೃತ್ತ :- ಅತಿಮಧುರಂ ಪ್ರಸನ್ನ ಕವಿ ನಿರ್ಮ್ಮಿಸಿದುನ್ನತಕಾವ್ಯದನ್ತೆ ನಿ
ರ್ವೃತಿಯುತಮೆಯ್ದೆ ಮೋಕ್ಷದವೊಲ್ಚಿತ್ತಜನಪ್ಪನ ಚಿತ್ತದನ್ತೆ ಸ
ನ್ತತ ಮತಿನಿರ್ಮ್ಮಳಂ ಪೆಱರನನ್ದು ಮಪೇಕ್ಷಿಸುತಿರ್ಪ್ಪನನ್ತ ತಾ
ನತಿಘುವೆನ್ನದೀ ಚಣಕದುದ್ಗತಟಕಮನಾರೊಬಣ್ಣಿಸರ್

ಅತಿಮಧುರ ಪ್ರಸನ್ನಕವಿ ನಿರ್ಮಿಸಿದ ಉನ್ನತಕಾವ್ಯದಂತೆ ನಿರ್ಮಿಸಿ, ಮೋಕ್ಷಕ್ಕೆ ಜನರು ಆಸಿಸುವಂತೆ, ಮನಸ್ಸು ಸತತವಾಗಿ ನಿರ್ಮಲವಾಗಿರುವಂತೆ, ಬೇರೆಯವರನ್ನು ಉಪೇಕ್ಷಿಸುವರಿಗೆ ತಾನು ಅವರಿಗಿಂತ ಕಡಿಮೆಯಿಲ್ಲ ಎಂಬಂತೆ ಇದ್ದವನನ್ನು ಹೇಗೆ ಬಣ್ಣಿಸಲಿ? ಎಂದು ವರ್ಣಿಸಲಾಗಿದೆ.

ಉತ್ಪಲಮಾಲಾವೃತ್ತ:- ಬಾವಿಸೆಮೂರ್ತ್ತಿಸೋಮಕಳೆಯನ್ನದೆಸಭಿಸುತಿರ್ಪ್ಪದೀಜಗ
ತ್ಪಾವನಮಂಬುಜದರನಿವಾಸಪಯೋನಿಧಿಯನ್ತೆ ತೀವಿ ಸೇ
ವ್ಯಾವಹಮಾಗಿ ರಂಜಿಪುದು ಜೀವನ . ೦ ನರಜೀವರಾಸಿಗ
ಳ್ಜೀವಿಪುವೆಂದತುನ್ನತಿಯ ನಾರ್ಪ್ಪೊಗಳರ್ದ್ಧರಣೀತಳಾಗ್ರದೊಳ್

ಆತನನ್ನು ಅನುಸರಿಸಿದರೆ ಚಂದ್ರನ ಕಾಂತಿಯಂತೆಯೂ, ಜಗತ್ತಿಗೆ ಪಾವನನಂತೆಯೂ ಉನ್ನತ ನಿಧಿಯಂತೆ ತನ್ನವರನ್ನು ರಕ್ಷಿಸುತ್ತ ತನ್ನ ಜೀವನವನ್ನು ಸಾಗಿಸುತ್ತಿದ್ದನು.

ಕ್ರಿ.ಶ.೧೦೮೭ ಕುರ್ತುಕೋಟಿಯ ೬ನೇ ವಿಕ್ರಮಾದಿತ್ಯನ ಕಾಲದ ಶಾಸನದಲ್ಲಿ.[೨೫]

ಕಂದ:-ಮಕರಕರ ವಿಹತ ಭೀಕರ
ಮಕರಾಕರವಳಯ ವಳಯಿ ತೋರ್ವ್ವಿ ತಳಮಂ
ಸಕಳರಿಪುನೃಪ ಭಯಂಕರ
ನಕಳಂಕಂ ವಿಕ್ರಮಾಂಕ ನಾಳುತ್ತಮಿರಲ್

ಈ ಪದ್ಯದಲ್ಲಿ ೬ನೇ ವಿಕ್ರಮಾದಿತ್ಯನ ಪರಾಕ್ರಮವನ್ನು ಸಕಲ ಶತ್ರುರಾಜರಿಗೆ ಭಯಂಕರನಾಗಿ, ಭೂಮಿಯನ್ನು ಅಕಳಂಕವಾಗಿ, ನಾನಾ ನಿಧಿ-ಐಶ್ವರ್ಯಗಳಿಂದ ಆಳುತ್ತಿದ್ದನು ಎಂದು ಹೊಗಳಲಾಗಿದೆ.

ಉತ್ಪಲಮಾಲವೃತ್ತ :- ವಾರಿಧಿವೇಷ್ಟಿತಾವನಿಲತಾಂಗಿಗೆ ಕುಂತಲದೇಶಮಾಸ್ಯಮಂ
ತಾರಮಣಿಯಮಪ್ಪ ಮುಖ ಪಂಕರುಹಕ್ಕೆ ಲಲಾಟದಂತೆ ವಿ
ಸ್ತಾರದಿನೊಪ್ಪಿ ತೋಱುವುದುಬೆಳ್ವಲಮಲ್ಲಿ ಲಲಾಮದೊನ್ದಳಂ
ಕಾರ ಸಮನ್ವಿತಂ ಕುಱುತಕೂಂಟೆ ವಿರಾಜಿಪುದೀಧರಿತ್ರಿಯೊಳ್

ಸಮುದ್ರದಿಂದ ಆವೃತವಾದ ಈ ಭೂಮಿಯೆಂಬ ಲತಾಂಗಿಗೆ, ಕುಂತಲದೇಶವು ತಾರಮಣಿಯ ಮುಖಕ್ಕೆ ಲಲಾಟದಂತೆ, ವಿಸ್ತಾರದಿಂದ ಬೆಳ್ವೊಲನಾಡಿನಲ್ಲಿ ಹಣೆಗೆ ಸುತ್ತುವ ಹೂ ಮಾಲೆಯ ಅಲಂಕಾರದಂತೆ ತೋರುವುದು ಕುರ್ತುಕೋಟಿ ಎಂಬುದಾಗಿ ಹೇಳಲಾಗಿದೆ ಗ್ರಾಮದ ವರ್ಣನೆ ನಿಡಲಾಗಿದೆ

ಕಂದ:-ಅವರೊಳಗೆ ವಿಪ್ರವಂಶಾ
ರ್ಣ್ಣವಹಿಮಕರನೆನಿಸಿ ಸಂದ ಪೆಂಪಂ ತಳದಂ
ಭುವನ ಸ್ತುತ್ಯಂವಿದ್ವಂ
ನಿವಹೋತ್ತಮ ನತ್ಯುದಾರಿಪಿಟ್ಟೆಯ ಭಟ್ಟ

ಅವರಲ್ಲಿ ಇವನು ವಿಪ್ರವಂಶದಲ್ಲಿ ಜನಿಸಿ, ವಂಶಕ್ಕೆ ಮಹಿಮಕರನೆನಿಸಿ, ಒಳ್ಳೆಯ ಘನತೆಯಿಂದ ಭುವನದಲ್ಲಿ ಸ್ತುತ್ಯನಾಗಿ, ವಿದ್ವಾಂಸರಲ್ಲಿ ಉತ್ತಮನಾಗಿ ಇದ್ದ ಪಿಟ್ಟೆಯಭಟ್ಟರು ಎಂಬುದಾಗಿ ವರ್ಣಿಸಿದೆ.

ಉತ್ಪಲಮಾಲವೃತ್ತ :- ಸಂಗತನೀತಿ ಶಾಸ್ತ್ರವಿದಿತಂಗೆ ಧರಾಮರ ಪೂಜ್ಯವೇದ ವೇ
ದಾಂಗ ವಿಶಾರದಂಗೆ ನಿಜಗೋತ್ರನ ಭೋಮಣಿಸನ್ನಿಭಂಗೆ ಸೋ
ತ್ತುಂಗ ಗುಣಾನ್ವಿತಂಗೆ ಹರಭಕ್ತಿಯೊಳುನ್ನತನಪ್ಪ ಪಿಟ್ಟಿಮ
ಯ್ಯಂಗೆಣೆ ಸತ್ಯವಾಕ್ಯರುದಿತೋದಿತರಾರೊಮಹೀತಳಾಗ್ರದೊಳ್

ಒಳ್ಳೆಯ ನೀತಿಶಾಸ್ತ್ರ ಬಲ್ಲವನು, ವೇದೋಪನಿತ್ತುಗಳಲ್ಲಿ ಪಾರಂಗತನು, ಸತ್ಕುಲ ಸಂಜಾತನು, ಪ್ರಾಮಾಣಿಕ ಮನೋಭಾವದಿಂದ ಪ್ರಜೆಗಳ ಮನಗೆದ್ದ ಸೌಜನ್ಯಶೀಲನು, ವೇದಾಂಗ ವಿಶಾರದನು, ನಿಜಗೋತ್ರನು, ಸೂರ್ಯನಿಗೆ ಸಮಾನನು, ಗುಣವಂತನು, ಹರಭಕ್ತಿಯಲ್ಲಿ ಉನ್ನತನು, ಪಿಟ್ಟುಮಯ್ಯನು ಸತ್ಯವಾಕ್ಯ ಪರಿಪಾಲಕನು ಆಗಿದ್ದನು ಈ ಧರೆಯೊಳಗೆ.

ಕಂದ:– ಆತನ ಸಮಸ್ತ ಭುವನ
ಖ್ಯಾತನಸುತನಖಿಳಶಾಸ್ತ್ರಪರಿಣಯೆಡೆಯೊಳ್।
ನೂತನಕಮಳೆಜನೆನಿಸಿದ
ನೀತಿವಿದಂ ನಾಗವರ್ಮ್ಮನನುಪಮಧರ್ಮ್ಮ॥

ಆತನು ಸಮಸ್ತ ಭುವನಕ್ಕೆ ಖ್ಯಾತಿಯನ್ನು ಪಡೆದು ಅಖಿಳ ಶಾಸ್ತ್ರಗಳನ್ನೆಲ್ಲ ತಿಳಿದವನು, ನೀತಿವಿಶಾರದನು ಆಗಿದ್ದನು ನಾಗವರ್ಮ.

ಸೀತೆಗೆ ರೋಹಿಣಿಗೆ ಕುಭ್ರ
ಜ್ಞಾತಗರುನ್ಧತಿಗೆ ರತಿಗೆ ಪತಿಭಕ್ತಿಯೊಳೇ
ಆತೊಮಿಗಿಲೆನಿಸಿ ನೆಗರ್ದ್ದ ವಿ
ಭೂತಿಯ ಚಾವುಣ್ಡಕಬ್ಬೆಗಜ್ಞರ್ದ್ದೊರೆಯೇ

ಸೀತೆಗೆ, ರೋಹಿಣಿಗೆ, ಅರುಂದತಿಗೆ, ರತಿಗೆ ಪತಿಭಕ್ತಿಯಲ್ಲಿ ಅವರಿಗೂ ಮಿಗಿಲೆನಿಸಿ ಇದ್ದಳು ನಾಗವರ್ಮನ ಪತ್ನಿ ಚಾವುಂಡಕಬ್ಬೆಯು.

ಉತ್ಪಲಮಾಲವೃತ್ತ :– ಪಂಕಜನಾಭನಾಯತಮಂ ತ್ರಿದಶೇಂದ್ರವಿಮಾನದಿಂದ ಮಾ
ದಂಕಮನೀಯಮಾದುದೆನಲೆರ್ಮ್ಮಗನೂರ್ಕ್ಕುಱುಪಟ್ಟಿಯಲ್ಲಿ ಪಾ
ಶಾಂಕುಶಪುಸ್ತಕಾಭಯವಿರಾಜಿತಹಸ್ತ ಸರಸ್ವತೀನಿವಾ
ಸಂ ಕಡುರಮ್ಯಮಾಯ್ತೆನಿಸಿ ಮಾಡಿದನೇ ನೆಱೆಗಂ ಕ್ರಿತಾರ್ತ್ಥನೋ

ವಿಷ್ಣುವಿನ ಯುಕ್ತಿಯಂತಹ ಬುದ್ಧಿಯನ್ನು ಹೊಂದಿದವನು, ತ್ರಿದಶೇಂದ್ರ ವಿಮಾನದಿಂದ ಮಾದಂಕಮನೀಯವಾಗಿ ನೂರ್ಕಾಲ ಹೆಸರು ಉಳಿಯುವಂತೆ ಮಾಡಿ, ಪಾಶಾಂಕುಶ, ಪುಸ್ತಕ ವಿರಾಜಿತಹಸ್ತ, ಸರಸ್ವತಿ ನಿವಾಸಕ್ಕೆ ಯೋಗ್ಯವನ್ನಾಗಿ ಮಾಡಿದನು.

ಕಂದ:– ಸಿರಿಗುಪ್ಪೆಯೊಳಾದರದಿಂ
ಮರಕಟ್ಟಿನ ಪಿರಿಯ ಬಾವಿಯುಂ ಕೆಱೆಯುಮನ
ಚ್ಚರಿಯೆನೆ ಮಾಡಿ ಸಮಸ್ತೋ
ರ್ವ್ವರೆಗೆಲ್ಲಂ ನೆಗರ್ದ್ದನಲ್ತೆ ಬೆಳ್ಕೆಯರೆಱೆಗೆ

ಸಿರಿಗುಪ್ಪೆಯಲ್ಲಿ ಅತ್ಯಂತ ಆದರದಿಂದ ಮರಕಟ್ಟಿನ ದೊಡ್ಡಬಾವಿಯನ್ನು, ಕೆರೆಯನ್ನು ಕಟ್ಟಿಸಿ,ಊರ ಜನರಿಗೆ ಸೌಲಭ್ಯವನ್ನು ರಚಿಸಿಒಟ್ಟು ಸಮಸ್ತ ಜನರಿಗೆ ಪೂಜ್ಯನಾಗಿದ್ದಾನೆ.

ಕಂದ:– ದೇವದ್ವಿಜ ಗುರು ಭಕ್ತ
ಶ್ರೀರ್ಯವನಿತಾಧೀಶರೆನಿಸುವಿನ್ನೂರ್ಬ್ಬರಿದಂ
ಕಾವರ್ಕ್ಕೆಯ್ಕೊಳ್ವ ಭೂರ್ಭ
ದೇವೋತ್ತಮರಿನ್ದುಸೂರ್ಯ್ಯರುಳ್ಳನ್ನೆವರ

ದೇವರು, ಬ್ರಾಹ್ಮಣರು, ಗುರುಗಳಲ್ಲಿ ಅಪಾರಭಕ್ತಿ, ಶ್ರೀವನಿತೆಗೆ ಒಡೆಯರೆನಿಸಿದ ಇನ್ನೂರ್ವರು ಕಾಯುವ ದೇವೋತ್ತಮರಂತೆ ಸೂರ್ಯರಿಗೆ ಸಮಾನರಾಗಿದ್ದರು.

ಅದೇ ೬ನೇ ವಿಕ್ರಮಾದಿತ್ಯನ ಕ್ರಿ.ಶ.೧೧೮೭ರ ಮತ್ತೊಂದು ಶಾಸನದಲ್ಲಿ[೨೬]

ಅಂತಾಯಿನ್ನೂರ್ವ್ವರ್ಗ್ಗಂ
ಸಂತತಮತಿಭಕ್ತಿಯಿಂದೆ ನಾವಿದ ಧೋರಂ
ಮಾಂತನದಾಗರಮೆನಿಪದ
ಗುಂತಿಗೆ ನೆಲೆಯಾದಂತು ಪಿರಿಯರುಮೊಳರೆ

ಈ ಪದ್ಯದಲ್ಲಿ ನಾಪಿತದಾಸನ ಪೂರ್ವಜರ ಬಗ್ಗೆ ತಿಳಿಸುತ್ತಾನೆ. ಅಂತ ಇನ್ನೂರ್ವ್ವರಿಗೆ ಸಂತತ ಭಕ್ತಿಯಿಂ ನಾವಿದದೋರ ಎಂಬುವನು ಈ ವಂಶಕ್ಕೆ ಹಿರಿಯನು.

ಆತನ ತನಯಂ ಭುವನ
ಖ್ಯಾತ ಜಾತಂ ವಿನೂತ ವಿನಯಾನ್ವಿತನೆಂ
ದಾತನನಭಿವರ್ಣ್ಣಿಸುವುದು
ಭೂತಳಮವನನ್ನು ಜಸಕೆ ನೋನ್ತರುಮೊಳರೆ

ಆತನ ಮಗ ಭೂಮಿಗೆ ಹೆಸರು ವಾಸಿಯಾದವನು, ವಿನಯವಂತನು ಎಂದೇ ಆತನಿಗೆ ಇನ್ನೊಂದು ಹೆಸರು ಕೊಡಬೇಕು. ಅಂತವರು ಭೂತಳಕ್ಕೆ ಬಹಳ ಕಡಿಮೆ.

ಶಿವಪಾದಾಂಬುಜಭೃಂಗಂ
ಭುವನಸುತ್ಯನೆನಿಪ ನಾವಿದ ಶಾನ್ತಂ
ಗವನಿತಳಂ ಬಣ್ಣಿಸುತಿರ
ಲವಂಗೆ ಸವಿಳಾಸಿ ದಾಸನುದಯಂ ಗೆಯ್ದು

ಶಿವಪಾದಾಂಭುಜದ ದುಂಬಿಯಂತವನು, ಭುವಿಯಜನ ಸ್ತುತಿಸುವಂತವನು, ನಾವಿದಶಾಂತ. ಅವನನ್ನು ಬಣ್ಣಿಸುತ್ತಿದ್ದರೆ ಅವನಿಗೆ ದಾಸನೆಂಬ ಮಗ ಜನಿಸಿದನು.

ದೇವದ್ವಿಜಗುರುಭಕ್ತಂ
ಬೂವಿಶ್ರುತಕೀರ್ತ್ತಿಯೆನಿಪ ನಾವಿದ ದಾಸಂ

ದೇವಾಧಿದೇವಭವನಮ

ನೀವಸುಧೆಗೆ ತಿಳಕಮಾಗಿರಲ್ಮಾಡಿಸಿದ

ದೇವ, ಬ್ರಾಹ್ಮಣ, ಗುರುಭಕ್ತ, ಭೂಮಿಗೆ ಶೃತಿಗಳ ಕೀರ್ತಿಯಂತೆ ನಾವಿದದಾಸ ದೇವಾಧಿದೇವನ ಗುಡಿಯನ್ನು ಈ ವಸುಧೆಗೆ ತಿಲಕದಂತೆ ಮಾಡಿಸಿದನು.

ಆ ಸಾಗರಮಂ ದಾಂಟಿ ಮ

ಹೀಸುತೆಯಂ ಕಣ್ಡು ಲಂಕೆಯಂ ಸುಟ್ಟ ಮಹಾ

ಸಾಸಿಗನೆನಲಿನ್ನೂರ್ವ್ವರ

ಪೇಸಣ ಹನುಮಂತನೆನಿಪ ನಾವಿದ ದಾಸ

ಸಾಗರವನ್ನು ದಾಟಿ, ಸೀತೆಯನ್ನು ಕಂಡು, ಲಂಕೆಯನ್ನು ಸುಟ್ಟ, ಮಹಾಸಾಸಿಗನಾದ ಹನುಮಂತನಂತೆ ಇನ್ನೂರ್ರ್ವರಿಗೆ ಪೇಸಣ ಹನುಮಂತ ಎನಿಸಿಕೊಂಡಿದ್ದನು ಈ ನಾವಿದದಾಸ.

ಆತನ ಮಾಡಿದ ಧರ್ಮ್ಮ

ಕ್ಕಾತತಯಶರೆನಿಸಿ ನೆಗರ್ದ್ದಮೋರಿಯ ವಂಶರ್

ಪ್ರೀತಿಯೊಳೆ ಕೂರ್ತ್ತು ಕೊಟ್ಟರ್

ಖ್ಯಾತರ್ಚ್ಚಂದ್ರಾರ್ಕ್ಕತಾರಮಾದರದಿಂದ

ಆತನು ಮಾಡಿದ ಧರ್ಮಕ್ಕೆ ಅತಿಶಯರೆನಿಸಿ ಶೋಭಿಸುತ್ತಿದ್ದ ಮೋರಿಯವಂಶರ್ ಪ್ರೀತಿಯಲ್ಲಿ ಕುರ್ತುಕೋಟಿಯು ಆಚಂದ್ರಾರ್ಕವಾದುದಾಗಿದೆ.

ಇದೇ ಸಮಯದ, ಇದೇ ಗ್ರಾಮದ ಮತ್ತೊಂದು ಶಾಸನದಲ್ಲಿ

ಕಂದ:- ಸೇತುಹಿಮಾದ್ರಿಯಿ ನೊಳಗಣ

ಭೂತಳದೊಲ್ನೆಗಳ್ದ ಶಾತ್ರವಕ್ಷತ್ರಿಯರಂ

ಸಾತಾಸಿಯಿಂದ ತವಿಸಿ ಮ

ಹೀತಳಮಂ ವಿಕ್ರಮಾಕನಾಳುತ್ತಮಿರಲ್॥

ಸೇತುಹಿಮಾಲಯದೊಳಗೆ ಇರುವ, ಭೂಮಿಯಲ್ಲಿ ಶಾಶ್ವತ ಕ್ಷತ್ರಿಯನಾಗಿ ಮಹಿತಳದಲ್ಲಿ ಇದ್ದ ವೈರಿಗಳನ್ನು ಮಣಿಸಿ ವಿಕ್ರಮಾಂಕನಾಳುತ್ತಿರುವಾಗ,

ಕಂದ:- ಅಡಿಗೆಱಗಿ ತಮ್ಮಪಾರ್ಜ್ಜಿ

ಸಿದಡಮೆಗಳಮ ತಂದು ಕೊಟ್ಟು ಶರಣಾರ್ತ್ಥಿಗ

ಳಾದಡೆ ಬಾಲ್ವರಹಿತವರ್ಗ್ಗಂ

ತೊಡರ್ದುೞಿವರೆ ಮುಳಿಯೆ ವಿಕ್ರಮಾದಿತ್ಯ ನ್ರಿಪಂ

ಅಡಿಗೆರಗಿ ತಮ್ಮಲ್ಲಿ ಇರುವ ವಸ್ತುಗಳನ್ನು ಕಾಣಿಕೆಯಾಗಿ ತಂದುಕೊಟ್ಟು, ಶರಣಾಗತಿಯಾಗಿ ಇರುವಾಗ ಅವನಿಗೆ ಅಹಿತವನ್ನು ಮಾಡುವವರನ್ನು ನಿಜವಾಗಿಯೂ ಉಳಿಸಿಬಿಡುವನೇ ವಿಕ್ರಮಾಂಕರಾಜ.

ಕಂದ:- ಆದಿಬ್ರಹ್ಮಸಮಾಜದ
ವೇದವಿದೆರ್ಸ್ಸಪ್ತಸೋಮಸಂಸ್ಥಾವಭೃಥಾ।
ಹ್ಲಾದನಕೃತ ರಮಳಯಶ
ಮ್ಮೇರ್ದಿನಿಯೊಳ್ಕುಜಿತಕೊಂಟೆಯ ದ್ವಿಜನಿಚಯ॥

ಆದಿ ಬ್ರಹ್ಮಸಮಾಜದ ವೇದಗಳಿಗೆದಿಪತಿಯಂತವರು, ಅದ್ವಿತೀಯ ಯಶಸ್ಸುಳ್ಳವರು ಕುರ್ತುಕೋಟೆಯ ದ್ವಿಜ ಜನರು ಆಗಿದ್ದರು ಎಂದು ಪುರ ಜನರನ್ನು ಹೊಗಳಿದೆ.

ಶಿವಪಾದಾಂಬುಜಭ್ರಿಂಗಂ
ಭುವನಜನಸ್ತುತ್ಯನೆನಿಪ ನಾವಿದ ಶಾನ್ತಂ
ಗವನಿತಳಂ ಬಣ್ಣಿಸುತಿರ
ಲವಂಗೆ ಸವಿಳಾಸಿ ದಾಸನುದಯಂ ಗೆಯ್ದು

ಶಿವನ ಪಾದ ಭೃಂಗದಂತಿರುವ ಭೂಮಿಯ ಜನರು ಸ್ತುತಿಸುತ್ತಿರುವ ನಾವಿದನಾದ ಶಾಂತವಂತನು ಜಗವೆಲ್ಲ ಬಣ್ಣಿಸಲು ಅವನಿಗೆ ದಾಸನು ಹುಟ್ಟಿದನು.

ನಿಜಬನ್ಧುಬ್ರಜಕಾಮದೇನು ವಿನಯಾಂಭೋರಾಶಿ ಶೌರ್ಯೋರ್ಜ್ಜಿತಂ
ಸುಜನಂ ಸತ್ಯದೋಳಬುಜಪಿಯತನೂಜಂ ದೇವತಾಭಕ್ತಿಯೊಳ್
ತಿಜಗದ್ವೆನ್ದ್ಯನನಿನ್ದ್ಯ ಬಾಣ ನಮದೆನ್ತಾಂದೇಸಿಗರ್ಗ್ಗೆಯ್ದೆ ತಾಯ
ಜಿತಂ ತಂಬುಲಿಗಾಗ್ರಗಣ್ಯನಧಿಕ ನ್ನಾಗಂ ಮಹೀಭಾಗದೊಳ್॥

ಈ ಮಹಾಸ್ರಗ್ಧರಾವ್ರತ್ತದಲ್ಲಿ ನಿಜಬಂಧುವು ಕೇಳಿದ್ದನ್ನು ನೀಡುವ ಕಾಮಧೇನುವು, ವಿನಯದ ರಾಶಿಯು, ಶೌರ್ಯದಲ್ಲಿ ಉತ್ತಮನು, ಸುಜನನು, ಸತ್ಯವಂತನು, ದೇವತಾಭಕ್ತಿಯಲ್ಲಿ ನಾಗತಂಬುಲಿಗ ಅಗ್ರಗಣ್ಯನಾಗಿದ್ದನು ಈ ಮಹಿತಳದಲ್ಲಿ ಎಂದು ವರ್ಣಿಸುತ್ತದೆ.

ಕಂದ:- ಶಿವಭಕ್ತಂ ವೀರಾಗ್ರಣಿ
ಗವಜಿಗಳಾಭರಣ ಮಖಿಳ ದೇಸಿಗರ್ಗ್ಗೆಲ್ಲಂ।
ಭುವನದಳೆಂದುಂತಾಯಿ ಭೂ
ಭುವನತ್ತಮನೆನಿಸಿ ಗವಜಿ ಮುದ್ದಂ ನೆಗಟ್ದ॥

ಶಿವಭಕ್ತ, ವೀರಾಗ್ರೇಸರಿಗೆಲ್ಲ ಆಭರಣದಂತಿರುವವನು, ಭೂಮಿಯಲ್ಲಿ ಉತ್ತಮನೆನಿಸಿದ್ದನು ಮುದ್ದನು.

ಮನಸಿಜನೆನಿಸುವ ಸುಬಗದು
ತನಗೆ ನಿಜಂ ವಿಕ್ರಮಕ್ರಮೋನ್ನತಿಯೊಳ ಮ
ರ್ಜ್ಜುನನ ಸಮನೆಡವ ಬಸವ
ನಿನನುರಾಗದೆ ಸಕಳಧಾತ್ರಿ ಬಣ್ಣಿಸುತಿರ್ಕ್ಕು॥

ಮನಸಿಜನಂತೆ (ಮನ್ಮಥನಂತೆ) ಸೊಬಗಿನವನು, ಪರಾಕ್ರಮದಲ್ಲಿ ಅರ್ಜುನನಿಗೆ ಸಮನಾದವನು, ಬಸವನನುರಾಗಿಯೂ ಆಗಿದ್ದನು ಎಂದು ಸಕಲಭೂಮಿಯಲ್ಲಿ ಈತನನ್ನು ಬಣ್ಣಿಸಲಾಗುತ್ತಿತ್ತು ಎಂದು ಈ ಪದ್ಯವು ಅವನನ್ನು ಚಿತ್ರಿಸಿದೆ.

ಕ್ರಿ.ಶ.೧೦೯೧ರ ಪೇಠಾಆಲೂರಿನ ೬ನೇ ವಿಕ್ರಮಾದಿತ್ಯನ ಕಾಲದ ಶಾಸನದಲ್ಲಿ.[೨೭]

ಕೀರ್ತ್ತಿಲತಾಂಕುರಸ್ಯಕ
ಮಳಂಲಕ್ಷ್ಮೀನಿವಾಸಾಸ್ಪದಂ ವಜ್ರಂ ವೈರಿಮಹೀ
ಭೃತಾಂಪ್ರತಿನಿಧಿರ್ದ್ದೇವಸ್ಯ
ದೈತ್ಯೈದ್ರುಹಃ ರಾಜಾಸೀಂ ಜಯಸಿಂಹ

ಕೀರ್ತಿಗೆ ಅಲಂಕಾರದಂತೆ, ಲಕ್ಷ್ಮಿಗೆ ವಾಸಸ್ಥಾನವಾಗಿ, ವೈರಿಗಳಿಗೆ ವಜ್ರದಂತೆ ಕಠಿಣವುಳ್ಳವನಾಗಿ, ದುಷ್ಟನಿಗ್ರಹನಾಗಿದ್ದನು ಜಯಸಿಂಹದೊರೆ. ಕೀರ್ತಿಯ ಲತೆ ಅಂಕುರವಾಗಿ, ಲಕ್ಷ್ಮೀನಿವಾಸವಾಗಿ, ವೈರಿಗಳಿಗೆ ಭಂಜಕನಾಗಿ, ದುಷ್ಟರಿಗೆ ದುಸ್ವಪ್ನವಾಗಿ ಇದ್ದಂತವನು ರಾಜ ಜಯಸಿಂಹನು.

ವಯಮಪಿ ಪೊಲಿಕೇಸಿಕ್ಷ್ಮ
ಪತಿಂವರ್ಣ್ನಾನ್ತಃ ಪುಳಕಕಳಿತದೇಹಾಃ ಪ
ಶ್ಯತಾದ್ಯಾಪಿ ಸನ್ತಃ ಸ
ಹಿತುರಗಗಜೇನ್ದ್ರ ದ್ಗ್ರಾಮಸಾರಂ ಸಹಸ್ರದ್ವಯಪರಿಮಿತನೃತ್ವಿಗ್ಯಾಚಕಾರಾಶ್ವೇಧೇ ॥

ಜೀವನದುದ್ದಕ್ಕೂ ಪುಲಿಕೇಶಿಯು ಸೂಕ್ಷ್ಮಮತಿಯನಾಗಿ, ಕುದುರೆ, ಆನೆ ಮುಂತಾದವುಗಳನ್ನು ಸಹಸ್ರ ಸಂಖ್ಯೆಯಲ್ಲಿ ಪಡೆದು ರಾಜ್ಯಭಾರ ಮಾಡುತ್ತಿದ್ದನು.

ಜನಹಿತನಯ್ಯಂ ಶಾನ್ತ
ವಿನೆಯಾಂಬುಧಿ ಮುದ್ದಿಯಬ್ಬೆ ತಾಯಿ ತಮ್ಮಂದಿ
ರ್ಮ್ಮನುಚರಿತರ್ಬಮ್ಮಸಿಂಗ
ರ್ತ್ತನಗೆಂದೆಡೆ ದಾಸನೇ ಕ್ರಿತಾರ್ತ್ಥನೊ ಜಗದೊಳ್॥

ಜನಹಿತನಾಗಿ, ಶಾಂತಿ-ವಿನಯಕ್ಕೆ ಸಾಗರದಂತಿರುವ ಮುದ್ದಿಯಬ್ಬೆ ತಾಯಿಗೆ ಮಗನಾದ ದಾಸನು ಕೀರ್ತಿವಂತನಾಗಿದ್ದನು.

ಕ್ರಿ.ಶ.೧೯೨೨ರ ಸೊರಟೂರಿನ ೬ನೇ ವಿಕ್ರಮಾದಿತ್ಯನ ಶಾಸನದಲ್ಲಿ.[೨೮]

ದಾನದೊಳನ್ನಮೆ ಸಾರಂ
ದೀನಾನಾಥರ್ಗ್ಗೆ ತಿಪ್ಪಿದಾನಮೆನುತ್ತುಂ
ತಾನಜಿದು ಜಕ್ಕಿಯಬ್ಬೆ ಯ
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್

ದಾನದಲ್ಲಿ ಅನ್ನದಾನವೇ ಮುಖ್ಯ. ದೀನ, ಅನಾಥರಿಗೆ ತಿಪ್ಪಿದಾನವನ್ನು ತಾನೇ ನೀಡಿದ ಜಕ್ಕಿಯಬ್ಬೆಯು ಯಶೋನಿಧಿಯು ಸತ್ರಕ್ಕೆ ಭೂಮಿದಾನವನ್ನು ನೀಡಿದಳು.

ಕೊಟ್ಟ ಕುಜಿಪಿಂಗೆ ಬಗೆ ನೇ
ರ್ಪ್ಪಟ್ಟಿರೆ ರಸ ಭಾವಮರ್ತ್ಥ ಗೌರವದೊಳೊಡಂ
ಬಟ್ಟಿರೆ ಪೇಳ್ದಂ ಮಾಧವ
ಭಟ್ಟಂ ವಾಕ್ ಶ್ರೀಲಲಾಟಮಣಿಮಯಪಟ್ಟಂ

ಈ ಶಾಸನದ ಕವಿ ಮಾಧವಭಟ್ಟನು ತನ್ನನ್ನು ವಾಕ್ ಶ್ರೀಲಲಾಟಮಣಿಮಯಪಟ್ಟಂ ಎಂದೂ, ತಾನು ರಚಿಸಿದ ಶಾಸನವು ರಸ-ಭಾವ-ಅರ್ಥ ಗೌರವಗಳಿಂದ ಒಡಂಬಡುವಂತಹದು ಎಂದೂ ಹೇಳಿಕೊಂಡಿದ್ದಾನೆ.

ಡೋಣಿಯ ಕ್ರಿ.ಶ.೧೯೪೪ರ ಶಾಸನದಲ್ಲಿ.[೨೯]

ಮತ್ತೇಭವಿಕ್ರೀಡಿತವೃತ್ತ :-ಶರಣಾಯಾತಜನಂಗಳಂ ಕರುಣದಿಂ ಕಾವೊಳ್ಪಿನಿಂ ವಜ್ರಪಂ
ಜರದನ್ನರ್ನ್ನೆರೆದಾನ್ತರಾತಿಬಳಮಂ ಸಂಹಾರಿಪಾತ್ಮೀಯ ಭೀ
ಕರಶೌರ್ಯ್ಯೋದಯದಿಂ ಪರಿಕ್ಷೀಪೊಡೆಲೇ ಬವನ್ನವೀರರ್ಕ್ಕಳ
ನ್ನರಿವರ್ತ್ತಾವೆನೆ ಸನ್ದರಿನ್ತುಗುರ ಮೂನೂರ್ಬ್ಬರ್ಜ್ಜಗದ್ಜುಂಭುಕರ್॥

ಶರಣಾದ ಜನರನ್ನು ಕರುಣದಿಂದ ಕಾಯುವವನು, ವಜ್ರಪಂಜರದಂತೆ ಅತಿಬಲನು, ಆತ್ಮೀಯನು, ಭೀಕರ ಶೌರ್ಯವಂತನು, ಪರೀಕ್ಷಿಸುವವರಿಗೆ ಸನ್ದರಿನ್ತುಗುರ ಮೂನೂರ್ಬ್ಬರ್ಜ್ಜಗೆ ಅದ್ಭುತನು ಆಗಿದ್ದನು.

ಮಹಾಸ್ರಗ್ಧರಾವೃತ್ತ :- ತವಗೆತ್ತಾನುಂ ಮೊಗಕ್ಕೊನ್ದಿನಿಸು ಮುಳಿಸು ಬನ್ದನ್ದು ಗೋತ್ರಾದ್ರಿಸಂಘಾ
ತವನೆತ್ತಂ ಪತ್ತಿ ಕಿರ್ತ್ತೆತ್ತುವರುಜಿಪಿಡಿದುದ್ಯದ್ದಿಶಾನೇಕಪಾನೀ
ಕವನಾರ್ದ್ದೊನ್ದೊನ್ದೆ ತೋಳ್ತಾಗಿಪರವಯವದಿಂ ಸುಜ್ರೆನಲ್ತಾಯ್ನೆಲಂದೋ
ಱುವಿನಂಮೂನೂರ್ಬ್ಬರುಂವಾರ್ದ್ಧಿಗಳನಿತುವನಾಳಾಪದಿಂಪೀರ್ದ್ದುತೋರ್ಪ್ಪರ್

ಕ್ರಿ.ಶ.೧೯೬೬ರ ಡೋಣಿಯಲ್ಲಿಯ ಶಾಸನದಲ್ಲಿ.[೩೦]

ಕಂದ :–ಘನಜಘನದಿಂದುಬಿಂಬಾ

ನನದ ಸರೋಜಾತನಯನ ದತಿನಿಬಿಡಘಟ

ಸ್ತನದ ಪುರಪುಷ್ಪನಿನದದ

ವನಿತಾಜನ ತಿಳಕ ಮಲ್ತೆ ಲಕ್ಷ್ಮೀದೇವಿ

ಈ ಪದ್ಯದಲ್ಲಿ ದೊಡ್ಡ ಕಿಬ್ಬೊಟ್ಟೆಯುಳ್ಳವಳು, ಸೂರ್ಯನಂತೆ ಮುಖ್ಯಳಾದವಳು, ಕಮಲ ತನಯಳು ಅತಿನಿಬಿಡ ಸ್ತನಗಳನ್ನು ಹೊಂದಿದವಳು, ಪುರಪುಷ್ಪನಿನಾದದ ವನಿತೆಯರ ಜನಕ್ಕೆ ತಿಲಕದಂತೆ ಇದ್ದವಳು ಲಕ್ಷ್ಮೀದೇವಿ ಎಂದು ಲಕ್ಷ್ಮಿದೇವಿಯ ವೈಭವವಾದ ಸೌಂದರ್ಯವನ್ನು ಈ ಪದ್ಯದಲ್ಲಿ ವರ್ಣಿಸಲಾಗಿದೆ.

ಮಹಾಸ್ರಗ್ಧರಾವೃತ್ತ :– ಬಳಸಿರ್ದ್ದದ್ರೀಂದ್ರದಿಂ ಸುತ್ತಿಜೆದೊದವಿದ ನಾನಾವಿನಬ್ರಾತದಿಂಕೋ

ಕಿಳಕೇಕೀಕೀರನಾದಂಗಳಿನೆಸೆವ ತಟಾಕಂಗಳಿಂ ದೇವಬೋಗಂ

ಗಳಿ ನತ್ಯುತ್ತುಂಗ ಕೋಟಾನ್ತರತಟವಿಕಟಾಟ್ವಾಳಕಾನೀಕದಿಂ ಕ

ಣ್ಗೊಳಿಸಿರ್ಕ್ಕುಂಭೂಮಿಭಾಮಾಮಳಮುಖತಿಳಕಂದ್ರೋಣಿಕಾಗ್ರಾಮಮೆತ್ತಂ

ಬಳಸಿ ಇದ್ದ ಮರಬಳ್ಳಿಗಳಿಂದ ಸುತ್ತುವರೆದ, ನಾನಾವನಗಳಿಂದ, ಕೂಗುವ ಕೋಗಿಲೆ, ಕೀರ ನಾದಗಳಿಂದ, ಶೋಭಿಸುವ ಕೊಳಗಳಿಂದ, ದೇವಭೋಗಗಳಿಂದ, ಅತಿ ಉತ್ತುಂಗ ಕೋಟೆ, ಬಾವಿ, ಅನೇಕ ರೀತಿಯ ಕಾಡುಗಳಿಂದ, ಕಣ್ಣು ಸೆಳೆಯುವ ಇದು, ಭೂಮಿಗೆ ಮುಖತಿಲಕದಂತೆ ಡೋಣಿ ಗ್ರಾಮವು ಕಾಣುತ್ತಿದೆ.

ಮಹಾಸ್ರಗ್ಧರಾವೃತ್ತ :– ಅಖಿಳೋರ್ವ್ವೀಸ್ತುತ್ಯರತ್ಯೂರ್ಜ್ಜಿತವಿಳಸಿತ ಧಮ್ಮರ್ಶ್ಯಶಾಂಕಾಮರೇಂದ್ರೇ

ಭಖಸಿಂಧೂದ್ಯತ್ತರಂಗೋತ್ತರ ನಿಭಿರುಚಿರತ್ಕಿರ್ತ್ತಿಗರ್ವ್ವಿಷ್ಠದರ್ಪ್ಪಿ

ಷ್ಠಖಳಪ್ರಧ್ವಂಸಕ ಬ್ಬಾಸುರಗುಣನಿಳಯ ಶ್ರೀಷ್ಷನ್ತರ್ಪ್ಪಣರ್ಷ್ಷ

ಣ್ಮುಖ ಶೌರ್ಯ್ಯದ್ದ್ರೋಣಿಕಾಗ್ರಾಮದ ವರಧರಣೀದೇವತಾಸಂಕುಳಂಗಳ್

ಅಖಿಲ ಜನರಿಂದ ಸ್ತುತಿಸಿಕೊಳ್ಳುವವರು, ಧರ್ಮದಿಂದ ನಡೆಯುವವರು, ಮನ್ಮಥನಂತೆ ಸುಂದರನು ಕೀರ್ತಿವಂತನು ಗರ್ವವಿಲ್ಲದವನು ಸೂರ್ಯನಂತೆ ತೇಜಸ್ಸುಳ್ಳವನು ಶೌರ್ಯಸಂಪನ್ನನ್ನಾಗಿದ್ದನೆಂದು ಈ ಪದ್ಯವು ವಿವರಿಸಿದೆ.

ಸುಜನಾಧಾರರುದಾರ

ಗ್ಗ್ರಜವ್ಯೆರಿಪರಾಕ್ರಮರ್ವ್ವಿರಾಜಿತ

ತೇಜಭ್ರ್ಭುಜಬಳದಳಿತಾರಾತಿಬ್ರ

ರುಜರೆನಿಸಿದೆ ಸೆಟ್ಟಿರುಂ ವಸುಮತಿಯೊಳ್

ಸುಜನಜನಾನುರಾಗಿಗಳು, ಆನೆಯಂತೆ ಬಲವುಳ್ಳವರು, ಭುಜಬಲ ಪರಾಕ್ರಮಿಗಳು, ಆದ ಸೆಟ್ಟರು ಭೂಮಿಯಲ್ಲಿ ರಾರಾಜಿಸುತ್ತಿದ್ದರು.

ಮತ್ತೇಭವಿಕ್ರೀಡಿತಾವೃತ್ತ :- ವಿನಯಾಳಮಕರಣರ್ವ್ವಿವೇಕನಿಳಿಯರ್ಗ್ಗಂ ಭೀಯರ್ಯ್ಯರತ್ನಾಕರ
ರ್ಮ್ಮನು ಮಾರ್ಗ್ಗಸ್ರ್ಸುಜನೈಕಬಾಂಧವರಿಳಾಲೋಕಪ್ರಣೂತರ್ವ್ವಿಶಿ
ಷ್ಟನಿಕಾಯಾಬುಜಷಣ್ಡಕಿರಣದ್ರೋರ್ನೀಪುರಾಂಬೋಧಿವ
ರ್ಧನ ಚಂದ್ರರ್ಸ್ಸಲೆ ಸಟ್ಟಿಗುತ್ತರೆಸೆದರ್ವ್ವಿಶ್ವಂಭರಾಚಕ್ರದೊಳ್

ವಿನಯವಂತನು, ವಿವೇಕನು, ವೀರರತ್ನಾಕರವರ್ಮನು, ಸುಜನರಾದ ಬಾಂಧವರಿಂದ ಕೂಡಿ, ವಿಶಿಷ್ಟನು, ಸದೃಡ ಕಾಯವನ್ನು ಹೊಂದಿದವನು, ದ್ರೋಣಿಪುರದಲ್ಲಿರುವವನು ಚಂದ್ರನಂತೆ ಶೋಭಿಸುತ್ತಿದ್ದನು ಎಂದು ವರ್ಣಿಸಿದೆ.

ಕ್ರಿ.ಶ.೧೧೧೦೨ರ ೬ನೇ ವಿಕ್ರಮಾದಿತ್ಯನ ಲಕ್ಷ್ಮೇಶ್ವರದ ಶಾಸನವು[೩೧]

ಮತ್ತೇಭವಿಕ್ರೀಡಿತವೃತ್ತ :- ಧುರದೊಳ್ತಾನೆ ಧುರಂಧರಂ ಸಮುಚಿತಾಪ್ತಾಳೋಚನಾಗ್ರೇಸರಾಂ
ತರದೊಳ್ತಾನೆ ಸಮಗ್ರಮಂತ್ರಿ ಪೆಱರಿಲ್ಲೆರದಿಂತು ಕಾರುಣ್ಯದಿಂ
ಪೊರೆದಾಳ್ದಂ ಚರಿತಕ್ಕೆ ಮೆಚ್ಚಿಪಿರಿದುಂ ಕೊಣ್ಡಾಡೆ ದಣ್ಡಾಧಿನಾ
ಥರೊಳಿಂತೊರ್ವ್ವನೆ ಜೀಯ ಬಾಪ್ಪೆನಿಸಿದಂ ಶ್ರೀಭೀಮದಣ್ಡಾಧಿಪಂ ॥

ಯುದ್ಧದಲ್ಲಿ ಧುರಂಧರನು, ಸಮಯೋಚಿತವಾದ ಆಲೋಚನೆಯುಳ್ಳವನು, ಮಂತ್ರಿಗಳಂತೆ ಎಲ್ಲಾ ವಿದ್ಯೆಗಳನ್ನು ಬಲ್ಲವನು. ಕರುಣೆಯಿಂದ ಭೂಮಿಯನ್ನು ಆಳುತ್ತಿರುವವನು, ಇಂತವನನ್ನು ಮೆಚ್ಚಿ, ಕೊಂಡಾಡಿ ದಂಡಾಧಿಪತಿಯಾಗಿ ಕೆಲಸ ನಿರ್ವಹಿಸುತ್ತಿದ್ದನು ಶ್ರೀ ಭೀಮ ದಂಡಾಧಿಪ.

ಕಂದ:- ಅಭಿಮಾನಮೇರು ವಿತರಣ
ವಿಭೂಷಣಂ ಧರ್ಮ್ಮಧರ್ಮ್ಮರಾಜತನೂಜಂ
ವಿಭವೈಕದಿವಿಜರಾಜಂ
ಪ್ರಭುಮಂತ್ರೋತ್ಸಾಹಶಕ್ತಿಗುಣಸಂಪಂನ

ಈತನು ಅಭಿಮಾನಿಯು, ದಾನಗುಣ ಸಂಪನ್ನನು, ಧರ್ಮದಿಂದ ರಾಜ್ಯವಾಳುವವರಿಗೆ ತಮ್ಮನಂತೆಯು, ಮಂತ್ರೋತ್ಸಹಶಕ್ತಿ ಗುಣವುಳ್ಳವನು ಆಗಿದ್ದನು.

ಚಂಪಕಮಾಲವೃತ್ತ :- ಕದನದೊಳಾಂತರಂ ತುಳಿದು ಕೊಲ್ವೆಡೆಯೊಳ್ ಲಯಕಾಳಕಾಳನೆಂ
ಬುದು ಬಡಪಟ್ಟು ಬೇಡಿದವರ್ಗ್ಗೀವಡೆ ಜಂಗಮಕಲ್ಪವೃಕ್ಷಮೆಂ
ಬುದು ಶರಣೆಂದು ಬಂದೆಳೆಸೆ ಕಾವೆಡೆಯೊಳ್ ದೃಡ ವಜ್ರಗೇಹಮೆಂ
ಬುದು ಮನದಕ್ಕಱಿಂ ವಿಬುಧಮಂಡಳಿ ಮಾದವದಣ್ಣನಾಥನಂ

ಕದನದಲ್ಲಿ ವೈರಿಗಳನ್ನು ತುಳಿದುಕೊಂದು, ಲಯಕಾರನೆಂಬ ಬಿರುದು ಪಡೆದು, ಬೇಡಿದವರಿಗೆ ಜಂಗಮ ಕಲ್ಪವೃಕ್ಷದಂತೆಯೂ, ಶರಣೆಂದು ಬಂದವರನ್ನು ಕಾಯುವವನೂ, ದೃಢವಜ್ರದೇಹಿಯೂ ಆಗಿದ್ದನು ಮಾಧವದಂಡನಾಥ.

ಮತ್ತಿನ ನಿರಸ್ತಗುಣರನ
ನುತ್ತಮರಂ ಪಡೆದುದರ್ಕೆ ಧಾತ್ರಂ ಪ್ರಾಯ
ಶ್ಚಿತ್ತಂಗೆಯ್ದಂ ಪಡೆದು ಬು
ಧೋತದತಮನಂ ಮನುಚರಿತ್ರನಂ ಮಾಧವನ ॥

ಅನೇಕ ನಿರ್ಗುಣರನ್ನು ನಿರ್ಮಿಸಿದ ತಪ್ಪಿಗೆ ಬ್ರಹ್ಮನು ಪ್ರಾಯಶ್ಚಿತ್ತ ಮಾಡಿಕೊಳ್ಳಲು ಈ ಮಾಧವನೆಂಬುವವನನ್ನು ಈ ಭೂಮಿಗೆ ನಿರ್ಮಿಸಿ ಕಳಿಸಿದನು.

ಮತೇಭವಿಕ್ರೀಡಿತವೃತ್ತ:–

ದಯೆಯೊಳ್ಧರ್ಮ್ಮದೊಳಾರ್ಪ್ಪಿನೊಳ್ವಿಭವದೊಳ್ಗಾಂಭೀರ್ಯ್ಯದೊಳ್ಧೈರ್ಯ್ಯದೊಳ್
ನಯದೊಳ್ಚಾರುಚರಿತ್ರದೊಳ್ವಿನಯದೊಳ್ಚಾತುರ್ಯ್ಯದೊಳ್ಶೌರ್ಯ್ಯದೊಳ್
ನಿಯತಾಚಾರದೊಳೊಲ್ಪಿನೊಳ್ ಬಹುಕಳಾವಿಜ್ಞಾನದೊಳ್ತಾನೆ ಧಾ
ತ್ರಿಯೊಳತ್ಯುನ್ನತನಾದನೂರ್ಜ್ಜಿತನಯಶೋಲಕ್ಷ್ಮೀಧವಂ ಮಾಧವಂ॥

ದಯವಂತನು, ಧರ್ಮದಿಂದ ನೆಡೆದುಕೊಳ್ಳುವವನು, ಗಾಂಭಿರ್ಯ, ಧೈರ್ಯ, ನಯಚಾರುಚರಿತ್ರೆ, ವಿನಯಚಾತುರ್ಯ, ಶೌರ್ಯ, ನಿಯಮಿತವಾದ ಆಚಾರ, ಬಹುಕಲಾ ವಿಜ್ಞಾನಿಯಂತೆ ಈ ಭೂಮಿಯಲ್ಲಿ ಅತ್ಯುನ್ನತ ಯಶೋಲಕ್ಷ್ಮಿಯನ್ನು ಹೊಂದಿದವನು ಈ ಮಾಧವ.

ಕ್ರಿ.ಶ.೧೧೦೩ರ ಹೊಸೂರಿನ ಶಾಸನವು ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು, ಅದರಲ್ಲಿ.೨೨

ಉತ್ಪಲಮಾಲಾವೃತ್ತ :– ಅಲ್ಲಿ ವಿಳಾಸಿನೀಜನದ ಪುರ್ವ್ವಿನೊಳಲ್ಲದೆ ವಕ್ರಭಾವ ವಿ
ಲ್ಲೆಲ್ಲಿಯುವಾ ಮೃಗಾಕ್ಷಿಯರ ಕಣ್ಗಳೊಳಲ್ಲದ ಲೋಲವೃತ್ತಿಯಿ
ಲ್ಲೆಲ್ಲಿಯು ವಾಲಂತಾಗಿಯರ ಯಾನದೊಳಲ್ಲದೆ ಜಾಡ್ಯಮೆಂಬುದಿ
ಲ್ಲೆಲ್ಲಿಯುವೆಂದಡಾರ್ಪ್ಪೋಗಳರಾ ವಿಷಯಾಂ ತರಮಂನಿರಂತರಂ

ವಿಳಾಸಜನವಲ್ಲದೆ ವಕ್ರಮನಸ್ಸಿಲ್ಲ, ಮೃಗಾಕ್ಷಿಯರ ಕಣ್ಣುಗಳಲ್ಲದೆ ಲೋಲವೃತ್ತಿಯಿಲ್ಲ, ಲಂತಾಗಿಯರ ಜೊತೆಯಲ್ಲದೆ ಯಾವುದೇ ಜಾಡ್ಯವಿಲ್ಲ. ಒಟ್ಟಾರೆ ಭೋಗವಿಷಯದಲ್ಲಿ ನಿರಂತರವಾಗಿ ಉತ್ತಮವಾಗಿತ್ತು.ಎಂಬುದಾಗಿ ಗ್ರಾಮವನ್ನು ಈ ಪದ್ಯವು ವಿವರಿಸಿದೆ.

ಚಂಪಕಮಾಲಾವೃತ್ತ :– ಬಳಸಿದ ಪೂಗೊಳಂ ಕೊಳದೊಳೂಳ್ತಲರ್ದ್ದಂಬುಜ ವಂಬುಜಕ್ಕೆ ಪಾ
ಯ್ವಳಿ ಯಳಿಗೀತಿ ಗಳ್ಕಿ ಸುಗಿದಿರ್ಪ್ಪ ವಿಯೋಗಿ ನೋಡಿ ಸಂ

ಚಳಿಸೆಮರಲ್ದರಲ್ದ ಪೊಸಮಲ್ಲಿಗೆ ಮಲ್ಲಿಗೆಗಾಢಗಂಧಮಂ
ಬಳಸಿ ತೆರಳ್ಚಿ ತೀಡುವೆಲರಿಂ ಪೊಸವೂರೆಸಗುಂ ನಿರಂತರಂ

ಕಮಲದ ಹೂಗಳಿಲ್ಲದ ಕೊಳ, ದುಂಬಿಯಿಲ್ಲದ ಅಂಬುಜ, ಇವುಗಳನ್ನು ಯೋಗಿಯು ನೋಡಿ ಸ್ವಲ್ಪಹೊತ್ತು ಚಂಚಲಿತನಾಗುತ್ತಾನೆ. ಹೊಸಮಲ್ಲಿಗೆ, ಮಲ್ಲಿಗೆಗೆ ಸುಗಂಧ ಬಳಸಿ, ಹೊಸದಾಗಿ ನಿರಂತರವಾಗಿ ಕಾಣಿಸುತ್ತಿತ್ತು.

ಚಂಪಕಮಾಲಾವೃತ್ತ :- ಅವರ್ಗ್ಗೆ ತನೂಜರಾದರುದಾತ್ತಯಶರ್ಗ್ಗಿರಿಜಾತಗಂ ಮನೋ
ಭವಮಥನಂಗ ವಾ ಗಣಪಷಣ್ಮುಖರಾತ್ಮಜರಪ್ಪವೊಲ್ಮಹೋ
ತ್ಸವನಿರತರ್ಪ್ಪರಾರ್ತ್ಥಚರಿತ ವ್ವಿಭು ಬೊಪ್ಪಗವುಂಡನುಂಜಯಾ
ರ್ಣ್ಣವನೆನೆ ರೂಡಿಯಂ ಪಡೆದ ನಾಕಿಗವುಂಡನುವೆಂಬರಿರ್ವ್ವರುಂ

ನಾಕಿಗಾವುಂಡ ಮತ್ತು ಬೊಪ್ಪಗಾವುಂಡ ಎಂಬ ಇಬ್ಬರು ಯಾವ ರೀತಿ ಇದ್ದರು ಎಂಬುದನ್ನು ಈ ಪದ್ಯದಲ್ಲಿ ತಿಳಿಸಲಾಗಿದೆ.

ಮತ್ತೇಭವಿಕ್ರೀಡಿತವೃತ್ತ :- ಇವನೆಮ್ಮೆಂಮನೆ ಕಾದನಂಮಭರಮಂ ಕೈ ಕೊಣ್ಡನೆಮ್ಮೆಂಮಭಾ
ರವನೋರಣತಿರೆ ತಾಟ್ದಿದಂ ಕರುಣದಿಂಮ್ಮಂ ಯಥಾನ್ಯಾಯದಿಂ
ದವೆ ವೃತ್ತಿಪ್ರತಿಪತ್ತಿಯೊಳ್ನಿಲಿಸಿದಂ ತಾನೆಂದು ಸಂಪ್ರೀತಿಯಿಂ
ಭುವನಂ ಬಣ್ಣಿಸುತಿರ್ಪ್ಪುದಲ್ತೆ ಮುದದಿನ್ದಂ ನಾಕಿಗಾವುಣ್ಡನಂ

ಇವನು ನಮ್ಮ ಮನೆಯನ್ನು ರಕ್ಷಿಸಿದವನು, ಕರುಣೆಯಿಂದ ಯಥಾನ್ಯಾಯದಿಂದ ವೃತ್ತಿಯನ್ನು ಮಾಡುವವನು, ಸಂಪ್ರೀತಿಯಿಂದ ಈ ಭೂಮಿಯನ್ನು ಮುದದಿಂದ ರಕ್ಷಿಸುತ್ತಿದ್ದನು ನಾಕಿಗಾವುಂಡ ಎದು ಅವನ ರಕ್ಷನಾ ಕೆಲಸವನ್ನು ಈ ಪದ್ಯವು ಚಿತ್ರಿಸಿದೆ.

ಮತ್ತೇಭವಿಕ್ರೀಡಿತವೃತ್ತ :- ಇದು ಧರ್ಮಾಮೃತವಾರಿಯೇರಿಯಿದು ದೇವೇಂದ್ರಾಸ್ಪದಕ್ಕೇಱ ಲಿ
ಕ್ಕಿದ ನಿಶ್ರೇಣಿಯಿದಾತ್ಮಕೀರ್ತ್ತಿಲತೆಯಂ ವಿಸ್ತಾರಿಸಲ್ಕೆನ್ದು ಮಾ
ಡಿದಡರ್ಪ್ಪೆಮ್ಬಿನವೆಯ್ದೆ ನಿರ್ಮ್ಮಿಸಿದನಲ್ತೆ ನಾಕಿಗಾವುಣ್ಡನು
ದ್ಧದಯಂ ಶ್ರೀಮೊರಕೇಸ್ವರಾಲೆಯಮನೀಶಾದ್ರೀಂದ್ರಸಾದ್ರಿಶ್ಯಮಂ

ಈ ನೆಲ ಧರ್ಮಾಮೃತವಾರಿ. ದೇವೇಂದ್ರನ ಲೋಕಕ್ಕೆ ಹೋಗಲು ಇಟ್ಟಿರುವ ಶ್ರೇಣಿಯಂತೆ ಅವನ ಕೀರ್ತಿಕಥೆ ವಿಸ್ತಾರವಾಗಿ ಮಾಡಬೇಕೆಂದ ನಾಕಿಗಾವುಣ್ಡನು ಶ್ರೀಮಾರಕೇಶ್ವರ ದೇವಾಲಯವನ್ನು ನಿರ್ಮಿಸಿದನು.

ಮಹಾಸ್ರಗ್ಧರಾವೃತ್ತ :- ಶಿವಧರ್ಮ್ಮಾಮ್ಭೋಧಿಸಂವರ್ದ್ಧನತುಹಿನಕರ ಚ್ಚಾರುಚಾರಿತ್ರಮಾಕ
ನ್ದವ ಸನ್ತರ್ಶಬ್ದವಿದ್ಯಾಪ್ರಥಿತಪೃಥುಲತಾಳಮ್ಬನ ನ್ನಿತ್ಯದಾನ

ಯ್ಯವಿನೋದ ವ್ಯಾಪಕರ್ತಾವೆನೆ ನೆಗಳ್ದರಿಳಾಚಕ್ರದೊಳ್ಕೀರ್ತಿಲಕ್ಷ್ಮೀ

ಧವ ರಾತ್ಮೋದ್ಯತ್ತ ಪೋಗ್ನಿಗ್ರಸಿತ ಮನಸಿಜಸ್ಸಾಮವೇದಿಬ್ರತೀಂದ್ರರ್

ಶಿವಧರ್ಮವನ್ನು ಹರಡಲೆಂದು ಸುಚಾರಿತ್ರವನ್ನು ಹೊಂದಿ, ವಿದ್ಯಾಪಂಡಿತನಾಗಿ ನಿತ್ಯದಾನ ವಿನೋದದಿಂದ ಶೋಭಿಸುತ್ತಿರೆ, ಆತನಲ್ಲಿ ಲಕ್ಷ್ಮಿ ನೆಲೆನಿಂತು, ಆತನ ಎಲ್ಲಾ ಕೆಲಸಗಳಿಗೆ ಇಂಬುಗೊಟ್ಟಂತಿದ್ದಳು.

ಕ್ರಿ.ಶ.೧೧೧೦೫ರ ಕಣವಿಯ ಶಾಸನವು ಕಲ್ಯಾಣಚಾಲುಕ್ಯರ ದೊರೆ ೬ನೇ ವಿಕ್ರಮಾದಿತ್ಯನ ಕಾಲದ್ದಾಗಿದ್ದು.[೩೩]

ಚಂಪಕಮಾಲಾವೃತ್ತ :- ತ್ರಿಭುವನವರ್ತಿಕೀರ್ತಿ ಸುಭಲಕ್ಷಣಲಕ್ಷಿತ ಭದ್ರ ಮೂರ್ತಿ ದೋ

ರ್ವ್ವಿಭವವಿನಿರ್ಜ್ಜಿತಾರಿದುರಘಬ್ರವಹಾರಿಯಿವಂ ದಿಟಂ ಜಗ

ಕ್ಕಬಿನವ ಚಕ್ರಿಯೆಂ ದಭಿಜನಂ ಪೊಗಳುತ್ತಿರೆ ಮೆಚ್ಚಿಬಿಚ್ಚತಂ

ಪ್ರಭುವನಮಲ್ಲಚಕ್ರಿಪರಿಪಾಳಿಸುರ್ದ್ದನಶೇಷಧಾತ್ರಿಯಂ

ಪ್ರಭುವನಕ್ಕೆ ರಾಜನು ಕೀರ್ತಿವಂತನು, ಸುಲಕ್ಷಣನು, ದುರಾಗ್ರಿಗಳನ್ನು ನಾಶಮಾಡುವವನು, ಈತ ನಿಜವಾಗಿಯೂ ಚಕ್ರಿ (ವಿಷ್ಣು) ಎಂದು ಮೆಚ್ಚಿ ಹೊಗಳುತ್ತಿದ್ದರು ತ್ರಿಭುವನಮಲ್ಲ ವಿಕ್ರಮಾದಿತ್ಯನನ್ನುಪ್ರಜಾ ಜನರು ಎಂಬುದಾಗಿ ವಿಕ್ರಮಾದಿತ್ಯನ ವ್ಯಕ್ತಿತ್ವವನ್ನು ಇಲ್ಲಿ ಹೇಳಲಾಗಿದೆ.

ಉತ್ಪಲಮಾಲಾವೃತ್ತ :- ವಾರಿಧಿವೇಷ್ಟಿತಾಖಿಳಧರಾತಳಮಧ್ಯದೊಳಾದ ಮೊಪ್ಪುಗುಂ

ಮೇರುಕಳಕ್ಕೆ ಮೇಟಿಯವೊಲಾ ಕನಕಾದ್ರಿಯ ದಕ್ಷಿಣಾಶೆಯೊಳು

ಭಾರತವರ್ಷಮುಂಟದಜೋಳಿಪ್ಪುದು ಕುಂತಳದೇಶವಲ್ಲಿವಿ

ಸ್ತಾರಿಸಿ ಚೆಲ್ವೆತ್ತುದು ಮನೋಜನ ತೋಳ್ಪಲದಂತೆ ಬೆಳ್ವಲ

ಸಮುದ್ರದಿಂದ ಸುತ್ತುವರೆದ ಈ ಭೂಮಿಯ ಮಧ್ಯೆ ಮೇರುಕಳಕ್ಕೆ ಮೇಟಿಯಂತೆ, ಕನಕಾದ್ರಿಯ ದಕ್ಷಿಣ ಭಾಗದಲ್ಲಿ ಭರತ ವರ್ಷದಲ್ಲಿ ಇರುವುದು ಕುಂತಳದೇಶ. ಅದರಲ್ಲಿ ವಿಸ್ತಾರವಾದ, ಚಲುವಾದ ಮನೋಜನ ತೋಳ್ಬಲದಂತೆ ಬೆಳ್ವಲವೆಂಬ ನಾಡು ಇರುವುದು.

ಚಂಪಕಮಾಲಾವೃತ್ತ :- ಎಳೆದಳಿರ್ವ್ವೆಱಜಿದಾಂಬ್ರತರು ಕೆಂದಳಿರ್ದ್ದೊಂಗಲನಾಂತಶೋಕೆ ಕಾ

ಯ್ಗಳ ಹೊಜೆವೊತ್ತತೆಂಗಲರ್ದ್ದ ಮಲ್ಲಿಗೆ ತಳ್ತೆಲೆವಳ್ಳಿ ಪಣ್ತು ತ

ಣ್ಮಲೆವ ಮಯಂದವಾಳ ನನೆವೊತ್ತದಿರ್ಮುತ್ತ ಬೆಡಂಗನಾವಗಂ

ತಳೆದಿರೆ ತತ್ಪುರೋಪವನ ವೇನೆಸೆದಿರ್ಪುದೊನಾಡೆನೋಡೆಯುಂ

ಎಳೆಯದಾದ ಕೆಂಪು ಮರಗಳು, ಕಂಪಾದವಾಸನೆ, ಕಾಯ್ಗಳಗೊನೆಗಳನ್ನು ಹೊತ್ತುನಿಂತ ತೆಂಗಿನ ಮರಗಳು, ಮಲ್ಲಿಗೆಬಳ್ಳಿ, ಎಲೆಬಳ್ಳಿ, ಮಯಿಂದವಾಳ, ಇವುಗಳ ಬೆಡಗು ಈ ನಾಡಿನಲ್ಲಿ ಕಣ್ಮನ ಸೆಳೆಯುವಂತೆ ಇತ್ತು.

ಕಂದ:– ತರ್ಕ್ಕರಿವರ್ಮ್ಮನ್ಯರಿವ
ರ್ಮ್ಮಿಕ್ಕರಿವ ಗರ್ಗ್ಗ[ಣಿ]ಗಳಿವರೆನಲ್ಕೆ[ಗ]ಳ್ದೀಳ್ದೂ
ಜೊಕ್ಕಲ ಮಕ್ಕಳಿನೆಸೆದುದು
ನಿಕ್ಕುವೆ ನೆಕಣಿಯ ಪೆಂಪನೇ[ವ]ಣ್ನೆಪುದೂ.

ಇದಕ್ಕೆ ತಕ್ಕಂತೆ ಅಲ್ಲಿದ್ದ ಜನರು ಗುಣಿಗಳು, ನಲ್ಮೆಯಿಂದ ಇರುವಂತಹ ಮಕ್ಕಳು ಇಲ್ಲಿ ಶೋಭಿಸುತ್ತಿದ್ದರು. ಅದರ ಕಂಪನ್ನು ಹೇಗೆ ವರ್ಣಿಸಲಿ.

ಮತ್ತೇಭವಿಕ್ರೀಡಿತವೃತ್ತ:– ಬಿರುದಂ ಬಿಟ್ಟು ಪೊದರ್ಪ್ಪುಗೆಟ್ಟು ಭಯದಿಂ ಬಾಯ್ಬಿಟ್ಟು ಬೆಂಗೊಟ್ಟು ಸಂ
ಗರದೊ . ದ್ದರಿ ನಾಯಕ ನ್ನಿಜಭುಜಾವಷ್ಟಂಭಮಂ ಬಣ್ನೆಸು
ತ್ತಿರ ಲೋರಂತಿರೆ ತಾಳ್ದಿಬೀರಸಿರಿಯಂ ವಿಖ್ಯಾತಿವತ್ತಂಧರಾ
ಧರ [ಧ್ಯೆ]ರ್ಯ್ಯಂ ಜಯದೇವನಂ ಪೊಗಳ್ಗುವಿಶ್ವಂಧರಾಮಣ್ಡಳಂ

ಬಿರುದುಗಳನ್ನು ಕೇಳಿದರೆ ಸಾಕು, ಭಯದಿಂದ ಬಾಯಿಬಿಟ್ಟು, ಬೆನ್ನುಕೊಟ್ಟು ಓಡುವಂತೆ, ಯುದ್ಧದಲ್ಲಿ ವೀರತನದಿಂದ ಯುದ್ಧ ಮಾಡುವವನು, ನಾಯಕನ ಭುಜದಂತೆ ಇರುವವನು, ಅವನನ್ನು ಬಣ್ಣಿಸುತ್ತಿರೆ, ಅವನು ಊರಿನ ಸಿರಿಯಿದ್ದಂತೆ ಪ್ರಖ್ಯಾತಿ ಪಡೆದವನು ಎಂದು ಜಯದೇವನನ್ನು ವಿಶ್ವವೇ ಹೊಗಳುತ್ತಿದೆ.

ಕಂದ:– ದಯಯಿಂ ಸುರಭೂಜಂನಿ।
ಶ್ವಯವೀಗಳ್ಮನುಜ ಮೂರ್ತ್ತಿ ವೆತ್ತಿರ್ದ್ದಪುದು॥
ಬ್ಬಿಯಾಳೆನ್ತು ಜಗಜ್ಜನಂ ಸಲೆ।
ಜಯದೇವ ಗೌವುಣ್ಡ ನೀವ ನಾಬ್ಬೇಡಿ ದೊಟಂ॥

ದಯೆಯಲ್ಲಿ ದೇವರಂತೆ ಮನುಜನಾಗಿ ಮೂರ್ತವೆತ್ತಿದವನು ಎಂದು ಜಗತ್ತಿನ ಜನ ಜಯದೇವಗೌಡನನ್ನು ಹೊಗಳುತ್ತಿದೆ.

ಚಂಪಕಮಾಲಾವೃತ್ತ :– ಹರಚರಣಾಜ್ಜದೊಳ್ಮನಮನೂರ್ಜ್ಜಿತರ್ಧ್ಮ ದೋ[ಊರ್ಜ್ಜಿತಾ] ತ್ಮಮಂ
ನಿರುಪಮ[ಮಾ]ದ ವೀರತಪದೊಳ್ತನುವಂ ನಿಲಿಸಿಟ್ಟು ಕೀರ್ತ್ತಿವ
ಲ್ಲರಿ ನೆಜೆಪರ್ವ್ವಿ ಭೂಭವನಮಂ ಪೆಸರ್ವ್ವೆತ್ತನೆನುತ್ತರಾಗದಿಂ
ಸತು ಕವೀಶ್ವರತತಿ ಬಣ್ನೆಕುಂ ಲಕುಳೀಶ್ವರನಂ ನಿರಂತರ

ಶಿವನ ಚರಣದಲ್ಲಿ ಧರ್ಮಪಾಲಿಸುವವನು, ನಿರುಪಮನು, ತಪದಲ್ಲಿ ಮನಸ್ಸನ್ನು ನೆಟ್ಟವನು, ಕೀರ್ತಿಯಿಂದ ಭೂಮಿಯಲ್ಲಿಯೇ ಹೆಸರು ಪಡೆದವನು ಎಂದು ಕವಿಗಳು ಲಕುಳೀಶ್ವರನನ್ನು ನಿರಂತರವಾಗಿ ಬಣ್ಣಿಸುತ್ತಿದ್ದರು.

ಲಕ್ಷ್ಮೇಶ್ವರದ ಕ್ರಿ.ಶ.೧೧೧೦೭ರ ಶಾಸನದಲ್ಲಿ.[೩೪]

ಮತ್ತೇಭವಿಕ್ರೀಡಿತ ವೃತ್ತ:- ತೆವರೆಲ್ಲಂ ದೇವತಾಮಂದಿರ ನಿವಹಮೆ ನಿಮ್ನಸ್ಥಳೀರಾಜಿಯೆಲ್ಲಂ
ಸುವಿರಾಜದ್ದೀರ್ಘಿಕಾಸಂಕುಳಭರಿತಪಯಃಪೂರನೀರೇಜಕಾಸಾ
ರವೆ ಮತ್ತಂ ತತ್ಸಮಾಳಂಕೃತವಸುದೆಯದೆಲ್ಲಂ ಲಸಚ್ಚಂದನೋದ್ಯಾ
ನವೆನಲ್ ರಮ್ಯಂದಲೆಂದುಂ ಪುರಿಕರನರೀಲೀಲೆ ಲೋಕಾವಲೋಕಂ॥

ಈ ಪದ್ಯವನ್ನು ಇಡೀ ನಾಡಿಗೆ ಅನ್ವಹಿಸಬಹುದು ಎಲ್ಲಾಕಡೆಯೂ ದೇವತಾ ಮಂದಿರಗಳು, ಕೆರೆ, ಅರವಟಿಗೆ, ಶಿಲಾಶಾಸನಗಳು ಇವೆಲ್ಲವನ್ನು ಮಾಡಿಸುವುದು ಮಾನವನ ಜೀವನದ ಆದ್ಯ ಕರ್ತವ್ಯ. ಅದರಂತೆಯೇ ಈ ಪದ್ಯವು ಲಕ್ಷ್ಮೇಶ್ವರದಲ್ಲಿನ ದೇವಾಲಯಗಳು, ಅಲ್ಲಿಯ ಕೆರೆಗಳು, ಹಳೆಯ ಗುಡಿಯ ಅವಶೇಷಗಳನ್ನು ನೋಡಿದರೆ ಈ ಪದ್ಯದ ಅರ್ಥ ನಮಗೆ ತಿಳಿಯುತ್ತದೆ. ಎಲ್ಲಿ ನೋಡಿದರೂ ದೇವಾಲಯಗಳು, ಎಲ್ಲಾಕಡೆಯೂ ಉದ್ಯಾನವನಗಳಿಂದ ಲಕ್ಷ್ಮೇಶ್ವರವು ಶೋಭಿಸುತ್ತಿತ್ತು ಎಂಬುದಾಗಿ ತಿಳಿಸುತ್ತದೆ.

ಒಂದೊಂದಕ್ಷತೆಯಂ ಸಾ
ನಂದದಿಭ್ಯರ್ಚ್ಚಿಸಲ್ಕೆ ಕೊಳಗಂ ತೀವಿ
ತ್ತೇಂದೊಡೆ ಶಿವಲಿಂಗದ ಸಮ
ಸಂದ ಮಹೋನ್ನತಿಯ ಪವಣನಜೆಯೆಂ ಪೊಗಳಲ್

ಲಕ್ಷ್ಮೇಶ್ವರದಲ್ಲಿರುವ ಶಿವಲಿಂಗದ ಮೇಲೆ ಒಂದೊಂದು ಶಿವಲಿಂಗದ ಮೇಲೆ ಒಂದೊಂದು ಅಕ್ಕಿ ಇಡುತ್ತಾ ಬಂದರೂ ಕೊಳಗ ಅಕ್ಕಿ ಮುಗಿಯುತ್ತದೆ, ಅಂದರೆ ಅಷ್ಟೊಂದು ಸಂಖ್ಯೆಯ ಶಿವಲಿಂಗಗಳಿದ ಲಕ್ಷ್ಮೇಶ್ವರ ಶೋಭಿಸುತ್ತಿತ್ತು.

ಕಡೆಯದ ಕಂಡರಿಸದ ಬೇ
ರ್ಪಡಿಸದ ಕಮ್ಮಯಿಸದೊಂದಕೃತ್ರಿಮರೂಪಂ
ಪಡೆದು ಸ್ವಯಂಭು ನೆಲದಿಂ
ದೊಡೆದುದಯಂಗೆಯ್ದನಲ್ಲಿ ದಕ್ಷಿಣಸೋಮಂ

ಈ ಪದ್ಯವು ಸೋಮೇಶ್ವರ ದೇವರ ಉದಯವನ್ನು ತಿಳಿಸುತ್ತದೆ. ಈ ಸೋಮೇಶ್ವರನನ್ನು ಯಾರೂ ಕಡೆಯಲಿಲ್ಲ, ಕಂಡರಿಸಲಿಲ್ಲ, ಬೇರ್ಪಡಿಸಲಿಲ್ಲ. ಇದು ಕೃತ್ರಿಮ ರೂಪವನ್ನು ತಾಳಿ ಸ್ವಯಂ ನೆಲದಿಂದೊಡೆದು ಮೂಡಿ ಬಂದಿರುವುದು ಎಂಬುದಾಗಿ ತಿಳಿಸುತ್ತದೆ.

ಕ್ರಿ.ಶ.೧೧೧೨ರ ಲಕ್ಷ್ಮೇಶ್ವರದ ಶಾಸನವು ಕಲ್ಯಾಣಚಾಲುಕ್ಯದೊರೆ ೬ನೇ ವಿಕ್ರಮಾಂಕನ ಕಾಲದ್ದಾಗಿದ್ದು ಅದರಲ್ಲಿ.[೩೫]

ಕಂದ:– ಶೀಪತಿ ನಿರ್ಮ್ಮಳ ಕೀರ್ತಿ
ಶ್ರೀಪತಿ ಪರನ್ಯೆನ್ಯಜಳಧಿ ಸಂಜಾತಜಯ
ಶ್ರೀಪತಿ ಪತಿಹಿತ ಚರಿತಂ
ಶ್ರೀಪತಿದಣ್ಣಾಧಿನಾಥನೆಸೆದಂ ಧರೆಯೊಳ್.

ಲಕ್ಷ್ಮೀಪತಿಯು ನಿರ್ಮಲವಾದ ಕೀರ್ತಿವಂತನು, ಪರ ನೈನ್ಯಜಳಸಂಜಾತನು, ಪರಹಿತವಂತನು, ಒಡೆಯನ ಹಿತವನ್ನು ಯಾವಾಗಲೂ ಬಯಸುವವನು, ಶ್ರೀಪತಿ ದಣ್ಣನಾಯಕನು ಶೋಭಿಸುತ್ತಿದ್ದ ಧರೆಯಲ್ಲಿ ಎಂದು

ಕಂದ:– ಪರಮಗುಣರತ್ನನೆನಿಸಿದ
ಸಿರಿಪತಿ ದಣ್ಣಾಧಿನಾಥ ತಿಳಲನೆ ಸುಜನಾ
ಭರಣನ ಮಯ್ದುನ ನೆಸದಂ
ಪ[ತಿ]ಹಿತನಿಧಿ ನೆಗರ್ದ್ದನನ್ತದಣ್ಣಾಧೀಶ

ಪರಮಗುಣರತ್ನನೆನಿಸಿ, ಸಿರಿಪತಿ ದಂಡನಾಥ ಸುಜನಾಭರಣನಂತೆ, ಅವನ ತಿಲಕದಂತೆ ಅವನ ಮೈಯ್ದುನನು ಶೋಭಿಸುತ್ತಿದ್ದನು ಅನನ್ತದಣ್ಣಾಧಿಪತಿ.

ಕ್ರಿ.ಶ.೧೧೨೪ರ ಶಾಸನವೊಂದರಲ್ಲಿ.[೩೬]

ಕಂದ:– ತಂತಮ್ಮಪೇಕ್ಷೆಗಳಸುವ
ಪರಿತಾ ಪಂಚೇಂದ್ರಿಯ ವೆಂಬಗಜಮಮ ಜ್ಞಾನಂಕುಶದಿಂ
ತಾತೆಗೆದ ಪರಿಯಲೀಯದೆ
ಸಂತಯ್ಸಿಯೆಗೆಲ್ದನಮ್ರಿತರಾಶಿಮುನೀಶ.

ತಮ್ಮ ತಮ್ಮ ಅಪೇಕ್ಷೆಗಳಿಗನುಗುಣವಾಗಿ ನಡೆಯುವ ಪಂಚೇಂದ್ರಿಯಗಳಿಗೆ (ಗಜಕ್ಕೆ ಅಂಕುಶದಂತೆ) ಜ್ಞಾನಾಂಕುಶದಿಂದ ನಿಭಾಹಿಸುವವನು, ಅವುಗಳಿಗೆ ಪರವಾಗಿ ನಡೆಯದೆ ಸಂತಯಿಸಿ ಗೆದ್ದವನು ಅಮ್ರಿತರಾಶಿಮುನಿ ಎಂದು ಮುನಿಯು ಅರಿಷಡ್ವರ್ಗಗಳನ್ನು ಹೇಗೆ ಗೆದ್ದನೆಂಬುದನ್ನು ಈಪದ್ಯದಲ್ಲಿ ವಿವರಿಸಿದೆ.

ಪೇತಾಅಲೂರಿನ ಕ್ರಿ.ಶ.೧೧೨೪ರ ಶಾಸನದಲ್ಲಿ.[೩೭]

ಚಂಪಕಮಾಲಾವೃತ್ತ :- ಸಿರಿ ಪೊಸಮುತ್ತಿನೆಕ್ಕಸರದನ್ತಿರೆ ವಾಣಿ ಲಲಾಮರೇಖೆಯ
ನ್ತಿರೆ ಜಯಲಕ್ಷ್ಮಿರಕ್ಕವಣಿಯನ್ತಿರೆ ಪೇರುರ ದೊಳ್ಮುಖಾಬ್ಜದೂ
ಳ್ಪರಮೆಸೆಯುತ್ತಮಿರ್ದ್ದಭುಜದಣ್ಡದೊಳಿನ್ತು ನೆಗರ್ತ್ತವೆತ್ತನು
ರ್ಬ್ಬರೆಯಾಳಗಣ್ಯಪುಣ್ಯ ನಿಧಿ ಪೆರ್ಮ್ಮರಸರಂ ಬುಧಕಳ್ಪಭೂರ್ಹಂ

ಸಿರಿಯು ಹೊಸದಾಗಿ ಹುಟ್ಟಿ ಕೊರಳಮುತ್ತಿನ ಹಾರದಂತಿದ್ದು ಶಾರದೆಯ ಧ್ವನಿಯಂತಿರೆ ವಾಣಿಯರೇಖೆಯನ್ತಿದೆ. ಜಯಲಕ್ಷ್ಮಿಯ ರಕ್ಷಾಮಣಿಯನ್ತೆ ಅಗಲವಾದ ಎದೆಯುಳ್ಳ ಎರಡು ಭುಜಗಳು ಮಸೆಯುತ್ತಿದ್ದವು. ಈ ರೀತಿಯಾಗಿ ಭುಜದಣ್ಡಾದಿಪತಿ ಪೆರ್ಮರಸನು ಪ್ರಸಿದ್ಧಿ ಪಡೆದಿದ್ದನು.ಎಂಬುದಾಗಿ ವ್ಯಕ್ತಿ ವರ್ನನೆಯನ್ನು ಮಾಡಲಗಿದೆ.

ಮತ್ತೇಭವಿಕ್ರೀಡಿತವೃತ್ತ :- ಧರಣಿಕಾನ್ತೆಗೆ ಮಾಸವಾಡಿ ವಿಷಯಂ ಚೆಲ್ವಾಗಿ ಮಾಣಿಕ್ಯದಾ
ಭರಣಂಬೋಲೆಸೆದಿಪ್ಪುದಾವಿಶೆಯದೊಳ್ತಾಂ ಮಾಳದಾಲೂರ್ದ್ಧರಾ
ಮರ ರಿನ್ನೂರ್ವ್ವರಿಗಗ್ರಹಾ[ರ] ಮದನೊಳ್ಪಿಂ ಮುನ್ನೆ ಬಿಟ್ಟನ್ನರೇ
ಶ್ವರರತ್ನಂ ಜನಮೇಜಯಾಖ್ಯ ನೆನಲಿನ್ನೇವಣ್ಣಿಪಲ ಬಣ್ಣಿಪ

ಧರಣಿಯೆಂಬ ಸ್ತ್ರೀಗೆ ಮಾಸವಾಡಿ ದೇಶವು ಚಲುವಾಗಿ, ಮಾಣಿಕ್ಯದ ಆಭರಣದಂತಿತ್ತು. ಆ ಮಾಸವಾಡಿಯ ನಾಡಿನಲ್ಲಿ ಮಾಳದಾಲೂರಿನ ಅಗ್ರಹಾರವನ್ನು ಜನಮೇಜಯರಾಜನು ಅಲ್ಲಿನ ಬ್ರಾಹ್ಮಣರಿಗೆ ನೀಡಿದನು. ಅದನ್ನು ಯಾವ ರೀತಿ ಬಣ್ಣಿಸಲಿ?

ಕಂದ:- ವರಗಾಂಗೋದಕ ದನ್ದದಿ
ನರಳಿಯ ಮರದನ್ದದಿಂ ಪವಿತ್ರಮೆನಲ್ಬಿತ್ತ
ತ್ತರಿಸಿದಂ ತದೀಯವಿಪ್ರಾ
ಭರಣಂ ನಾಗರಸನತ್ರಿಗೋತ್ರಪವಿತ್ರಂ

ವರಗಂಗೋದಕದಂತೆ, ಅಶ್ವಥವೃಕ್ಷದಂತೆ, ಪವಿತ್ರವಾದ ಬ್ರಾಹ್ಮಣನು ಆದ ನಾಗರಸನು ಅತ್ರಿಗೋತ್ರದ ಪವಿತ್ರವಾದ ಆಭರಣದಂತೆ ಇದ್ದನು.

ಉತ್ಪಲಮಾಲಾವೃತ್ತ :- ತನ್ನೆಯ ತಿಣ್ಬೆನೇಳ್ಗೆ ಪಡಿಗಟ್ಟಳೆಯಾದುದು ಮಂದರಕ್ಕೆ ತ
ನ್ನುನ್ನತಿ ಮೇರುವಿಂಗೆ ಮಣಿಚೂಣಿಯಾದುದು ತನ್ನ ಮಿಕ್ಕದಾ
ನನ್ನವಕಳ್ಪವಲ್ಲರಿಗೆ ಪೊಂಗುಡಿಯಾದುದು ತನ್ನ ಕೀರ್ತಿ ಕ
ಯ್ಗನ್ನಡಿಯಾದುದುದುರ್ವ್ವಿಗೆನೆ ನಾಗರಸಂ ನೆಗರ್ದ್ದಂ ಧರಿತ್ರಿಯೊಳ್॥

ಅವನು ಹೇಳಿದಂತೆಯೇ ಪಡಿಯಕಟ್ಟಳೆಯಾಯಿತು ಮಂದಿರಕೆ, ತನ್ನ ಉನ್ನತಿ ಮೇರುವಿಗೆ ಮಣಿಯಂತೆ, ತನ್ನ ಮಿಕ್ಕದಾನಗಳವಕಳ್ಪವಲ್ಲರಿಗೆ ಪೊಂಗುಡಿಯಾದುದು, ತನ್ನ ಕೀರ್ತಿ ಕೈಗನ್ನಡಿಯಂತೆ ನಾಗರಸನು ದರಿತ್ರಿಯಲ್ಲಿಹಿಡಿದಕಾರ್ಯಗಳನ್ನು ನಡೆಸುತ್ತಿದ್ದನುಎಂದು ವಿವರಿಸಲಾಗಿದೆ.

ಅದೇ ಊರ, ಅದೇ ವರ್ಷದ ಶಾಸನದಲ್ಲಿ

ಅನ್ತಃಪುರದಧ್ಯಕ್ಷ್ಯಂ
ಕುನ್ತಳಪತಿಯಿತ್ತ ಸುರಿಗೆವಿಡಿವಧಿಕಾರಂ
ಸನ್ತತದ ತನ್ತ್ರಹಾಳಿಕೆ
ಯಿನ್ತು ಮಹಾಮಾತ್ಯಪದವಿಗಿವು ಸಂಚಕರ

ಅಂತಃಪುರದ ಅಧ್ಯಕ್ಷ, ಕುಂತಳದ ಅಧಿಪತಿ ಕೊಟ್ಟಂತಹ ಸುರಿಗೆ(ಕಿರುಗತ್ತಿ)ಯನ್ನು ಯಾವಾಗಲೂ ತನ್ನ ಹಸ್ತದಲ್ಲಿ ಹಿಡಿದಿರುತ್ತಿದ್ದ. ಈತನು ಸುರಿಗೆ ಹಿಡಿದಿದ್ದರಿಂದ, 'ಸುರಿಗೆಯ ನಾಗರಸ'ನೆಂಬ ಬಿರುದಿತ್ತು.

ಇದೇ ಊರಿನ ಮತ್ತೊಂದು ಶಾಸನದಲ್ಲಿ

ಗಿರಿಶಂಗಂ ಗೌರಿಗಂ ಶಣ್ಮುಖನಸುರಕುಳಧ್ವಂಶಿಗಂ ರುಕ್ಮಿಣೀಸು
ನ್ದರಿಗೆಂ ಪ್ರದ್ಯುಮ್ನ ನಿಂದ್ರಗಗಣಿತಗುಣೆ ಪೌಲೋಮಿಗಂ ಶ್ರೀಜಯನ್ತಂ
ಸುರವರ್ಯ್ಯರ್ಪ್ಪುಟ್ಟುವನ್ತುತ್ತಮ ನೆನಿಸಿ ಮಹಾದೇವದಣ್ಡಾಧಿಪಂಗಂ
ಚರಿತಶ್ರೀಮುದ್ದಿಯಕ್ಕಂ ಗಗಣಿತವಿಭವಂ ಪುಟ್ಟೆ ಪೆರ್ಮ್ಮಾಡಿದೇವ ॥

ಈಶ್ವರ ಮತ್ತು ಗೌರಿಗೆ ಷಣ್ಮುಖನು ಹುಟ್ಟಿದಂತೆ, ಕೃಷ್ಣನಿಗೂ ಮತ್ತು ರುಕ್ಮಿಣಿಗೆ ಪ್ರದ್ಯುಮ್ನ ಜನಿಸಿದಂತೆ, ಇಂದ್ರನಗೂ ಪೌಲಿಮೆಗೂ ಶ್ರೀಜಯಂತನು ಉದಯಿಸಿದಂತೆ, ಉತ್ತಮನಾದ ಮಹಾದೇವ ದಂಡನಾಥನಿಗೆ ಮುದ್ದಿನ ಮಗನಾದ ಪರಮಾರ್ಡಿದೇವನು ಜನಿಸಿದನು.

ಕಂದ:–ಸಾಧಿತವಿಭವಂ ಸುರಿಗೆಯ
ಮಾಧವ ನೆಂಬುದಯಕುಧರದಿ ನ್ದುದಿಯಿಸಿದಂ
ಬಾಧಿತರಿಪುತಿಮಿರಂ ಸೂ
. . . ಬುಧಕಂಜಪೆರ್ಮ್ಮನಂಬಾದಿತ್ಯ

ಹಲವು ರೀತಿಯಲ್ಲಿ ದೊಡ್ಡವನಾದ ಅಂದರೆ ಆಸ್ತಿ, ಐಶ್ವರ್ಯ, ವೀರತ್ವ ಹೀಗೆ ಹಲವು ರೀತಿಯಲ್ಲಿ ಸುರಿಗೆಯ ಮಾಧವನು ಉತ್ತಮನು, ದಯಾನಿಧಿಯು, ತೊಂದರೆಪಡುವ ಜನರ ರಕ್ಷಕನಾಗಿದ್ದನು.

ಸ್ಥಿರನೇ ಮೇರು ಧರಾಧರಂ ಶುಚಿಯೆ ಗಂಗಾಶಂಭವಂ ಧರ್ಮತ
ತ್ಪರನೇಪಾಂಡುಸುತಾಗ್ರಜಂ ಕಲಿಯೆ ಕಾಲೇಯಾರ್ಜ್ಜನಂ ಸತ್ಯನಿ

ರ್ಭ್ಭರನೇ ಕರ್ಣ್ನ ನುದಾರನೇ ಸುರಕುಜಂ ತಾನೆಂಬ ಸತ್ಕೀರ್ತ್ತ ವಿ
ಸ್ತರಿಸಲ್ಪೆರ್ಮ್ಮವಾದನತುಳಂ ಪೆರ್ಮ್ಮಾಡಿ ಭೂಪೋತ್ತಮ

ಮೇರುಪರ್ವತದಂತೆ ಸ್ಥಿತನಾದವನು, ಭೀಷ್ಮನಂತೆ ಶುಚಿತ್ವವುಳ್ಳವನು, ಧರ್ಮರಾಯನಂತೆ ಧರ್ಮಬೀರುವು, ಪರಾಕ್ರಮದಲ್ಲಿ ಅರ್ಜುನನಂತೆಯೂ, ಸತ್ಯಪಾಲನೆಯಲ್ಲಿ ಕರ್ಣನಂತವನೂ, ಆದ ಸತ್ಕೀರ್ತಿವಂತನು ಆಗಿದ್ದನು ಪರಮಾ‍ರ್ಡಿ ಭೂಪನು.

ಸಿರಿಶಿಷ್ಟೇಷ್ಟಾದಿಗೇಹಾಮರಗಿರಿಚರಿತಂ ವೇದಶಾಸ್ತ್ರೋಕ್ತಿ ಮಾಲಾ
ಭರಿತಂರೂಪಜಗನ್ಮೋಹನಮದನಜಯತ್ಪುಪ್ರತಾಪಂಸ್ವಶೌರ್ಯ್ಯಂ
ಧುರದುರ್ದ್ದನ್ತಾರ್ಯ್ಯವಾರ್ಯ್ಯ[ಂ] ನ್ತನಗೆಸೆದಿರೆ ಚಾಳುಕ್ಯಚಕ್ರೇಶಕಾರು
ಣ್ಯೈರಸ ಕ್ಕಾಧಾರನಾದಂ ಕಲಿ ಸುರಿಗೆಯ ಪೆರ್ಮ್ಮಾಡಿ ಕೀರ್ತ್ತಿಪ್ರಸಂಗಂ ॥

ಸಿರಿತನವನ್ನೇ ಮೈಗೂಡಿಸಿಕೊಂಡವನು, ವೇದಶಾಸ್ತ್ರದಂತೆ ನಡೆದುಕೊಳ್ಳುವವನು, ಜಗನ್ಮೋಹನ ರೂಪವನ್ನು ಪಡೆದುಕೊಂಡಿರುವವನು, ಶೌರ್ಯಸಂಪನ್ನನು, ಯುದ್ಧದಲ್ಲಿ ನಿಪುಣನು, ಚಾಳುಕ್ಯ ಚಕ್ರವರ್ತಿಯ ಕಾರುಣ್ಯವನ್ನು ಪಡೆದವನು, ವೀರನೂ ಆಗಿದ್ದನು ಪೆರ್ಮಾಡಿಯರಸನು.

ಡಂಬಳದ ಕ್ರಿ.ಶ.೧೧೨೪ರ ಮತ್ತೊಂದು ಶಾಸನದಲ್ಲಿ.[೩೮]

ಕಂದ:- ಇದುಮಾಳವನಟ್ಟಿದ ಮಣಿ
ಯಿದು ಚೋಳಿಕನಟ್ಟಿದಶ್ವಮಿನ್ತಿದು ಪಾಂಚಾ
ಳದ ನೃಪನಟ್ಟಿದ ಗಜ ಮೆಂ
ಬುದು ಘೋಷಣೆ ಪೆರ್ಮ್ಮನೃಪನ ರಾಜಾಲಯದೊಳ್॥

ಇದು ಮಾಳವನಟ್ಟಿದ ಮಣಿಯಿದು, ಜೋಳರನ್ನು ಓಡಿಸಿದ ಅಶ್ವವಿದು, ಪಾಂಚಾಳದ ರಾಜನನ್ನು ಸೋಲಿಸಿದ ಗಜ ಎಂಬುದು ಪೆರ್ಮಡಿ ಭೂಪಾಲನಿಗೆ ರಾಜನ ಆಸ್ಥಾನದಲ್ಲಿದ್ದ ಬಿರುದುಗಳು.

ಚಂಪಕಮಾಲವೃತ್ತ :- ಸರಸಿಜಷಂಡದಿಂ ಬಳಿದ ನನ್ದನದಿಂ ನವಂಗಧಶಾಯಿಯಿಂ
ದರಿತರತಿರ್ಪ್ಪ ನಿರ್ಜ್ಜರದಿ ನಾಡುವ ಹಂಸಗಳಿಂ ವಿಳಾಸದಿಂ
ಸುರುಚಿರಮಾಗಿ ಕೇಗುವ ನವಿಲ್ಗಳಿನೋಡುವ ರಾಜಕೇರದಿಂ
ಕರಮೆ ಮನೋಹರಂ ಪೊಜಿ ವೊಳಲು ಪರಿಭಾವಿಸ ತತ್ಪುರೇಂದ್ರದ

ಸರಸದಿಂದ ಬೆಳೆದ ನಂದನದಿಂದ ನವ ಸುಗಂಧದಂತೆ ಇರುವ, ಝುರಿಗಳಲ್ಲಿ ಹಾಡುವ ಹಂಸಗಳು, ವಿಲಾಸದಿಂದ ಕೂಗುವ ನವಿಲುಗಳು, ನೋಡುವ ಗಿಳಿಗಳು ಮನೋಹರವಾಗಿ ಕಾಣುತ್ತವೆ

ಕಂದ:– ಮನುವಂ ಮೆಜೆಯಿಸುವುತ್ತಮ
ಮುನಿನಾಥರಿನಾಭಿಜಾತ್ಯದಿಂ ಕಮಳಜನಂ
ನೆನೆಯಿಸುವ ಧರಾಮರಗಿಂ
ದನವರತಂ ಧರ್ಮ್ಮವೊಳಲದೇಂಸೊಗಯಿಸಿತೋ

ಮನವನ್ನು ಮೆರೆಯಿಸುವ ಉತ್ತಮ ಮುನಿನಾಥನು, ಅಭಿಜಾತದಿಂದ ಕಮಳಜನಂ ನೆನೆಯುವ ಮತ್ತು ನೆನಪಿಸುವ ಧರಯ ಜನರಿಗೆಲ್ಲ ನವರತ್ನದಂತೆ ಧರ್ಮವೊಳಲು ಸೊಗಯಿಸುತ್ತಿತ್ತು.

ಹರಚರಣಕಮಳ ಸೇವನ
ಪಾವಕರ್ಕ್ಕರಂ ಭಾವಕರೀ ಧರೆಯಾಳಿವ
ರೆಂದು ಪದಿನಜೆವರ ಸತಿಮು
ದದಿಂದೆ ಬುಧಜನಂ ಬಣ್ಣಿಸುಗಂ॥

ಹರನ ಚರಣಕಮಲ ಸೇವಕನ ಸೇವಕನಂತೆ, ಧರೆಯಲ್ಲಿ ಪ್ರತಿದಿನ ಸತಿಮುಖದಂತೆ ಎಂದು ಬುಧಜನರಂ ಬಣ್ಣಿಸುತ್ತಿದ್ದಾರೆ.

ವಿನಯದೆ ಕಣಿದಯಗೆ ನಿಕೇ
ತನ ಮಿಷ್ಟವಿಶಿಷ್ಟಕೋಟಿಕಲ್ಪ ಮಹೀಜಂ
ಮನು ಚಾರಿತ್ರಂ ಸಜ್ಜನ
ವಿನುತಂ ರೆಬ್ಬರಸೆನೆದನಪಗತದುರಿತಂ

ಭೂಮಿಯು ವಿನಯಕ್ಕೆ ಗಣಿ, ದಯೆಗೆ ನಿಕೇತನದಂತೆ, ಇಷ್ಟಗಳನ್ನು ಕಲ್ಪಿಸುವ ಜನಗಳು ಚಾರಿತ್ರ ವಿಶಿಷ್ಟ ಸಜ್ಜನರಿಂದ ಶೋಭಿಸುತ್ತಿತ್ತು.

ಆತನ ಕುಳವಧು ಭುವನ
ಖ್ಯಾತ ಸಮಸ್ತವ್ಯಪಾಸ್ತಧನಜನ ಧನ ಸಂ
ಭೂತ ನಿಜಗೋತ್ರಪೂತ ಮ
ಹೀತಳದೊಳ್ ಬಾವಿಕಬ್ಬೆಯೆಂಬಳ್ಪಸರಿಂ॥

ಆತನ ಪತ್ನಿಯಾದ ಬಾವಿಕಬ್ಬೆಯು ಭೂಮಿಯಲ್ಲಿ ಖ್ಯಾತಿಪಡೆದ ಸಮಸ್ತ ಜನರ ಅಭಿಮಾನವನ್ನು ಪಡೆದವಳು, ಒಳ್ಳೆಯ ಗುಣವುಳ್ಳವಳು ಆಗಿದ್ದಳು ಎಂಬುದಾಗಿ ವಿವರಿಸಿದೆ.

ಅವರಿರ್ವ್ವರಿಗಂ ನಂದನ
ನವಿತಥಯಶನಖಿಳಬುಧಜನಸುರತರು ಬಾ

ನ್ಧವಕುಮುದ ಕುಮುದಿನೀಬಾಂ
ಧವ ನಜ್ಜಯನಾಯಕಂ ಸಮಂ ತುದೆಯಿಸಿದ ॥

ಇಂತಹ ರಾಜ-ರಾಣಿಯರಿಗೆ ಅಖಿಲ ಬುಧಜನರ ಬಾಂಧವರ ಅಭಿಮಾನದಂತೆ, ಬಿಳಿನೈದಿಲೆಯಂತೆ ಅಜ್ಜಯನಾಯಕನು ಜನಿಸಿದನು.

ಪರರ್ಗ್ಗುಪಕಾರಂಗೆಯ್ವುದ
ವರಶೀಳಂ ಸತ್ಯವಚನಮ ನಿಲಿಪುದೇ ನಿ
ರ್ಭ್ಭರಿದಿಂ ಬಗೆ ಗಡಿದೇಂ ಸುರು
ಚಿರ ಮಜ್ಜಯನಾಯಕಂ ಮಹಾತ್ಮನೋಜಗದೊಳ್॥

ಪರರಿಗೆ ಉಪಾಕಾರ ಮಾಡುವುದೇ ಶೀಲವೆಂದು ನಂಬಿದವನು, ಸತ್ಯವಾಕ್ಯ ಪಾಲಕನು, ಕಲಿವೀರನೂ, ಹೆದರದವನೂ ಆಗಿದ್ದನು ಅಜ್ಜಯನಾಯಕ.

ತ್ರಿನಯನಪದಪಂಕಜಮಂ
ಕನಸಿನೊಳಂ ಕಣ್ಡು ಕನವನಿಪ್ಪಂ ಭರದಿಂ
ದೆ ನಮಃ ಶಿವಾಯ ಮಂತ್ರ ಮ
ನೆನಲಾರ್ದ್ದೊರೆ ಯಜ್ಜಿಮಯ್ಯನೊಳ್ ಶಿವಭಕ್ತರ್॥

ಶಿವನನ್ನೂ ಕನಸ್ಸಿನಲ್ಲಿ ಕಂಡರೂ ಸಮಃ ಶಿವಾಯ ಮಂತ್ರವನ್ನು ಜಪಿಸುವಂತವನು, ಶಿವಭಕ್ತ ಪರಾಯಣನೂ ಆಗಿದ್ದನು ಅಜ್ಜಿಮಯ್ಯ ನಾಯಕನು.

ಮೀಱದೆ ಮದಮೇಱದೆತಲೆ
ದೋಱದೆ ಸಯ್ತಿರ್ಪ್ಪಡಿರ್ಕ್ಕೆ ವಿದ್ಯಾಬಳಮಂ
ತೋಱಿದೊಡೆ ನೂಸಲ ಕಣ್ಣಂ
ತೋಱನೆನಿರ್ವ್ವಾಣಶಕ್ತಿಪಂಡಿತದೇವಂ

ಮದವು ಮೀರದೆ (ಅಹಂಕಾರವನ್ನು ಪಡದೆ) ತಲೆದೋರಿದ ಪ್ರಾಮಾಣಿಕ, ವಿದ್ಯಾವಂತರ ಹಣೆಯ ಕಣ್ಣಿನಂತೆ ತೋರುತ್ತಿದ್ದಾ ನಿರ್ವ್ವಾಣ ಶಕ್ತಿಪಂಡಿತದೇವನು.

ಮೂಱು ಜಗಮುಂ ನರಡಱು
ನೂಱುಮುಖಂಬೆರಸು ತರ್ಕ್ಕಕರ್ಕ್ಕಶತನಮಂ
ತೋಱಿದೊಡೆ ನೊಸಲಕಣ್ಣಂ
ತೋಱನೆ ನಿರ್ವ್ವಾಣ ಶಕ್ತಿಪಣ್ಡಿತದೇವಂ

ಮೂರು ಜಗಕ್ಕೆ ಮೆಚ್ಚುವಂತೆ, ನೂರು ಮುಖ ಬೆರಗುಗೊಳಿಸುವಂತೆ ಮಾಡುವವನು ಹಣೆಗಣ್ಣಿನವನಂತೆ( ಶಿವನಂತೆ) ತೋರುವ ನಿರ್ವ್ವಾಣ ಶಕ್ತಿ ಪಣ್ಡಿತದೇವನು.

ಚಿಕ್ಕವಡ್ಡಟ್ಟಿಯ ಕ್ರಿ.ಶ.೧೧೨೭ರ ಶಾಸನವು.[೩೯]

ಸುರತರ. . . . . . . . . . . . . .ಸಂಪಗೆಯಿಂಪನೀಯೆ
ಕರವೊಪ್ಪುವಪಾದರಿ ಪಾಣ್ಬನಂತೆ ಕೇದಗೆ ಮುಸುಕುಂದಸೀವ
ನಾರಗಲವ. . . . . . . . . . . . .. ರ್ಜ್ಜರ ಮಾತುಳುಂಗ
ವರನೇಜಿಲು ತಾಳು ತಂಗು ಶ್ರೀತಾಳಿತಮಾಳಮೆಂ ಬಿ
ವಜೊಳೂಪ್ಪುಗು ಮಿಲಿಯನಡನಾಳಿ. . . . . . .ವವು
ನೀಜಿಲು ಚನ್ದನ ಶ್ರೀಗನ್ಧಬರ್ವ್ವರಂ ಕಪ್ಪುರದಿಂ ಚಂನ್ದರು ಬಾಳೆ
ಈಳ ಕವುಂಗೆಂಬವಜೆಂದ ಮಿವನಂ ಸೂಗಯಿಸಿ. . . . . .
ಕೆಜೀಆರಿವೆಯಿಂದೊಪ್ಪುವ ಪೊದೊಂಟದಿಂದ ನಾಲ್ದೆ ಸೆಯಾಳುಸುತ್ತಿದೆ
ಬೆಳಗೆಯ್ಗಳಿ ನೊಪ್ಪಿರ ಗಿಳಿವಿಂಡಿನೂ[ಳು] . . ಸೂಗಯಿಸುಗು.

ದೇವಲೋಕದ ಬಳ್ಳಿಗಳಿಂದ, ಸಂಪಿಗೆ ಮರಗಳಿಂದ, ಕಂಪಿಕೇದಿಗೆ ಗಿಡಗಳಿಂದ, ನೇರಲು ಮರಗಳಿಂದ, ತಾಳೆ, ತೆಂಗು, ಶ್ರೀತಾಳಿ, ಮಾವು, ಚಂದನ, ಶ್ರೀಗಂಧ, ಕರ್ಪ್ಪೂರಚಂನ್ದರು, ಬಾಳೆ, ಅಡಿಕೆಮರಗಳಿಂದ ಶೋಭಿಸುತ್ತಿತ್ತು ಹೂದೋಟ. ನಾಲ್ಕು ದಿಕ್ಕಿನಲ್ಲಿಯೂ ಗಿಳಿವಿಂಡುಗಳಿಂದ ಬೆಳಗಿನ ವೇಳೆ ಶೋಭಿಸುತಿತ್ತು.

ಬಳಸಿ[ದೆದ್ರಿಯ] ದಿಂದಂ ಬಳೆ ದೊದವಿದೆ ನಾನಾವನಬ್ರಾತದಿಂದಂ
ಕಳ ಕೀರವಕಂಠ ದ್ವಾರದಿಂದಂ . . . . ಕ ರಗೀತದಿಂದ ಬೆಡಗಂ
ತಳದಿಕ್ಕುಂ ಭುಮಿಭಾಮಾಮಳಮುಕ ತಿಳಕಂ
ಶ್ರೀ ಕಕ್ಕಭೂಪನ ರಾಜಧಾನಿ ಎನಲಿಂನೇನಣ್ಣೆಪೆಂ ಬಣ್ಣಿಪೆ

ಬಳಸಿನಿಂತ ಬೆಳೆಗಳು ನಾನಾ ವನಗಳಿಂದ, ಮನೋಹರವಾದ ಗಿಳಿಗಳ ಕಂಠದಿಂದ, ಕೋಗಿಲೆಗಳ ಗೀತದಿಂದ, ಬೆಡಗಿನಿಂದ ಭೂಮಿಯು ಶ್ರೀಮುಖತಿಲಕದಂತೆ ಹೊಳೆಯುತ್ತಿತ್ತು ಕಕ್ಕಭೂಪನ ರಾಜದಾನಿಯಾದ ಚಿಕ್ಕವಡ್ಡಟ್ಟಿ.

ಕಂದ:– ಸುತ್ತಿದ ಪರಿಕೋಲಿಂ ದಂ
ತೊಪ್ಪುವ ರಾಜನಡಕಳ ವೈಸಾಳಿಯುಂ ಹಳಿಯು
ವಂ ಕಾವುತಂ ಸತಿವೊರ್ವ್ವ
ಳು . . ತಂಗಿಳಿವಿಂಣ್ಡದೇರಸೊಗಯಿಸಿತೊ ॥

ಅರೆಬಿರಿದ ಹೂ ದುಂಬಿಗಾಗಿ ಕಾಯುವಂತೆ ಸುತ್ತುವರೆದಿರುವ, ಅಲಂಕಾರದಿಂದ ಒಪ್ಪುವ ರಾಜನನ್ನು ವೈಸಳಿಯಿಂದ ಹಳಿಯುತ ಕಾಯುವ ಸತಿಯೋರ್ವ್ವಳು ಗಿಳಿಯಗುಂಪಿನಲ್ಲಿ ಸೊಗಯಿಸುತ್ತಿದ್ದಳು.

ಮತ್ತೇಭವಿಕ್ರೀಡಿತವೃತ್ತ:- ವನಿತಾನೀಕದ ಮುಂನ್ತೆ ಪೊಟ್ಟಳಸಿ ಗೇಣಂ ಕಿರ್ತುತೂರ್ದ್ದಟ್ಟಗೀ
ಜೆನಲೀದಾಡಿ ಕುರುಳ್ಚಿಕಪ್ಪುಳ್ಚಿಪಿಂನ್ತಾಮುನ್ತುಮಂ ನೋಡಿ ಬೊಂ
ಕೆನೆ ಸಿಂಘಧ್ವನಿಮಾಡಿಹಂ ಭಾಸುರಂ ಭರಂಗೆಯೇಂ ಶ್ರೀಕಕ್ಕ ಭೂ
. . . . . ಪಂಗೆ ಬಯಲೆ ಬಪ್ಪರೂಳರೆ ವಿಸ್ವಂಭರಾಚಕ್ರದೊಳು

ಸ್ತ್ರೀಯರ ಗುಂಪಿನಲ್ಲಿ ಮಧುರಧ್ವನಿ ಪ್ರಾರಂಭವಾದ ಸಮಯದಲ್ಲಿ, ಬೊಂಕನೆ ಸಿಂಹ ಧ್ವನಿ ಮಾಡಿದಾಗ, ಭೂಮಿಯ ದೊರೆ ಕಕ್ಕಭೂಪಾಲನು ಬಂದು ನಿಲ್ಲುವನು.

ಬಜಿದೆ ಪಱಪಱಿಸಿ ನೆಜಿಬೆ
ಬ್ಬಱಿಬೆಱತುಜೆ ಅಡಕಣ ಬಾಯಿ ವೋಜೆಮಾಡಿ
ಕಿಜಿದೆ ಮಾಂನ್ದಪನೆ ಸುಭಟ
ಚೂಡಾರತ್ನ ಕಕ್ಕ ಭೂಪಾಳಕನು

ಮತ್ತೇಭವಿಕ್ರೀಡಿತ ವೃತ್ತ:-

ಸಿಡಿಲಂಜೇಜಿಜೆ ಪೊಯ್ವಂಪಸಿದ ಪುಲಿಯನೇರ್ವ್ವಟ್ಟುವಂಸಿಂಹಮಂ ಮಾ
ರ್ಜಡಿಯುತಂ ಶಟನ್ನೀಕಮಂ ಸುತಿಕೀಳ್ವ ವಿಷಧರ ಹಡೆಯಬಾಲಂಬರ ಸಿಳ್ವ ಎ
ನ್ದಡೆ ಲೆಲೆಲೆಮಲೆವರಾಕಕ್ಕ ಭೂಪಂಗಂಜವಂಗಂ

ಸಿಡಿಲನ್ನು ಹೊಯ್ಯುವ, ಹಸಿದ ಹುಲಿಯನ್ನು ಏರುವ, ಸಿಂಹವನ್ನು ಬಡೆಯುವ, ಮೋಸಗಾರನ ಧ್ವನಿಯನ್ನು ಕೀಳುವ, ಹಾವಿನ ಬಾಲವನ್ನು ಹಿಡಿದು ಹೆಡೆಯನ್ನು ಸೀಳುವವನು ಕಕ್ಕಭೂಪನು.

ನೀನು ಭಾರವಿಯುಂ ದಿನೇಶಸುತನುಂ ಸಾಹಿತ್ಯದೊಳು ನೀನು ಖೇಚರ
. . . . ಗಾಣ್ಡೀವಿಯುಂ ನದೀತನಯನುಂ ದೋರ್ವ್ವಿರ್ಯ್ಯದೊಳು ಧೈರ್ಯ್ಯ
ದೊಳು ದಾನಾಂಬುನಿಧಿ

ತೃಟಿತವಾಗಿದೆ.

ಕ್ರಿ.ಶ.೧೧೩೮ರ ಲಕ್ಷ್ಮೇಶ್ವರದ ೩ನೇ ಸೋಮೇಶ್ವರನ ಕಾಲದ ಶಾಸನವು.[೪೦]

ಮದವೆತ್ತಿ ನಡೆವ ರಾಯ
ಗಡಣಮನುದ್ಯತ್ಪ್ರತಾಪತಪನಾತಪದಿಂ

ನಡೆ ಕೊರಗಿಸುವುದ್ಧತಿಕೆಗೆ
ಪಡಿಯಾವೋಂ ವೀರರಾಯ ಸೋಮೇಶ್ವರನೊಳ್

ಮದದಿಂದ ನೆಡೆಯುವ ರಾಜರಿಗೆ ಕಡಗೀಲಿನಂತವನು, ಪ್ರತಾಪವಂತನು, ಆತನನ್ನು ನಂಬಿ ನಡೆದವರಿಗೆ ವರನೀಡುವನು ಸೋಮೇಶ್ವರನು.

ಅನತೋರ್ವ್ವಿಪಾಳರಂ ಮರ್ದ್ದಿಸಿ ವಿಜೆಯ ಭುಜೋತ್ಪಾತತೀಕ್ಷ್ಣಸಿ
ಯಂ ನೆಟ್ಟನೆ ಪಾದಾಕ್ರಾನ್ತ ಭೂಪಾಳರನಪಗತ ಬಾಧಾಕರಮ್ಮಾಡಿ ಕೀರ್ತ್ತ್ಯಂ
ಗನೆಯಂ ದಿಕ್ಕಾಮಿನೀಸಂಗಮದೊಳಿರಿಸಿದೀ ರಾಜಸರ್ವಜ್ಞ ಭೂಪಂ
ತನಗೇಕಚ್ಚತ್ರಮಂ ಮಾಡಿದನೆಳೆಯ ನಿಳಾಪಾಳ ತ್ರೈಲೋಕ್ಯಮಲ್ಲ

ಭೂಮಿಯಲ್ಲಿ ಅನ್ಯಾಯದಿಂದ ನಡೆಯುವ ರಾಜರನ್ನು ಮರ್ದಿಸಿ, ವಿಜಯವನ್ನು ನೆಟ್ಟವನು. ಈತನನ್ನು ನಂಬಿದ ರಾಜರ ಬಾಧೆಗಳನ್ನು ದೂರ ಮಾಡಿ, ಕೀರ್ತಿಯನ್ನು ದಿಕ್ಕು ದಿಕ್ಕುಗಳಿಗೆ ಹಬ್ಬಿಸಿದ ಸರ್ವಜ್ಞ ಭೂಪಾಲ. ಒಬ್ಬ ರಾಜನ ಅಡಿಯಲ್ಲಿ ಈ ಭೂಮಿ ಇರುವಂತೆ ಮಾಡಿದ ತ್ರೈಲೋಕಮಲ್ಲ.

ಜನಮೆಲ್ಲಂ ಪೊಗಳ್ಗುಂ ಕಳಾವಿದಿತ ವಿದ್ಯಾಭ್ಯಾಸನಂ ಕಾಳಿದಾ
ಸನ[ನ]. . .ಹೃತ್ಸಂತ್ರಾಸನಂ ಕಾಳಿದಾಸನನಂಗೀಕ್ರಿತ ಮಂತ್ರ ಶಾಸ್ತ್ರ ಪದಲೀಲಾವಾ
ಸನಂ ಕಾಳಿದಾಸನನಾ ಪಾದಿತಕೀರ್ತಿನರ್ತ್ತಿ . . . . . . . . . . . . .
ದ್ರಾ

ಜನವೆಲ್ಲಾ ಹೊಗಳುತ್ತಾ ಕಲಾವಿದಿತ ವಿದ್ಯಾಭ್ಯಾಸದಿಂದ ಕಾಳೀದಾಸನ ಕೀರ್ತಿಯಂತಿದೆಯೆಂದು ಇದೆ ಮುಂದಿನ ಪದ್ಯ ಹಾಳಾಗಿದೆ.

ಕ್ರಿ.ಶ.೧೧೩೮ರ ಶಾಸದಲ್ಲಿ.[೪೧]

ಚಾಳುಕ್ಯತಿಳಿಕನರಿ ಭೂ
ಪಾಳ ಸಿರೋನ್ಮಣಿ ನಿಫ್ರಿಚರಣಂ ವಿನಯಂ
ಪಾಳಿಸಿ ಸತ್ಯಾಶ್ರಯ ಭೂ
ಪಾಳು ಬಿಟ್ಟುರ್ದ್ದನೆಸೆವ ಸಿರಿಪರ್ವ್ವತದೊಳು

ಚಾಲುಕ್ಯತಿಲಕ, ಭೂಪಾಲಶಿರೋಮಣಿ, ಸತ್ಯಾಶ್ರಯಭೂಪಾಲ, ಸಿರಿಪರ್ವತಗಳಲ್ಲಿ ವಿನಯ ಗುಣಸೋಪನ್ನನಾಗಿ ಶೋಭಿಸುತ್ತಿದ್ದನು ಎದು ವಿವರಿಸಿದೆ. ಉಳಿದ ಮತ್ತೊಂದು ವೃತ್ತ ಬಹಳ ತ್ರುಟಿತವಾಗಿದೆ.

ಕ್ರಿ.ಶ.೧೧೪೭ರ ಲಕ್ಷ್ಮೇಶ್ವರದ ೨ನೇ ಜಗದೇಕಮಲ್ಲನ ಶಾಸನದಲ್ಲಿ.[೪೨]

ಮತ್ತೇಭವಿಕ್ರೀಡಿತವೃತ್ತ :– ಸತತಾಳಮಕೃತ ಭದ್ರಲಕ್ಷಣಯುತಂ ಗೋತ್ರೋದ್ಭವಂ ದಾನಸಂ

ಭೃತನಂಗೀಕೃತಗೋಮಿನೀಪ್ರಿಯಕರಿಣ್ಯಾಲಿಂಗನೋದ್ಯದ್ಯಶೋ
ರ್ಜ್ಜಿತನುದ್ಯಜ್ಜಗದೇಕಮಲ್ಲವಿಜಯಸ್ತಂಭೇರನೆಂದೀ ಮಹೋ
ನ್ನತಿಯಿಂದಾನೆಯ ಕೇಶಿರಾಜ ಪೃತನಾಧೀಶಂಗಿದನ್ವರ್ತ್ಥಕಂ

ಸತತ ಅಲಂಕೃತನು, ಲಕ್ಷಣಯುತನು, ಉತ್ತಮ ಕುಲದಲ್ಲಿ ಜನಿಸಿದವನೂ, ಯಶೋವಂತನು, ಗುಣವಂತ, ಕಲಾವಂತನೆಂದು ಹೊಗಳುವರು ಸಕಳ ಪ್ರಕಾಶ ಭಟ್ಟಾರಕರನ್ನು.

ಮದರದನಿಗಳ ಹಯಾನೀ
ಕದ ಹೇರಿಗಲಾಳಸನ್ಧವಿಗ್ರಹದ ಮಹಾ
ಪದವಿಯ ಸಿರಿಕರಣದ ಸಂ
ಪದದಂತವುರಾಧಿಕಾರಿ ಕೇಶವದೇವಂ

ಕೇಶವದೇವನೆಂಬ ಅಧಿಕಾರಿ ಸಂದಿವಿಗ್ರಹಿಯಾಗಿದ್ದನು. ಈತನು ಮಧುರ ಧ್ವನಿಯನ್ನು ಹೊಂದಿದ್ದನು.

ನಂದಿಯುಮಹಿಭೂಷಣಮುಂ
ಮಂದಾಕಿನಿಯುಂ ಜಟಾಳಿಯುಂ ಗಿರಿಜೆಯುಮ
ರ್ದ್ಧೇಂದುವುಮೊಪ್ಪಿರಲುದಿಯಿಸಿ
ದಂ ದಕ್ಷಿಣಸೋಮನಾಥದೇವಂ ಮುದದಿಂ

ನಂದಿಯನ್ನು ವಾಹನವಾಗಿ, ಗಂಗೆಯನ್ನು ಜಟೆಯಲ್ಲಿ ಹೊಂದಿ, ಗಿರಿಜೆಯನ್ನು ಎಡಭಾಗದಲ್ಲಿ ಅಪ್ಪಿಕೊಂಡು ದಕ್ಷಿಣ ಸೋಮನಾಥನು ಉದಯಿಸಿದನು.

ಕ್ರಿ.ಶ.೧೧೪೮ರ ಹೊಸೂರಿನ ಶಾಸನದಲ್ಲಿ.[೪೩]

ಪ್ರಕಟಿತ ಯಶೋನಟೀನ
ರ್ತ್ತಕವನ ವಧಿಗುಣಗುಣಾನ್ವಿ ತಂಸಕಳ ಕಳಾ
ಧಿಕನೆಂದು ಪೊಗಳೆದವರಾ
ರ್ಸ್ತಕಳಂ ಸಕಳ ಪ್ರಕಾಶ ಭಟಾರಕರಂ.॥

ಯಶೋವಂತನು, ಗುಣವಂತ, ಕಲಾವಂತನೆಂದು ಹೊಗಳುವರು ಸಕಳ ಪ್ರಕಾಶ ಭಟ್ಟಾರಕರನ್ನು.

ಜಳಧಿವೃತಾವನೀವಧುಗೆ ಕುನ್ತಖದಂತೆ ವಿರಾಜಿಸುತ್ತಾಕು
ನ್ತಳ ವಿಷಯಂ ತದುರ್ವ್ವರೆಯೊಳು ವ್ವಳಧರ್ಮ್ಮನಿವಾಸ ಭೂಮಿ
ಬೆಳ್ವೊಲಮತಿಸೇವ್ಯಮಾ ಜನಪದಾನನದಂ ಶಪೊಲೆಂತು ನೋಳ್ಪಡಂನು ಸಲೆ
ಮುಳಾಗುನ್ದ ಹನ್ನೆರಡು ಮೊಪ್ಪುಗುವುತ್ತಮ ಭೂಗಭೋಮಿವೋಲ್

ಸಮುದ್ರ ಆವೃತವಾದ ಈ ಭೂಮಿಯೆಂಬ ವಧುವಿಗೆ ಕುನ್ತಳದಂತೆ ವಿರಾಜಿಸುತ್ತ, ಕುಂತಳವಿಷಯ ಧರ್ಮದ ನೆಲೆವೀಡು ನಿವಾಸವಾಗಿತ್ತು, ಈ ಬೆಳ್ವಲ ಮಹಾಜನಗಳಿಂದ ಮುಳುಗುನ್ದ ಹನ್ನೆರಡು ಶೋಭಿಸುತ್ತಿತ್ತು ಈ ಭೂಮಿಯಲ್ಲಿ.

ರಕ್ಷಿಸಿ ಧರ್ಮಗಳನುಪ
ಲಕ್ಷಿಸಿ ಕುನ್ನಲನಚರಿತಮಂ ರಿಪುಜಯದೊ
ಳಕ್ಷತಿವೆತ್ತಂ ಸೆಲೆ ಸಿ
ನ್ದಕ್ಷತ್ರಿಯನೆಸಿಪ ಬೊಪ್ಪನಹಿತರುಳಪ್ಪಂ॥

ಧರ್ಮಗಳನ್ನು ರಕ್ಷಿಸಿ, ಲಕ್ಷದಿಂದ ಕುಲನೆಲೆಗಳನ್ನು ಹೆಚ್ಚಿಸಿ ನೆಲೆಸಿದ್ದ ಕ್ಷತ್ರಿಯ ಭೂಪನು.

ಚಂಪಕಮಾಲವೃತ್ತ :– ಇರೆ ಮಧುಪಾಳಿ ಪೊಂಜಡೆಯ ಸೌರಭಮಂ ತಣಿವನ್ನವೀಂಟಿ ಬಿ
ತ್ತರ ದೊಳೆ ನನ್ದನಾಳಿಗಳೂಳಂಪುಗಲೆಂಬುವು ಪೂತಚೂತದೊಳ್
ಪರಿವೃತ ಕೋಕಿಳಪ್ರತತಿಶಾಳಿವನಾಳಿಗೆ ಲೀಲೆಯಿಂದೆ ಪಾ
ಯ್ದರಗಿಳಿ ಸಾವಧಾನ. . . . .ಪೊಸವೂರೆಸೆಗುಂ ನಿರನ್ತರಂ

ದುಂಬಿಗಳು ಹೂಡಲ ಸೌರಭವನ್ನು ಹೀರುತ್ತಿದ್ದವು, ಎತ್ತರದಿಂದ ಚಿಗುರಿದ ಚಿಗುರೆಲೆಗಳಿಂದ, ಹೂಗಳಿಂದ, ಆವೃತವಾದ ಕೋಗಿಲೆ ಧ್ವನಿಯಿಂದ, ಹಾರುವ ಗಿಳಿಗಳಿಂದ ಹೊಸವೂರು ಶೋಭಿಸುತಿತ್ತು ನಿರಂತರವಾಗಿ.

ಕಾನ್ತದ ಮೊಗ್ಗರಂ ಹರಿಗೆಯೊಡ್ಡಣವೆತ್ತಿದ ವಾಜಿರಾಜಿಮಾ
ಜಾಂತದೆ ಕಾಳರಕ್ಕೈಸನಿವೆಂ ಜವನಿಂತಿವನೆನ್ದರಾಶಿ ವಿ
ಭ್ರಾಂತಿಯನೆಯ್ದೆ ಕೊಲುವ ಗಲ್ವುದ್ಬಲ್ವದ್ಭುತ ವೀರನೊಳುಂತರಾವಿ
ಕ್ರಾಂತ ಹೊಲ್ಲನೊಳ್ ರಿಪು ಹೃದಿಸ್ಥಳ ಸಲ್ಲ ಮಾಳಾಜಿಮಲ್ಲಿನೊಳ್

ಎನಿಸಿಹೊಲ್ಲಗವುಣ್ಡನ
ಮನಸ್ಸರೋವರಮರಾಳಬಾಳಕ ತಾನಂ
ಬಿನಗಂ ಕುಲವಧುವಾದಳ್ಜ
ನೋನುತ ಚಾವುಣ್ಡೆಗವುಣ್ಡೆ ವನಿತಾರತ್ನಂ॥

ಹೂಲ್ಲನಾವುಣ್ಡನ ಮನಸ್ಸಿನ ಸರೋವರದಲ್ಲಿ ಕುಲವಧುವಾದ ಚಾವುಣ್ಡಿಗನ ಪತ್ನಿ ವನಿತಾರತ್ನದಂತಿದ್ದಳು.

ಉತ್ಪಲಮಾಲಾವೃತ್ತ :– ತಕ್ಕುದೆನೀವರಿಲ್ಲ ಶಿವಯೋಗಿಗೆ ವಿಪ್ರಹನಕ್ಕೆದೇಸಸೆಂ
. . . . ವಾಶ್ರಯಕ್ಕೆ ಶಿವಪೂಜೆಗೆ ಶಿಷ್ಟಜನಕ್ಕೆ ಸರ್ವ್ವಧ
ರ್ಮ್ಮಕ್ಕನುರಾಗದಿನ್ದ ಬೆಸಕಯ್ವ ಮಹೋಂನತಿ . . ಗಳುನೂದಾ
ರ ಕೃತಿ. . . . ಮಕ್ಕಳುನ್ನತಿ ಕೆವೆತ್ತರಿವರ್ಶ್ಶಿವಪಾದರ್. . . .

ಶಿವಯೋಗಿಗೆ ತಕ್ಕುದ ನೀಡುವವರೆಲ್ಲರು, ವಿಪ್ರಜನಕ್ಕೆ, ಆಶ್ರಮಕ್ಕೆ, ಶಿವಪೂಜೆಗೆ, ಸರ್ವಧರ್ಮಕ್ಕೆ ಅನುರಾಗದಿಂದ ಬೆಸಸುವವರು ಎಂದಿದೆ. ಈ ಪದ್ಯ ಬಹಳ ತೃಟಿತವಾಗಿದೆ.

ಕಂದ:– ಧರೆ ಪೊಗಳಲಾ ಶಿವಧರ್ಮ್ಮದ
ಪಾರ ವರಿಯೊಳೆ ಪುಣ್ಯ ಬೀಜಮಂ ಬಿತ್ತಿ ನಿರಂ
ತರ ಮನೆ ಬೆಳವಿ ಬೆಳಸಿರಿ
ಕರವೆಸೆದೆತ್ತೇಳು ನೂರ್ವ್ವರುಂ ಕೃತಕೃತ್ಯರ್॥

ಭೂಮಿಯಲ್ಲಿ ಹೊಗಳಲು ಶಿವಧರ್ಮದ ಪಾಠವನ್ನು ಪುಣ್ಯಬೀಜವನ್ನು ಬಿತ್ತಿ, ನಿರಂತರ ಬೆಳೆಯುವಂತೆ ಮಾಡಿದರು ಏಳುನೂರ್ವರು.

ಕ್ಷಮೆಯಂ ಕೂರಸಿ. . ದಾ
ರಮೆಯ. . . ಮಾಡಿ ಕಾರುಣ್ಯ ಸುಧಾ
. .ಮೆಯಿನೆಜಗಿಸಿದ ನತ್ಯು
ತ್ತಮನೀ ಗಂಗೇಶ್ವರಾರ್ಯ್ಯನುರ್ವ್ವೀವಿನುತಂ॥

ಕ್ಷಮೆಯೆ ಮೈವೆತ್ತಂತೆ ಕಾರುಣ್ಯ ಸುಧಾಮಯೆನಿಸಿದ್ದನು ಅತ್ಯುತ್ತಮನು ಗಂಗೇಶ್ವರಾ ಆರ್ಯ್ಯನು.

ಬೇ(ಡವಂ) ತಾಪಸನನ್ದಕ್ಕರಿಗನಾಲೇಖ್ಯಂ ನಟಂಗಾಯಕಂ
ನುಡಿಕಾಜಿ ಕವಿ . . . . . .ಪೌರಾಣಿಕ
ಪಣ್ಡಿತಯೆಂದಿಂತಿವರ್ಗ್ಗನ್ನದಾನ ದೂದವಿ ಗಂಗೇಶ್ವರಾರ್ಯ್ಯ
. . . ಜಸೆಂಬಡೆದೆಂಪಾಶುಪತ ಪ್ರಸಿದ್ಧ ತಪಮೂಲಸ್ಥಾನ ಯೋಗೀಶ್ವರಂ

ತಾಪಸನದ್ದಾಕ್ಕರಿ ನಟ, ಗಾಯಕ, ನುಡಿಕಾರ, ಕವಿ, ಪೌರಾಣಿಕ ಪಣ್ಡಿತ, ಅನ್ನದಾನವಂತ, ಗಂಗೇಶ್ವರಾರ್ಯ ಶೋಭಿಸಿದ ಪಾಶೂಪತ ಪ್ರಸಿದ್ಧ ತಪಮೂಲ ಸ್ಥಾನಯೋಗಿಶ್ವರ.

ಮತ್ತೇಭವಿಕ್ರೀಡಿತವೃತ್ತ:– ಬಿಡದಾರಾಧಿಸಿ ವಿತ್ತಮಂ ವಿವಿಧ ಮೋಹವ್ಯೂಹದಿಂದಿರ್ಪ್ಪತ
ಮ್ಮಡಿಯ ಧರ್ಮ್ಮದ ಪೆರ್ಮ್ಮನೂರ್ಮ್ಮಡಿಯನಲು ಕೈಳಾಸಕುತ್ಕೀಳದೊಳ್
ಪಡಿಯಂಬೊಂದು ವಿಳಾಸಮಂ ತಳೆಯ ಮೂಲಸ್ಥಾನ ಮುತ್ತುಂಗಮಂ
ಧರೆಯಲು ಮಾಡಿಸಿದಂ ಶಿಲಾಮಯಮನೀಗಂಗೇಶಯೋಗೀಶ್ವರಂ॥

ಬಿಡದೆ ಆರಾಧಿಸಿ, ಉತ್ತಮನು, ವಿವಿಧ ಮೋಹವ್ಯೂಹದಿಂದ ಅರ್ಪಿತನು, ಧರ್ಮದ ಪೆರ್ಮ್ಮನೂರ್ಮ್ಮಡಿಯೆನಲು ಕೈಳಾಸದಲ್ಲಿರುವಂತೆ ವಿಲಾಸದಿಂದ, ಮೂಲಸ್ಥಾನ ಮುತ್ತುಂಗದಂತೆ, ಧರೆಯಲ್ಲಿ ಮಾಡಿಸಿದಂ ಶಿಲಾಮಯ ಮುನೀಗಂಗೇಶ ಯೋಗೀಶ್ವರ.

ಸಾದದ ಪೆರ್ಗ್ಗಡೆ ಧರ್ಮ್ಮವಿ
ನೋದಂದೇವರ್ಗ್ಗೆನಡೆವ ಗಾಣದ ತಱೆಯಂ
ಸಾದರದೊಂದೀಗಳೀದೆಱೆ
ಯಾದುದನಿತ್ತಂ ಶಿವಂಗೆ ಮಾಹಾದೇವಣ್ಣಂ

ಸಾದದ ಪೆರ್ಗ್ಗಡೆಯವರು ಧರ್ಮವಿನೋದದಿಂದ ದೇವರಿಗೆ, ನಡೆವಗಾಣದ ತೆರಿಗೆಯನ್ನು, ಸಾದರದಿಂದ ಗಳಿಕೆತೆರಿಗೆಯನ್ನು ಶಿವನಿಗೆ ಅರ್ಪಿಸಿದನು ಮಾಹಾದೇವಣ್ಣನು.

ಜವನೊಳು ತಾಗುವನ ಜನಜಲಿಪಕಾಳ ವ್ಯಾಧನಂ ಪಾಯ್ವ ಭೈ
ರವನಂ ಭೈಕರಿಪಷ್ವದಿಗ್ಗಜ ದೊಳಾಂಪುದ್ರೇಕದಿಂ ಸಿಂಗಮಂತಿ
ವಿವೇಳುಂ ಜಳರಾಶಿಯಂಕದುಪಿ ನಂದಾ ಪೋಶನಂಗೊಳು ರ್ವಂ
ದವರಾರ್ಗ್ಗಣ್ಣೆನ ತೂಣ್ಣರಪ್ಪುಗುರುಮಾನೂರ್ವ್ವರ್ಜ್ಜಗದ್ಭುಂಭುಕರ್

ಯಮನಲ್ಲಿ ಹೋರಾಡುವನು, ಜನಜಲಿಪಕಾಳನೆಂಬ ಬೇಡನೂಡನೆ ಹೊರಾಡುವ ್ಯರವನು, ಕರಿಯನ್ನು ಉದ್ರೇಕಿಸಿ ಅದರ ಮದವನ್ನು ಅಡಗಿಸುವವನು, ಜಲರಾಶಿಯನ್ನು ಕದಡುವವನು ಆಗಿದ್ದನು.

ಚಂಪಕಮಾಲಾವೃತ್ತ:- ಸೆಣಸುವವಂಗೆ ಕೊಂಡಿಡುವವಂಗುರದೆಂಗೆ ಪೆರಂಗೆಸಂಗರಾಂ
ಗಣದೂಳೆ ತೋರುವರ್ಣೊಸಲಕ. . .ಸುಳಕುದು. . .ಕಟ್ಟಿಸಂ
ದಣಿಸಿದ ರುಂಡಮಾಲೆಗಳಿನಟ್ಟುತ ಭೈರವರೂಪನಿಂತು ಬಲು
ಕಣಿಗಳ ದಾರೂಗೆಯ ಪತಾಕೆಯಂ ಬಿಲ್ಲಮಹಾಭಟರ್ಕ್ಕಳೂಳ್

ಜ(ನ)ಪೆರ್ಗ್ಗಡೆವಿಭುದೋವರ
ಸನದೇವರ್ಗ್ಗೆನಿತ್ಯ ಪೂಜೆಗೆ ಕೊಟ್ಟ
ಜನರಗಯ್ಯಾಕ್ಕಲ ತೆಱೆ
ಯಂನಿರನ್ತರನಡೆಗಿದಿಪ್ಪ ಶಿವಪದಭಕ್ತಂ

ಪೆರ್ಗ್ಗಡೆ ದೇವರಸರ್ಗ್ಗೆ ನಿತ್ಯಪೂಜೆಗೆ ಕೊಟ್ಟ ಜನರ ಒಕ್ಕಲುತೆರೆಯಂತೆ ನಿರನ್ತರ ನಡೆದಿತ್ತು ಶಿವಭಕ್ತಿ.

ಅಣುವಂ ನಿಂಬಂ ಮಾರ

ಗುಣಯುತಮಳಗೆನಿಸಿ ಬೆನ್ನಮಬೂವಾಗ

ಗ್ರಣಿಗಳ ಮೂಲಸ್ಥಾನ

ತ್ರಿಣೇತ್ರಭವನಂನಿರನ್ತರಂ ಬೆಳಗುವಿನಂ

ಸೂಕ್ಷ್ಮ ಗುಣಯುತನೆನಿಸಿ ಬೆನ್ನಮಬೂವಾಗಗ್ರಣಿಗಳು ಮೂಲಸ್ಥಾನ ತ್ರಿಣೇತ್ರ ಭವನದಲ್ಲಿ ನಿರನ್ತರ ಬೆಳಗುವಂತೆ ಮಾಡಿದನು.

ಕವಿಲೆಯ ಕೋಡುಂ ಕೂಳಗುಮ

ನವಯವದೆ ಸುವರ್ಣ್ನದಿಂದೆ ಕಟ್ಟಿಸಿ ವಿಪ್ರ

ಪ್ರವರರ್ಗ್ಗೆ ಕೊಟ್ಟ ಫಳವೀ

ಶಿವ ಧರ್ಮೋದ್ಧರಣರೆನಿಪ ಪುಣ್ಯಜನಂಗಳ್

ಕವಿಲೆಯ ಕೋಡುರಿ ಕೂಳಗುವ ನವಯವದೆ ಸುವರ್ಣದಿಂದ ಕಟ್ಟಿಸಿ, ಬ್ರಾಹ್ಮಣರಿಗೆ ಕೂಟ್ಟಫಲ ಶಿವಧರ್ಮವನ್ನು ಉದ್ಧರಣರೆನಿಪ ಪುಣ್ಯ ಜನಂಗಳು.

ಚಂಪಕಮಾಲಾವೃತ್ತ:- ಸುರಗಜದಂತೆ ದಾನಿ ಸುರರಾಜತನೂಭವನನ್ತೆ ಶೌರ್ಯ್ಯನು

ದ್ಧುರ ಸುರರಾಜನಂತೆ ವಿಬ್ಧಾಧ್ರಯನುದ್ಗಸುರಾದ್ರಿಯಂತಸು

ಸ್ಥಿರನಸುರಾರಿಯಂತ ಲಕ್ಷ್ಮೀಧರನೆಂದು ಸಮನ್ತುಕೂರ್ತ್ತುಬಿ

ತ್ತರ ದೂಳೆ ಬಣ್ಣಿಕುಂ ವಿಬ್ಧಮಂಡಳಿಪೆರ್ಗ್ಗಡೆ ಕಲ್ಲಮಯ್ಯನಂ॥

ಸುರಗಜದಂತೆ ದಾನಿಸುರರಾಜತನೂಭವನನ್ತೆ, ಶೌರ್ಯನು ವಿಬ್ಧಾಶ್ರಯನು, ಸುರಾದ್ರಿಯಂತೆ ಸುಸ್ಥಿರನು, ಅಸುರಾರಿಯಂತೆ ಲಕ್ಷ್ಮೀಧರನೆಂದು ಸಮನ್ತು ಕೂರ್ತ್ತು ಬಿತ್ತರದೊಳೆ ಬಣ್ಣಿಕುಂ ಕಲ್ಲಮಯ್ಯನನ್ನು.

ಕ್ರಿ.ಶ.೧೧೫೩ರ ಕದಂಬ ೩ನೇ ತೈಲನ ಲಕ್ಷ್ಮೇಶ್ವರದ ಶಾಸನವು.[೪೪]

ನರೆಯಂಗಲ್ ನೆಲೆವೀಡೆನೆ

ಪರಿಗ್ರಹಂ ಪ್ರಜೆಗಳಾಪ್ತವರ್ಗ್ಗಂ ಪಳೆಯ

ರ್ಪಿರಿಯಶ್ರೀಕರಣದವ

ರ್ವ್ವರಮಂತ್ರಿಗಳೆಂದು ಪೊರೆಯಲುದ್ಯತನಾದಂ

ಇದು ಕದಂಬದೊರೆ ಮೂರನೇ ತೈಲನ ಶಾಸನವಾಗಿದ್ದು, ಇವನು ಹಾನಗಲ್ಲಿನಲ್ಲಿ ಮಹಾಮಂಡಳೇಶ್ವರನಾಗಿದ್ದನು. ಪುಲಿಗೆರೆಯ ದಕ್ಷಿಣ ಸೋಮನಾಥದೇವರ ಸ್ಥಾನಾಚಾರ್ಯನು ಅಲ್ಲಿಗೆ ಹೋಗಿ, ದೇವರ ಪುಷ್ಪ, ಅಕ್ಷತಾಪ್ರಸಾದವನ್ನು ನೀಡಿ ಹರಸಿದನು. ಆಗ ತೈಲಪನು ಕಲ್ಲವಣವೆಂಬ

ಗ್ರಾಮವನ್ನು ಸೋಮನಾಥನಿಗೆ ದತ್ತಿಯಾಗಿ ಧಾರೆಯೆರೆದು ಕೊಟ್ಟನು. ಕದಂಬ ಕಂಠೀರವ ಮಾವುಲಿತೈಲ (೩ನೇ) ಸೋಮನಾಥದೇವನ ದರ್ಶನವನ್ನು ಕೈಗೊಂಡಿದ್ದನ್ನು ತಿಳಿಸುತ್ತದೆ. ಇವನು ೩ನೇ ತೈಲನ ಮೊಮ್ಮಗ. ಇವನು ನರೇಗಲ್ಲ ಪ್ರದೇಶದಲ್ಲಿ ಪರಿಗ್ರಹಪೂರ್ವಕವಾಗಿ ಪ್ರಜೆಗಳಿಗೆ ಆಪ್ತನಾಗಿ ಇದ್ದ ಹಿರಿಯ ಶ್ರೀಕರಣದ ಮಂತ್ರಿಯಾಗಿದ್ದನು.

ಸನ್ತಾನಸ್ಥಂ ನೃಪಪದ
ಮನ್ತಳೆದುಂ ಧರ್ಮ್ಮತತ್ಪರಂ ತೈಲನೃಪಂ
ಮನ್ತಣವೇನೊಪರತ್ರಾ
ನನ್ತಸುಖಕ್ಕೆಳಸಿ ಪುಣ್ಯಭಾಜನನಾದಂ

ಈತನು ರಾಜನ ಮನಸ್ಸನ್ನು ಅರಿತು, ಧರ್ಮತತ್ಪರನಾಗಿ, ತೈಲನೃಪನ ಸುಖಕ್ಕೆ ಭಾಜನನಾಗಿ ಪುಣ್ಯವಂತನಾಗಿದ್ದಾನೆ.

ಅಸಿಧಾರಾವ್ರತಮಂ ಸಾ
ಧಿಸಿ ಜಯವಧು ವಾಣಿ ಬಾಣಮುಖಮಂಸಲೆ ಸಾ
ಧಿಸಿ ಬಂದು ಭುಜದೊಳಾಸ್ಯದೊ
ಳೆಸೆದಿರ್ಪ್ಪಳ್ ವೀರಪಾಣ್ಡ್ಯಭೂಪಾಳಕನ

ಈತನು ಸೋಮನಾಥದೇವದರ್ಶನ ವ್ರತಪ್ರಭಾವದಿಂದ ಜಯವಧು ತಾನೇತಾನಾಗಿ ವೀರಪಾಣ್ಡ್ಯಭೂಪಾಳಕನ ಭುಜದಲ್ಲಿ ಬಂದು ನೆಲೆಸಿದಳು.

ಭೂವುನುತಂ ರೂವಾರಕ
ಳಾವಿದ ಜಿನ್ನೋಜನಗ್ರಪುತ್ರಂ ಚಾವಂ
ಕೇವಳಮೆ ಸವಣ್ಬಲ್ಲರ
ದೇವಂ ರಾಜೋಜನಿವರ್ಗ್ಗಳೆಸೆದರ್ದ್ಧರೆಯೊಳ್ (ರಾಜೋಜನ ಕಣ್ಡರಣೆ)

ಇದನ್ನು ಹೆಸರಾಂತ ರುವಾರಿಯಾದ ಜಿನ್ನೋಜನ ಹಿರಿಯ ಮಗ ಚಾವಂ ಜೊತೆಗೆ ರಾಜೋಜನು ಕಂಡರಿಸಿದನು ಎಂದು ರೂವಾರಿ ಮತ್ತು ಕಂಡರಣೆಕಾರನನ್ನು ತಿಳಿಸುತ್ತದೆ.

ಕ್ರಿ.ಶ.೧೧೫೫ರ ಹೊಸೂರು ಶಾಸನದಲ್ಲಿ[೪೫]

ಅಂಗಜಮದಮದನನು ಮಾ
ಸಂಗಮ ವಿಭುಧಾಶ್ರಯ ವೃಷಧ್ವಜ ನೆನೆ ಲೋ
ಕಂ ಗಂಗರಾಶಿ ಮುನಿಪಂ
ಗಂಗಾಧರನಂತಿರಸದನೀ ವಸುಮತಿಯೊಳ್

ಅಂಗಜಮದನನು, ಮಾಸಂಗನು, ವಿಭುಧಾಶ್ರಯನು, ವೃಷಭಧ್ವಜನು ಆದ ಗಂಗರಾಶಿಮುನಿಯು ಗಂಗಾಧರನಂತೆ ಈ ಭೂಮಿಯಲ್ಲಿ ಶೋಭಿಸುತ್ತಿದ್ದನು ಎನ್ನುತ್ತದೆ.

ದಯಿತಂವಿನಯವೇಜಿತೊಲ್ಪುದಳವೇಜೆಲ್ತೊಪ್ಪುನೀರೇಜಿತ
ಕ್ಷಯ ಪುಣ್ಯಂ ಪೊರೆಯೇಜಿತು. . . ..ಕರಂ ಬಿಣ್ಪೇಜಿತತ್ಯುಜ್ವಲೋ
ದ್ಗಯ ಶಂಲೀಲೆಯಿನೆಯ್ದಿದಿಗ್ಗಜಮನೇಂತ್ತಂದಡಿಂತೂಪ್ಪರೂ
ಳುಯಥಾರ್ಥನೆನೆಗಂಗರಾಶಿಮುನಿಯಂ ಗಾಂಭೀರ್ಯ್ಯ ವಾರಾಶಿಯಂ

ವಿನಯತನದಿಂದ, ತೋಳ್ಬಲದಿಂದ ಪುಣ್ಯರಾಶಿಯನ್ನು ಪಡೆದು ಉಜ್ವಲನಾಗಿ ಲೀಲೆಯಿಂದ ಇರುವ ಮುನಿಯ ಕೀರ್ತಿಯು ದಶದಿಕ್ಕುಗಳಿಗೂ ಹಬ್ಬಿತ್ತು ಎಂದು ಹೇಳುತ್ತದೆ.

ಇದೇ ಹೊಸೂರಿನ ಮತ್ತೊಂದು ಶಾಸನದಲ್ಲಿ

ಆತನ ಕುಲವಧು ಹಿಮವ
ಜ್ಜಾತೆಗೆ ಪೆಂಪಿಂ ಸಮಸತೀತ್ವದೊಳವನಿ
ಜಾತಗೆ ಸರಿಯನೆ ನೆಗಳ್ದಿಳಿ
ಳಾತಳ ಸಂಸ್ತುತ್ಯ ಭೋಗ್ಯಬಾಗೀಗವುಂಡಿ. ॥

ಭೋಗ್ಯಬಾಗೀಗವುಂಡನ ಕುಲವಧು ಹಿಮವಜ್ಜಾತೆ ಪೇಪಿನಿಂದ ಸಮಸತೀತ್ವದಲ್ಲಿ ಈ ಭೂಮಿಗೆ ಸಮನಾಗಿದ್ದಳು ಎಂದು ವರ್ಣಿಸುತ್ತದೆ.

ಬಗೆಯೇನೀವಳವಂ ವಿಚಾರಿಸುವೆ ನಾನಂಬರ್ಥಿ ಕಯ್ಯಾಂ ತುನೋ
ಡುಗೆ ಬಲುಪಂ ಪರಿಕೆಪ್ಪೆನಮ್ಬುಬಳವದ್ವೀರಾರಿ ಮಾಜಾನ್ತು ನೋ
ಡುಗೆ ತೋರ್ಕ್ಕುಂ ಅಲ್ಲಿಯಾರ್ಬ್ಬನಂತಕನ ಕೂರ್ಪ್ಪಂಬೇಡವೆಂದೀಜಗಂ
ಪೊಗಳ್ದುಗಿಹೊಲ್ಲಿ ಗವುಣ್ಡನೂಳ್ಸಮನಿಸಿರ್ದ್ದೌದಾರ್ಯ್ಯ ಶೌರ್ಯ್ಯಂಗಳಂ

ಈ ಬಗೆಯಿಂದ ನೀವಳವಂ ವಿಚಾರಿಸಿ ನಾನಮಬುರ್ಥಿ

ಕ್ರಿ.ಶ.೧೧೮೭ರ ಲಕ್ಕುಂಡಿಯಲ್ಲಿಯ ಯಾದವ ದೊರೆ ಸಂಕಮನ ಶಾಸನದಲ್ಲಿ.[೪೬]

ನರಮಾಂಸಾಶನನೆನಿಸಿದ
ನರ. . . . ಕರಣದೊಳ್ಮರಣಮನಾ
ಹರಸುತನೆಯ್ದಿಸಿ ಕಾಳಂ
ಜರದೊಳ್ತದ್ರಾಜ್ಯ ಭರಮ ನಿಳ್ಕುಳಿಗೊಣ್ಡು

ನರಮಾಂಸಾಶನೆನಿಸಿದ ಕರಣದೊಳ್ಮರಣ, ಮನಾಗರಸುತನೆನ್ದೆನಿಸಿ ಕಾಳಂಜರದೊಳ್ತದ್ರಾಜ್ಯ ಭರಮ ನಿಳ್ಕುಳಿಗೊಣ್ಡು ಇದ್ದನು.

ನಿಜವೀರವಿತರಣದೆ ಭೂ
ಭುಜರೊಳ್ಸಲೆ ಕನ್ನಮಂ. . . .
ಬ್ರಜನಧಿಪತಿಯಾದೆಂವರ
ವಿಜಯಶ್ರೀಗಂ ವಿನೂತಕೀರ್ತಿಶ್ರೀಗಂ

ನಿಜ ವೀರವಿತರಣದೆ ಭೂಭಜ ಕನ್ನಮಂ ಅಧಿಪತಿಯಾಗಿ ವರವಿಜಯಶ್ರೀಗಂ ವಿನೂತನ ಕೀರ್ತಿಶ್ರೀಗೆ ಕೈಹಿಡಿದನು.

ಸಜ್ಜನ ಸೇವ್ಯಪ್ಪುಟ್ಟಿದ
ರುಜ್ಜೀವಿತಸಕಳರಾಜ್ಯವಿದ್ಯರ್ತ್ತನಯ
ಬ್ಬಿಜ್ಜಲರಾಜಲನಂಬ. . . .
. . . . . ಯಶಗೇಪುಟ್ಟುವವೋಲ್

ಸಜ್ಜನಸೇವ್ಯನಾಗಿ, ಜೀವಿತ ಸಕಳರಾಜ್ಯಕ್ಕೆ ತನಯನು, ಬಿಜ್ಜಲರಾಜನೆಂಬ ಯಶಸ್ವಿಗೆ ಹುಟ್ಟುವಂತೆ.

ಪುಸಿಯಲು ವೀರಭೋಜ್ಯಾ
ವಸುಂಧರೆಯೆಂಬ ವಾಕ್ಯಮೆನೆ ಧರೆಯಂಸಾ
ದಿಸಿದಂ ತೆಂಕಬ್ಧಿಯ ಬಡ
ಗ ಸೀಮೆ ವಿಂಧ್ಯಾದ್ರಿಯೆನಿಸಿ ಬಿಜ್ಜಲ ದೇವಂ

ಹುಸಿಯಲು ವೀರಜೋಜ್ಞಾ ವಸುಂಧರಾಯೆಂಬ ವಾಕ್ಯವೆ ಧರೆಯನ್ನು ಸಾಧಿಸಿದ ದಕ್ಷಿಣದ ಉತ್ತರದ ವಿಂದ್ಯಾದ್ರಿಯವರೆಗೆ ಬಿಜ್ಜಳರಾಜನು ರಾಜ್ಯವಿಸ್ತರಿಸಿದನು.

ರಾಯಮುರಾರಿ ಭುಜ . . . .
. . . . ವಿತರಣ ವಿವೇಕ ನಿಧಿಗಳ ಭುರಿಯಾ
ಮ್ನಾಯ ವಿಹಾಯೋವಳವಯಾ
ತ್ರೇಯಂ ಶ್ರೀಸೋವಿದೇವ ಚಕ್ರಾದೀಶಂ

ರಾಯಮುರಾರಿ ಎಂದು ಮುಂದೆ ತ್ರುಟಿತವಾಗಿದೆ. ವಿವೇಕನಿಧಿ ಶ್ರೀಸೋವಿದೇವ ಎಂದು ಬಣ್ಣಿಸಿದೆ.

ವಿಳಸತ್ಕುನ್ತಳ ಧಾತ್ರಿ
ಲಲನೆಗೆ ತಾಂ ಕುನ್ತಳ ಪ್ರದೇಶಮೆನಲ್ಬೆ
ಳ್ವೊಲದೇಶಮೆಸವುದದಜೊಳು

. . . . ತ್ತ ಲೊಕ್ಕಿಗುಣ್ಡಿಗ್ರಾಮ

ಕುಂತಳ ಭೂಮಿಗೆ ಲಲನೆಗೆ ಕುಂತಳ ಪ್ರದೇಶದಲ್ಲಿ ಬೆಳ್ವೊಲದೇಶ ಶೋಭಿಸುತ್ತಿತ್ತು.

ಭುವನ. . . . . . . . ಯವ್ವೆ
ಶ್ಯವಂಶದೊಳ್ಪೆರ್ಮ್ಮವೆತ್ತ ನಾಗರ ಕುಲದೊಳ್
ವ್ಯವಹಾರಿ ಜನಾಗ್ರಣಿಯು
ದ್ಭವಿಸಿ ಸಮಸ್ತೈಚಿಸೆಟ್ಟಿ ಜಸಮನ್ತಳೆದಂ

ಭೂಮಿಯಲ್ಲಿ ವೈಶ್ಯವಂಶದಲ್ಲಿ ಪ್ರಸಿದ್ಧಿ ಪಡೆದ ನಾಗರಕುಲದಲ್ಲಿ ವ್ಯವಹಾರಿಯಾದ ಜನಾಗ್ರಣಿಯು ಉದ್ಭವಿಸಿದನು ಸಮಸ್ತಸೈಚಿಸೆಟ್ಟಿ ಉದಯಿಸಿದ.

ಮಾಳೆಯಗಿರಿ . . . .ಶ್ರೀ
ಲೀಳೆಯಿನಾನ್ತಿರ್ದ್ದರತ್ನ ಮಾಳೆಯಚಲ್ವಂ
ಪಾಳಿಸಿದುದಲ್ಲಿವನ ದಿ
ಕ್ಪಾಳೆಯಮಂ ತರಳಮಣಿಯನ . . . . ವೇಂ

ಮಾಳೆಯಗಿರಿ ಶ್ರೀಲೀಲೆಯಂತ ರತ್ನಮಾಲೆಯ ಚಲ್ವಂ ಪಾಳಿಸಿದುದ ಅಲ್ಲಿ ತ್ರುಟಿತ ಪದ್ಯವಾಗಿರುವದರಿಂದ ಇದರ ಭಾವಾರ್ಥ ಪೂರ್ಣವಾಗುವುದಿಲ್ಲ.

ಪಾಷಾಣರುಚಿರ ಕರ್ಮ್ಮ ವಿ
ಶೇಷವಭಿನವ ಪ್ರಸನ್ನ ಕೇಶವಭವನಂ
ದೋಷಾಪಹವೆಂದೆಂದುವ
ಶೇಷಜನಂನಗಳೆ ಪೊಗಳ್ವಿನಂ. . . .

ಪಾಷಾಣರುಚಿರ ಕರ್ಮ ವಿಶೇಷಭಿನವಪ್ರಸನ್ನರಾದ ಕೇಶವನನ್ನು ದೋಷಾವಹವೆಂದು ಜನರೇ ಹೊಗಳುವರು.

ದಿವಿಜಹಡತ್ತಿತ್ಕಿರೀಡ ಮಣಿರೋಚಿವಿರಾಜಿತ ಪಾದಪಂಕಜಂ
ಭುವನ ಜನಸ್ತುತಂ ನಿಖಿಳದಾನವ ಭೂಧರವದ್ರಿನಿಂದಿರಾ
ಧವನನಘಂ ಸರೋಜನಿಭಲೋಚನನುತ್ಸಪ್ರಸನ್ನ ಕೇ
ಶವ ನೂಲವಿಂದ ರಕ್ಷಿಸುಗೆಸೆವಿನ ಯಾಂಬುಧಿಯೈಚಿಸೆಟ್ಟಿಯ

ಬ್ರಾಹ್ಮಣ ಕುಲದ ಕಿರೀಟದಂತೆ ಮಣಿರೋಚಿವಿರಾಜಿತ ಪಾದಪಂಕಜ ಎಂದು ಭುವನ ಸ್ತುತ್ಯನು, ಅಖಿಲದಾನವಂತನು, ಬುಧರನ್ನು ಆರೋಗಿಸಿ, ಭಲೋಚನನುತ್ಸಪ್ರಸನ್ನನು, ಕೇಶವನೊಲವಿಂದ ರಕ್ಷಿಸುವನು ಐಚ್ಚಿಸೆಟ್ಟಿಯು ಎಂದು ಹೇಳುತ್ತದೆ.

ಸಂಕಮನ ಕಾಲದ ಲಕ್ಷ್ಮೇಶ್ವರದ ಶಾಸನದಲ್ಲಿ.[೪೭]

ಅಮಮ ಪರಾಕ್ರಮ ನಿಧಿಭಿ
ಲ್ಲಮಭೂಪತಿಯರರೆ ತತ್ಸುತಂಜಯಿತುಗಿ ಲೋ
ಕಮನೆಱಗಿಸಿದಂ ಬಾಪ್ಪು
ತ್ತಮ ನಾತನ ಸೂನು ಸಿಂಹಣಂ ಪೆಸರ್ವ್ವಡೆದಂ

ಅಮಮ ಎಂತಹ ಪರಾಕ್ರಮಿ ಭಿಲ್ಲಮನು, ಅವನ ಮಗ ಭೂಪತಿ ಜಯತುಗಿ ಲೋಕಮನೆರಗಿಸಿದ ಉತ್ತಮನು, ಆತನ ಸೂನು ಸಿಂಹಣನು ಸೆವುಣ ವಂಶವನ್ನು ಈ ಪದ್ಯ ತಿಳಿಸುತ್ತದೆ.

ಚಾಗದ ಭೋಗದ ರಾಗದ
ಸಾಗರವೆನಿಸಿರ್ದ್ದ ಪೆಂಪು ಪೊಂಪುಳಿ ತನಗೆಂ
ಬೀಗುಣದಿನಾರ್ಯ್ಯ ರೇವಂ
ಶ್ರೀಗಧಿಪತಿ ರೂಡಿದನೂರ್ಜ್ಜಿತತೇಜಂ

ತ್ಯಾಗದ, ಭೋಗದ, ರಾಗದ, ಸಾಗರವೆನಿಸಿರ್ದ್ದ ಕಂಪು ಆರ್ಯಂ ರೇವಂ ಶ್ರೀಗಧಿಪತಿಯಾಗಿದ್ದನು ರೂಡಿವಡೆದನೂರ್ಜ್ಜಿತನು.

ಜಳನಿಧಿ ಪರಿವೃತಧರಣೀ
ವಳಯವಧೂ ಕಾಂತಕುಂತಳಂ ರೂಢಿಯ ಕುಂ
ತಳ ವಿಷಯಮದಜೊಳೆಸುವುದು
ಸಲೆ ದಕ್ಷಿಣವಾರಣಾಶಿ ಪುರಿಕರನಗರಂ

ಸಾಗರ ಆವೃತವಾದ ಈ ಧರಣಿಯು ಕುಂತಳ ರೂಡಿಯ ಕುಂತಳ ವಿಷಯದಲ್ಲಿ ದಕ್ಷಿಣ ವಾರಣಾಸಿಯಂತೆ ಪುರಿಕರನಗರ ಶೋಭಿಸುವುದು.

ಮಹಾಸ್ರಗ್ಧರಾವೃತ್ತ :– ಸಮಯಾಚಾರಕ್ಕೆ ಕೈಗಂನಡಿ ಸಕಳಕಳಾಪ್ರೌಢಿಗಾಯುಷ್ಯಮಿನ್ನ
ನ್ಯಮತಕ್ಕೌರ್ವ್ವಾಣಳಂ ಭಾಕ್ತಿಕವನಕೆ ವಸಂತಾಗಮಂಶಿಷ್ಯವರ್ಗ್ಗ
ಕ್ಕಮೃತಾಂಭೋವರ್ಷಣಂಮನ್ಮಥ ಪೃದುವಿಭವಕ್ಕಂತಕಂ ಸೋಮನಾಥ
ಕ್ರಮ ಪಂಕೇಜಕ್ಕೆ ಮತ್ತಂ ಭ್ರಮರನೆನಿಸಿದಂ ಭಾವಿಪಂದ್ಯೆಚಿದೇವಂ

ಸಮಾಯಚಾರಕ್ಕೆ ಕೈಗನ್ನಡಿ, ಸಕಳಜನಕ್ಕೆ ಆಶ್ರಯತಾಣವಾಗಿ. ವಸಂತನಾಗಮನದಂತೆ ಶಿಷ್ಯವರ್ಗಕ್ಕೆ, ಅಮೃತವರ್ಷಣದಂತೆ, ಮನ್ಮಥ ಪೃಥುವಿಭವಕ್ಕೆ ಸೋಮನಾಥಕ್ರಮ, ಪಂಕೇಜಕ್ಕೆ ಭ್ರಮರನೆನಿಸಿದ್ದ ಪಂದ್ಯೆಚಿದೇವಂ.

ದೀನಾನಾಥ ಶರಣ್ಯಂ

ಭೂನುತಪುಣ್ಯಂ ವಿವೇಕನಿಧಿ ಗುಣನಿಳಯಂ

ತಾನೆಸೆದನೆ ದೇವನ

ಮಾನಿತಪದಪದ್ಮಯುಗಳ ಭೃಂಗಂ ಸಂಗಂ

ದೀನ ಅನಾಥಶರಣ್ಯನು, ಭೂನುತಪುಣ್ಯನು, ವಿವೇಕನಿಧಿಗುಣನಿಳಯನು, ತಾನೇ ಶೋಭಿಸುತ್ತಿದ್ದನು, ದೇವನಮಾನಿತ ಪಾದಪದ್ಮಗಳ ದುಂಬಿಯಂತೆ. ಈ ರೀತಿಯಾಗಿ ದಕ್ಷಿಣ ಗದಗ ಭಾಗದ ಶಾಸನಗಳಲ್ಲಿ ಸಾಹಿತ್ಯಾತ್ಮಕ ಅಂಶಗಳನ್ನು ಗಮನಿಸಬಹುದಾಗಿದೆ. ಕಂದ, ವೃತ್ತಗಳು, ಖ್ಯಾತಕರ್ಣಾಟಕ ವೃತ್ತಗಳು, ತ್ರಿಪದಿ, ಗದ್ಯ ಹೀಗೆ ನಾನಾ ವಿಧವಾಗಿ ಬಳಕೆಯಾಗಿರುವ ಪ್ರಕಾರಗಳು ತಮ್ಮದೇ ವ್ಯಾಪ್ತಿಯಲ್ಲಿ ಅತ್ಯುತ್ತಮ ವರ್ಣನೆಗಳಾಗಿವೆ. ಕಿರುಸಾಹಿತ್ಯ ಕೃತಿಗಳಾಗಿ ಮೈತಳೆದಿವೆ. ಈ ಸಾಹಿತ್ಯ ಭಾಗಗಳ ಅಧ್ಯಯನದಿಂದ ಕನ್ನಡ ಸಾಹಿತ್ಯ ಚರಿತ್ರೆಯ ರಚನೆಗೆ ಹೊಸ ಹೊಸ ಪ್ರೇರಣೆಗಳು ದೊರಕುತ್ತವೆ.

ಅಡಿಟಿಪ್ಪಣಿಗಳು

೧. ಡಂಬಳ, ಎಸ್.ಐ.ಐ. ೧೫ ಶಾ.ಸಂ. ೫೭೦ ಕ್ರಿ.ಶ.೧೨ಶ

೨. ಡಂಬಳ, ಎಸ್.ಐ.ಐ. ೧೫ ಶಾ.ಸಂ. ೫೭ ಕ್ರಿ.ಶ.೧೧೮೪

೩. ಡಂಬಳ, ಎಸ್.ಐ.ಐ. ೧೫ ಶಾ.ಸಂ. ೫೭ ಕ್ರಿ.ಶ.೧೧೮೪

೪. ಚಿಕ್ಕವಡ್ಡಟ್ಟಿ, ಎಸ್.ಐ.ಐ. ೧೧ ಶಾ.ಸಂ.೧೭೮ ಕ್ರಿ.ಶ.೧೧೨೭

೫. ಲಕ್ಕುಂಡಿ, ಎಸ್.ಐ.ಐ. ೧೫ ಶಾ.ಸಂ. ೧೭೬ ಕ್ರಿ.ಶ.೧೨೩೬

೬. ಲಕ್ಷ್ಮೇಶ್ವರ,

೭. ಕುರ್ತುಕೋಟಿ, ಎಸ್.ಐ.ಐ. ೧೧ ಶಾ.ಸಂ.೧೩೩ ಕ್ರಿ.ಶ.೧೦೮೭

೮. ಡೋಣಿ, ಎಸ್.ಐ.ಐ. ೧೧ ಶಾ.ಸಂ. ೧೫೨ ಕ್ರಿ.ಶ.೧೯೯೬

೯. ಹೊಸೂರು, ಎಸ್.ಐ.ಐ. ೧೧ ಶಾ.ಸಂ. ೧೫೨ ಕ್ರಿ.ಶ.೧೧೦೩

೧೦. ಕಣವಿ, ಎಸ್.ಐ.ಐ. ೧೧ ಶಾ.ಸಂ. ೧೫೬ ಕ್ರಿ.ಶ.೧೧೦೫

೧೧. ಗದಗ, ಎಸ್.ಐ.ಐ. ೨೦ ಶಾ.ಸಂ.೧೭೨ ಕ್ರಿ.ಶ.೧೧೧೬

೧೨. ಡಂಬಳ, ಎಸ್.ಐ.ಐ. ೧೧ ಶಾ.ಸಂ. ೧೭೫ ಕ್ರಿ.ಶ.೧೧೨೪

೧೩. ಗದಗ, ಎಸ್.ಐ.ಐ. ೧೫ ಶಾ.ಸಂ. ೧೫೯ ಕ್ರಿ.ಶ.೧೨೧೩

೧೪. ನಾಗಾವಿ ಎಸ್.ಐ.ಐ. ೧೧ ಶಾ.ಸಂ. ೪೧ ಕ್ರಿ.ಶ.೯೬೭

೧೫. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ. ೨೪೫ ಕ್ರಿ.ಶ.೯೬೮-೬೯

೧೬. ಜಂತ್ಲಿಶಿರೂರು, ಸಂ: ಡಾ ಡಿ.ವಿ.ಪರಮಶಿವಮೂರ್ತಿ

೧೭. ಲಕ್ಕುಂಡಿ, ಎಸ್.ಐ.ಐ. ೧೧ ಶಾ.ಸಂ. ೫೨ ಕ್ರಿ.ಶ.೧೦೦೭

೧೮. ಮುಳಗುಂದ, ಇ.ಐ ೧೬ ಮ.ಸಂ ೫೩–೫೭ ಕ್ರಿ.ಶ.೧೦೫೩

೧೯. ಮುಳಗುಂದ, ಎಸ್.ಐ.ಐ. ೧೧ ಶಾ.ಸಂ. ೯೭ ಕ್ರಿ.ಶ.೧೦೬೭

೨೦. ಸೊರಟೂರು, ಎಸ್.ಐ.ಐ. ೧೧ ಶಾ.ಸಂ. ೧೧೧ ಕ್ರಿ.ಶ.೧೦೭೧

೨೧. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ. ೪೭ ಕ್ರಿ.ಶ.೧೦೭೪

೨೨. ಡೋಣಿ, ಎಸ್.ಐ.ಐ. ೧೧ ಶಾ.ಸಂ. ೧೨೬ ಕ್ರಿ.ಶ.೧೦೮೦

೨೩. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ. ೫೩ ಕ್ರಿ.ಶ.೧೦೮೧

೨೪. ಕುರ್ತಕೋಟಿ, ಎಸ್.ಐ.ಐ. ೧೧ ಶಾ.ಸಂ.೧೨೭ ಕ್ರಿ.ಶ.೧೦೮೨

೨೫. ಕುರ್ತಕೋಟಿ, ಎಸ್.ಐ.ಐ. ೧೧ ಶಾ.ಸಂ.೧೩೩ ಕ್ರಿ.ಶ.೧೦೮೭

೨೬. ಕುರ್ತಕೋಟಿ, ಎಸ್.ಐ.ಐ. ೧೧ ಶಾ.ಸಂ.೧೩೪ ಕ್ರಿ.ಶ.೧೦೮೨

೨೭. ಪೇಠಾಆಲೂರು, ಎಸ್.ಐ.ಐ. ೧೧ ಶಾ.ಸಂ.೧೩೬ ಕ್ರಿ.ಶ.೧೦೯೧

೨೮. ಸೊರಟೂರು, ಎಸ್.ಐ.ಐ. ೧೧ ಶಾ.ಸಂ. ೧೩೭ ಕ್ರಿ.ಶ.೧೦೯೨

೨೯. ಡೋಣಿ, ಎಸ್.ಐ.ಐ. ೧೧ ಶಾ.ಸಂ. ೧೮೧ ಕ್ರಿ.ಶ.೧೦೯೪

೩೦. ಡೋಣಿ, ಎಸ್.ಐ.ಐ. ೧೧ ಶಾ.ಸಂ. ೧೪೦ ಕ್ರಿ.ಶ.೧೦೯೬

೩೧. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ. ೬೬ ಕ್ರಿ.ಶ.೧೧೦೨

೩೨. ಹೊಸೂರು, ಎಸ್.ಐ.ಐ. ೧೧ ಶಾ.ಸಂ. ೧೫೨ ಕ್ರಿ.ಶ.೧೧೦೩

೩೩. ಕಣವಿ, ಎಸ್.ಐ.ಐ. ೧೧ ಶಾ.ಸಂ. ೧೫೬ ಕ್ರಿ.ಶ.೧೧೦೫

೩೪. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೧೨೨ ಕ್ರಿ.ಶ.೧೧೦೭

೩೫. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೭೪ ಕ್ರಿ.ಶ.೧೧೧೨

೩೬. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೮೩ ಕ್ರಿ.ಶ.೧೧೨೪

೩೭. ಪೇಠಾಆಲೂರು, ಎಸ್.ಐ.ಐ. ೧೧ ಶಾ.ಸಂ.೧೭೩ ಕ್ರಿ.ಶ.೧೧೨೪

೩೮. ಡಂಬಳ, ಎಸ್.ಐ.ಐ. ೧೧ ಶಾ.ಸಂ. ೧೭೫ ಕ್ರಿ.ಶ.೧೧೨೪

೩೯. ಚಿಕ್ಕವಡ್ಡಟ್ಟಿ, ಎಸ್.ಐ.ಐ. ೧೧ ಶಾ.ಸಂ. ೧೭೮ ಕ್ರಿ.ಶ.೧೧೨೭

೪೦. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೧೦೭ ಕ್ರಿ.ಶ.೧೧೩೮

೪೧. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೧೦೭ ಕ್ರಿ.ಶ.೧೧೩೮

೪೨. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೧೧೭ ಕ್ರಿ.ಶ.೧೧೪೭

೪೩. ಹೊಸೂರು, ಎಸ್.ಐ.ಐ. ೧೫ ಶಾ.ಸಂ.೩೬ ಕ್ರಿ.ಶ.೧೧೪೮

೪೪. ಲಕ್ಷ್ಮೇಶ್ವರ, ಇ.ಐ. ೧೬ ಮ.ಸಂ.೩೫–೪೪ ಕ್ರಿ.ಶ.೧೧೫೩

೪೫. ಹೊಸೂರು, ಎಸ್.ಐ.ಐ. ೧೫ ಶಾ.ಸಂ.೫೧ ಕ್ರಿ.ಶ.೧೧೫೫

೪೬. ಲಕ್ಕುಂಡಿ, ಎಸ್.ಐ.ಐ. ೧೫ ಶಾ.ಸಂ.೧೩೫ ಕ್ರಿ.ಶ.೧೧೭೯

೪೭. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ.೧೬೭ ಕ್ರಿ.ಶ.೧೧೭೯

# ಅಧ್ಯಾಯ ೬

## ಶಾಸನೋಲ್ಲೇಖಿತ ಬಸದಿಗಳು ಮತ್ತು ದೇವಾಲಯಗಳು

೬.೧. ಬಸದಿಗಳು

೬.೨. ದೇವಾಲಯಗಳು

## ೬

# ಶಾಸನೋಲ್ಲೇಖಿತ ಬಸದಿಗಳು ಮತ್ತು ದೇವಾಲಯಗಳು

ಈ ಅಧ್ಯಾಯದಲ್ಲಿ ದಕ್ಷಿಣ ಗದಗು ಭಾಗದ ಶಾಸನಗಳಲ್ಲಿ ಉಲ್ಲೇಖಿತವಾದ ಬಸದಿಗಳು ಮತ್ತು ದೇವಾಲಯಗಳ ಬಗ್ಗೆ ಚರ್ಚಿಸಿದೆ. ದೇವಾಲಯಗಳು ಮತ್ತು ಶಾಸನಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಒಂದು ನಿರ್ಮಾಣ ಕ್ರಿಯೆಯಾದರೆ ಮತ್ತೊಂದು ಆ ನಿರ್ಮಾಣ ಕ್ರಿಯೆಗೆ ನಿರ್ವಹಣೆಯ ರಕ್ಷೆ ನೀಡುವಂತಹದು. ಒಂದು ದೇವಾಲಯವನ್ನು ನಿರ್ಮಿಸಿ, ಅದಕ್ಕೆ ದಾನ-ದತ್ತಿಗಳನ್ನು ನೀಡಿ ಆ ವಿಷಯವನ್ನು ಶಾಸನಗಳಲ್ಲಿ ಹಾಕಿಸುವ ಮುಖಾಂತರ ಮತ್ತು ಆ ದಾನವು ತಲೆ-ತಲಾಂತರದವರೆಗೂ ಮುಂದುವರೆಯುವ ಆಶಯದ ಹಿನ್ನೆಲೆಯಲ್ಲಿ ಶಾಸನ ನಿರ್ಮಾಣಕ್ಕೆ ಮಹತ್ವವೊದಗುತ್ತದೆ. ನಮ್ಮ ನಾಡಿನ ಜನರು ಕಲೆ ಮತ್ತು ಭಕ್ತಿಯ ಪ್ರತೀಕವಾಗಿ ನೂರಾರು ಬಸದಿಗಳನ್ನು ಮತ್ತು ದೇವಾಲಯಗಳನ್ನು ನಿರ್ಮಿಸಿ, ಕರ್ನಾಟಕದ ಕಲೆ, ಶಿಲ್ಪಕಲೆ, ಚಿತ್ರಕಲೆ, ವಾಸ್ತುಶಿಲ್ಪಕ್ಕೆ ಅಮೋಘ ಕೊಡುಗೆಯನ್ನು ನೀಡಿದ್ದಾರೆ. ಈ ರೀತಿಯಾಗಿ ನಿರ್ಮಿಸಿದ ಬಸದಿ ಮತ್ತು ದೇವಾಲಯಗಳ ಬಗ್ಗೆ ನೂರಾರು ಶಾಸನಗಳು ಮಾಹಿತಿ ನೀಡುತ್ತಿವೆ. ಆದರೂ ಸಹ ಎಷ್ಟೋ ಬಸದಿಗಳು, ದೇವಾಲಯಗಳು ಇಂದು ಕಾಲನ ಹೊಡೆತಕ್ಕೆ ಸಿಕ್ಕಿ ಕಣ್ಮರೆಯಾಗಿದ್ದು, ಅವುಗಳ ಕುರುಹೂ ಸಹ ಇಲ್ಲದಾಗಿದೆ. ಕೆಲವು ತಮ್ಮ ಮೂಲ ಸ್ವರೂಪಗಳನ್ನು ಬದಲಿಸಿಕೊಂಡು ಉಳಿದಿವೆ. ಕೆಲವು ದೇವಾಲಯಗಳು ಹಾಳಾದ ಸಂದರ್ಭದಲ್ಲಿ ಆ ದೇವಾಲಯದ ಅಳಿದುಳಿದ ಅವಶೇಷಗಳನ್ನು ಬಳಸಿಕೊಂಡು ಬೇರೆ ದೇವಾಲಯಗಳನ್ನಾಗಿ ನಿರ್ಮಿಸಲಾಗಿದೆ.

೬.೧. ಬಸದಿಗಳು

ಕರ್ನಾಟಕದ ಒಂದು ಪ್ರಬಲ ಧರ್ಮವಾಗಿ ಜೈನಧರ್ಮ ಇತ್ತು. ಅದಕ್ಕೆ ಸಾಕ್ಷಿಯಾಗಿ ಶಾಸನಗಳು, ವಾಸ್ತುಶಿಲ್ಪ ಮತ್ತು ಸಾಹಿತ್ಯ ಹೇರಳವಾಗಿವೆ. ಕ್ರಿ.ಶ.೬೮೩ ರಿಂದ ಕ್ರಿ.ಶ.೧೪೧೨ರ ವರೆಗೆ ಲಕ್ಷ್ಮೇಶ್ವರದ ಶಂಖಬಸದಿಯಲ್ಲಿ ಶಾಸನಗಳು[೧] ದೊರೆಯುತ್ತವೆ. ನಮಗೆ ದೊರೆಯುವ ಈ ಭಾಗದ ಅತ್ಯಂತ ಪ್ರಾಚೀನ ಬಸದಿಯು ಈ ಶಂಖ ಬಸದಿಯೆ. ಈ ಬಸದಿಯಲ್ಲಿ ಬಾದಾಮಿಚಾಲುಕ್ಯ ದೊರೆ ೨ನೇ ಪುಲಕೇಶಿಯ ಪ್ರಾಚೀನ ಶಾಸನವು ಇದೆ. ಈ ಬಸದಿಯು ಬಾದಾಮಿಚಾಲುಕ್ಯ, ರಾಷ್ಟ್ರಕೂಟ, ಗಂಗ, ಕಲ್ಯಾಣಚಾಲುಕ್ಯ, ಮತ್ತು ವಿಜಯನಗರ ಅರಸರ ಬಹಳಷ್ಟು ಶಾಸನಗಳು ಇವೆ. ಈ ಬಸದಿಯು ೭ನೇ ಶತಮಾನದಲ್ಲಿ ನಿರ್ಮಾಣವಾಗಿದ್ದು, ಅಲ್ಲಿಂದಲೂ ಜೀರ್ಣೋದ್ಧಾರಗೊಳ್ಳುತ್ತ ಹಲವಾರು ದಾನದತ್ತಿಗಳನ್ನು ಪಡೆಯುತ್ತ ಇಂದಿಗೂ ಕೂಡ ಉಳಿದು ಬಂದಿದೆ. ಈ ಬಸದಿಯಲ್ಲಿ ಆದಿಕವಿ ಪಂಪನು 'ಆದಿನಾಥಪುರಾಣ'ವನ್ನು ಬರೆದುದಾಗಿ ನಂಬಲಾಗಿದೆ. ಇಲ್ಲಿ ಕ್ರಿ.ಶ.೧೯೮೭ರಲ್ಲಿ ಸ್ಥಾಪಿಸಲಾದ ೨೨ನೇ ತೀರ್ಥಂಕರ ನೇಮಿನಾಥನ ವಿಗ್ರಹವಿದೆ. ಇದನ್ನು ಪ್ರಾಚೀನ ಜೈನ ಪಾಣಿಪೀಠದ ಮೇಲೆಯೇ ಸ್ಥಾಪಿಸಲಾಗಿದೆ. ಈ ಬಸದಿಗೆ ಕ್ರಿ.ಶ.೬೮೩ರಲ್ಲಿ ಬೆಳ್ವೊಲ-೩೦೦ರ ಹಡಗಿಲೆ ಗ್ರಾಮವನ್ನು, ಕ್ರಿ.ಶ.೭೨೩ರಲ್ಲಿ ಸಾಂಬೊಳಲ ಗ್ರಾಮವನ್ನು, ಕ್ರಿ.ಶ.೭೩೦ರಲ್ಲಿ ಕದ್ದಮ ಗ್ರಾಮವನ್ನು ದಾನವಾಗಿ ನೀಡಲಾಗಿದೆ. ಈ ಬಸದಿಯು ಪೂರ್ವದಿಕ್ಕಿಗಿದ್ದು ಉತ್ತಮ ಸ್ಥಿತಿಯಲ್ಲಿರುತ್ತದೆ. ಇದರ ಗರ್ಭಗೃಹದ ಬಾಗಿಲವಾಡದ ಎರಡು ಕಡೆ ಜ್ವಾಲಮಾಲಿನಿಯರ, ಯಕ್ಷ ಮತ್ತು ಯಕ್ಷಿಣಿಯರ ಶಿಲ್ಪಗಳಿವೆ. ಇದರ ಗರ್ಭಗೃಹದಲ್ಲಿ ನೇಮಿನಾಥ ಮತ್ತು ಜೈನ ತಿರ್ಥಂಕರರ ಕಂಚಿನ ಮೂರ್ತಿಗಳಿವೆ.

ಕ್ರಿ.ಶ.೭೩೫ರ ೨ನೇ ವಿಕ್ರಮಾದಿತ್ಯನ ಕಾಲದ ಶಾಸನವು[೨] ಲಕ್ಷ್ಮೇಶ್ವರದಲ್ಲಿದ್ದು, ಇದು ಬಾಹುಬಲಿ ಶೆಟ್ಟಿಯ ವಿನಂತಿಯ ಮೇರೆಗೆ ಧವಳ ಜಿನಾಲಯದ ಜೀರ್ಣೋದ್ದಾರ ಮಾಡಿದ ವಿಷಯವನ್ನು ತಿಳಿಸುತ್ತದೆ. ಈ ಬಸದಿಯನ್ನು ಬಿಳಿಯ ಕಲ್ಲುಗಳಿಂದ ನಿರ್ಮಿಸಿದ್ದರಿಂದ ಅದಕ್ಕೆ ಧವಳಜಿನಾಲಯೆನ್ನುತಿರಬಹುದು, ಆದರೆ ಈ ಜಿನಾಲಯ ಯಾವುದು ಎಂಬುದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ.

ಕ್ರಿ.ಶ.೯೦೨-೦೩ರ ಮುಳಗುಂದದ ಜಿನಾಲಯದ ಗೋಡೆಯಲ್ಲಿರುವ ಶಾಸನ.[೩] ಅಲ್ಲಿ ಟೀಕಾರ್ಯನು ಈ ಬಸದಿಯನ್ನು ನಿರ್ಮಿಸಿದ ಬಗ್ಗೆ ನಮಗೆ ಮಾಹಿತಿಯನ್ನು ನೀಡುತ್ತದೆ. ಈ ಬಸದಿಯು ಮುಳಗುಂದ ಸಮೀಪ ಚಿಂಚಲಿ ದಾರಿಯ ಪಕ್ಕ ಕಲ್ಲುಬಂಡೆಗಳ ಬೆಟ್ಟದಲ್ಲಿ ಇರುವುದಾಗಿ ತಿಳಿಯುತ್ತದೆ. ಇದನ್ನು ತೀರ್ಥದ ಬಸದಿಯೆಂದು ಕರೆಯಲಾಗಿದೆ. ಈಗ ಈ ಬಸದಿಯ ಯಾವುದೇ ಕುರುಹುಗಳಿಲ್ಲ. ನಯಸೇನ ಕವಿಯು ಈ ಬಸದಿಯಲ್ಲಿ ಬೆಳೆದು ದೊಡ್ಡವನಾಗಿ ವಿದ್ಯಾಭ್ಯಾಸ ಮಾಡಿ ಅಮೂಲ್ಯವಾದ ಧರ್ಮಾಮೃತ ಕೃತಿಯನ್ನು ರಚಿಸಿರುವುದಾಗಿ ತಿಳಿದುಬರುತ್ತದೆ.

ಕ್ರಿ.ಶ.೧೨೭೫ ಮತ್ತು ೧೬ನೇ ಶತಮಾನದ ಎರಡು ಶಾಸನಗಳು[೪] ಪಾರ್ಶ್ವನಾಥ ಬಸದಿಯ ಬಗ್ಗೆ ಉಲ್ಲೇಖಿಸುತ್ತವೆ. ೧೬ನೇ ಶತಮಾನದಲ್ಲಿ ಈ ಬಸದಿಯನ್ನು ಮುಸಲ್ಮಾನರು ಸುಟ್ಟಿದ್ದಕ್ಕಾಗಿ, ಅವರೊಂದಿಗೆ ನೆಡೆದ ಯುದ್ಧದಲ್ಲಿ ಸಹಸ್ರಕೀರ್ತಿ ಎಂಬುವನು ಮರಣ ಹೊಂದಿದ ಬಗ್ಗೆ ಉಲ್ಲೇಖವಿದೆ ಮತ್ತು ಅಮೃತಮಯ ಮರಣ ಹೊಂದಿದ ವಿಷಯವನ್ನು ಕ್ರಿ.ಶ.೧೨೭೫ರ ಶಾಸನ ತಿಳಿಸುತ್ತದೆ. ಈ ಬಸದಿಯು ಚಂದ್ರನಾಥ ಬಸದಿಯ ಪಕ್ಕದಲ್ಲಿ ಉತ್ತರಾಭಿಮುಖವಾಗಿದ್ದು ಈಗ ಜೀರ್ಣೋದ್ಧಾರಗೊಂಡಿದೆ. ಇಲ್ಲಿಯೇ ಚಂದ್ರನಾಥಬಸದಿ ಇದೆ. ಈ ಬಸದಿ ಕ್ರಿ.ಶ.೯೦೨ರಲ್ಲಿ ನಿರ್ಮಾಣವಾದ ಬಗ್ಗೆ ಶಾಸನದಲ್ಲಿ ಹೇಳಲಾಗಿದೆ.

ಕ್ರಿ.ಶ.೧೦೨೮-೨೯ರ ಕಲ್ಯಾಣಚಾಲುಕ್ಯರ ದೊರೆ ೨ನೇ ಜಯಸಿಂಹನಕಾಲದ ಶಾಸನವೊಂದು[೫] ಹೊಸೂರಿನ ದುರಗವ್ವನ ಗುಡಿಯಲ್ಲಿದ್ದು, ಇದು ಆಯಿಚಗಾವುಂಡ ಬಸದಿ ನಿರ್ಮಾಣ ಮತ್ತು ದಾನ ಮಾಡಿದ ಬಗ್ಗೆ ತಿಳಿಸುತ್ತದೆ. ಆದರೆ ಇಂದು ಇಲ್ಲಿ ಯಾವುದೇ ಬಸದಿ ಇರುವುದಿಲ್ಲ.

ಕ್ರಿ.ಶ.೯೮೬ರ ಮುಂಡರಗಿ ತಾಲೂಕಿನ ಶಿರೂರು ಗ್ರಾಮದ ಅಪ್ರಕಟಿತ ಅತ್ತಿಮಬ್ಬೆಯ ಶಾಸನವು[೬] ಶಕವರ್ಷ ೯೦೮ರಲ್ಲಿ ಸರ್ವಜಿತುನಾಮ ಸಂವತ್ಸರದ ಪಾಲ್ಗುಣ ಮಾಸದಲ್ಲಿ "ಜಿನನಿಳಯನಿವಹಕ್ಕೆಲ್ಮಂ ಮುನ್ನಂ ಕರುವೆನೆಮಾಡಿಸಿದಳ ಶಿರವೂರದೂ. . . . .ಇಂತು ತನ್ನ ಮಾಡಿಸಿ ಬಸದಿಯ" ಎಂದು ಶಾಸನದಲ್ಲಿ ಉಲ್ಲೇಖವಾಗಿರುತ್ತದೆ. ಆದರೆ ಈ ಶಾಸನದಲ್ಲಿ ಉಲ್ಲೇಖವಾದಂತೆ ಯಾವುದೇ ಜೈನ ಬಸದಿ ಇರುವುದಿಲ್ಲ. ಕಾಲನ ಹೊಡೆತಕ್ಕೆ ಸಿಕ್ಕಿ ನಾಶವಾಗಿರಬಹುದು.

ಕ್ರಿ.ಶ.೧೩ನೇ ಶತಮಾನದ ಸೊರಟೂರಿನ ಶಾಸನವು[೭] ಅಲ್ಲಿಯ ಒಂದು ಬಸದಿಯ ಬಗ್ಗೆ ತಿಳಿಸುತ್ತದೆ. ಅಲ್ಲಿ ನರೇಂದ್ರಸೇನನ ಶಿಷ್ಯೆ ಪಮಿಗೌಡತಿಯು ನಿಸಧಿಯಾದ ಬಗ್ಗೆ ತಿಳಿಸುತ್ತದೆ. ಇಂದು ಇಲ್ಲಿ ಹೊಸದಾಗಿ ನಿರ್ಮಿಸಿದ ಜೈನಮಂದಿರವಿದೆ. ಹಳೆಯ ಮಂದಿರದ ಯಾವುದೇ ಕುರುಹುಗಳು ಸಿಗುವುದಿಲ್ಲ.

ಶಿರಹಟ್ಟಿ ತಾಲೂಕಿನ ಅಕ್ಕಿಗುಂದಿಯಲ್ಲಿ ಸುಮಾರು ೧೨ನೇ ಶತಮಾನದ ಶಾಸನವಿದ್ದು[೮] ಇದು ಚೌವೀಸತೀರ್ಥಂಕರ ವಿಗ್ರಹ ಸ್ಥಾಪಿಸಿದ ಬಗ್ಗೆ ತಿಳಿಸುತ್ತದೆ. ಇಲ್ಲಿ ಹೊಸದಾದ ಜೈನ ಬಸದಿ ಇದ್ದು ಹಳೆಯ ಬಸದಿಯ ಕುರುಹುಗಳಾವುವು ಸಿಗುವುದಿಲ್ಲ.

ಕ್ರಿ.ಶ.೧೦೦೭ರ ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯು ಬ್ರಹ್ಮಜಿನಾಲಯವನ್ನು ನಿರ್ಮಾಣ ಮಾಡಿದ ಬಗ್ಗೆ ಶಾಸನವು ತಿಳಿಸುತ್ತದೆ.[೯] ಈಕೆ ಬ್ರಹ್ಮಜಿನಾಲಯವನ್ನು ನಿರ್ಮಿಸಿ, ೧೫೦೦ ಸುವರ್ಣ ಜಿನ ಬಿಂಬಗಳನ್ನು ನಿರ್ಮಿಸಿ ದಾನ ಮಾಡಿದಳೆಂದು ಮತ್ತು ಪೊನ್ನನ ಶಾಂತಿಪುರಾಣದ ೧೦೦೦ ಪ್ರತಿಗಳನ್ನು ಬರೆಯಿಸಿ ದಾನಗೈದುದಾಗಿ ತಿಳಿಸುತ್ತದೆ. ಈ ಜಿನಾಲಯವು ಪೂರ್ವಾಭಿಮುಖವಾಗಿದ್ದು, ಇಂದಿಗೂ ಕೂಡ ಪ್ರಾಚ್ಯವಸ್ತು ಇಲಾಖೆಯವರ ಕಾರ್ಯಬಾಹುಳ್ಯದಿಂದ ಉತ್ತಮಸ್ಥಿತಿಯಲ್ಲಿದೆ. ಈ

ಬಸದಿಯಲ್ಲಿ ಕ್ರಿ.ಶ.೧೦೦೭ರ ಇರಿವಬೆಡಂಗನ ಕಾಲದ ಶಾಸನ,[೧೦] ಕ್ರಿ.ಶ.೧೧೭೩ರ ಕಲಚುರಿ ಸೋವಿದೇವನ ಶಾಸನ,[೧೧] ಹಾಗು ಹನ್ನೆರಡನೇ ಶತಮಾನದ ಮೂಲಸಂಗದೇವಗಣದ ಶಂಕದೇವ ಶಾಸನ ಈ ಬಸದಿಯ ಬಗ್ಗೆ ಉಲ್ಲೇಖವನ್ನು ನೀಡುತ್ತವೆ.

ಕ್ರಿ.ಶ.೧೨೮೮ರ ಡಂಬಳದ ಶಾಸನವು[೧೨] ಆ ಊರಿನಲ್ಲಿದ್ದ ಜಿನಾಲಯದ ಬಗ್ಗೆ ತಿಳಿಸುತ್ತದೆ. ಈ ಜಿನಾಲಯವು ಡಂಬಳದ ಕೆರೆಯ ಕಡೆ ಹಳೆಯ ಕೋಟೆಯ ಒಳಗೆ ಇದ್ದು ಇಂದು ನಾಶವಾಗಿದೆ.

ಗದುಗಿನ ವೀರನಾರಾಯಣ ಗುಡಿಯ ದಕ್ಷಿಣ ಗೋಪುರ ಕಂಬದಲ್ಲಿ ಇರುವ ಶಾಸನದಲ್ಲಿ[೧೩] ಮಹದೇವಮಂತ್ರಿಯು ಇಂದು ಕಲಿದೇವಸ್ವಾಮಿದೇವಾಲಯ ಎಂದು ಕರೆಯುವ ಜೈನ ಮಂದಿರದ ಮಹಾಮಂಟಪದ ಜೀರ್ಣೋದ್ಧಾರ ಕಾರ್ಯವನ್ನು ಮಾಡಿಸುತ್ತಾನೆ. ಆದರೆ ಇಂದು ಗದುಗಿನಲ್ಲಿ ಈ ಜೈನಮಂದಿರ ಕಲಿದೇವಸ್ವಾಮಿ ದೇವಾಲಯವಾಗಿ ಪರಿವರ್ತನೆಗೊಂಡಿದೆ.

ಬೆಳ್ಳಟ್ಟಿಯ ಊರ ಸಮೀಪದ ಗುಡ್ಡದ ಮೇಲೆ (ಜೋಗಿ ಬಂಡಿ) ಕ್ರಿ.ಶ.೯೯೦ರ ಶಾಸನವಿದ್ದು[೧೪] ಅಜ್ಜರಯ್ಯನ ಪೆರ್ಗಡೆ ಆಯತವರ್ಮನು ಕಟ್ಟಿಸಿದ ಬೆಳ್ಳಟ್ಟಿಗಣದ ಬಸದಿ ಎಂದು ಇದೆ. ಆದರೆ ಇಲ್ಲಿ ಯಾವುದೇ ಜೈನ ಬಸದಿ ಇರುವುದಿಲ್ಲ. ಕಟ್ಟಿಸಿದ ಬಸದಿ ಕಾಲನ ಹೊಡೆತದಲ್ಲಿ ನಾಶವಾಗಿರಬಹುದು.

ಲಕ್ಷ್ಮೇಶ್ವರದ ಕ್ರಿ.ಶ.೧೨೪೭ರ ಶಾಸನವೊಂದು[೧೫] ರಾಜಲಾದೇವಿ ಎಂಬ ಮಹಿಳೆಯು ಶ್ರೀವಿಜಯಬಸದಿಗೆ ದಾನ ಕೊಟ್ಟ ಉಲೇಖವಿದೆ. ಆದರೆ ಈ ಶ್ರೀವಿಜಯಬಸದಿ ಯಾವುದು ಎಂಬುದು ಸ್ಪಷ್ಟವಾಗುವುದಿಲ್ಲ.

ಮುಂಡರಗಿ ತಾಲೂಕಿನ ಕಲಕೇರಿ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೨ನೇ ಶತಮಾನದ ಶಾಸನವೊಂದಿದ್ದು[೧೬] ಇದು ಭಾನುಕೀರ್ತಿಸಿದ್ಧಾಂತಿದೇವನ ಶಿಷ್ಯನಾದ ಹಾಲಿಗಾವುಂಡನಿಂದ ಪಾರ್ಶ್ವನಾಥ ಬಸದಿಯ ನಿರ್ಮಾಣವಾದ ಬಗ್ಗೆ ತಿಳಿಸುತ್ತದೆ. ಆದರೆ ಈಗ ಇಲ್ಲಿ ಬಸದಿಯ ಯಾವ ಕುರುಹುಗಳು ದೊರೆಯುವುದಿಲ್ಲ.

ಡೋಣಿಯ ೧೨ನೇ ಶತಮಾನದ ಶಾಸನವು[೧೭] ೭೦ ಮಹಾಜನರಿಂದ ಸೋಕಸೆಟ್ಟಿ ಕಟ್ಟಿಸಿದ ಬಸದಿಗೆ ನಿವೇಶನ ಹಾಗೂ ಭೂಮಿದಾನ ಮಾಡಿದ ಬಗ್ಗೆ ತಿಳಿಸುತ್ತದೆ. ಜೊತೆಗೆ ಕ್ರಿ.ಶ.೧೨೯೯ರ ಶಾಸನವು ಶ್ರೀಕರಣದ ಬೊಪ್ಪಣ್ಣನು ಕಾಣೂರಗಣದ ಮರುದೇವಿ ಅವ್ವೆಯ ಬಸದಿಗೆ ಪಾರ್ಶ್ವನಾಥ ವಿಗ್ರಹ ದಾನ ಮಾಡಿದ ಬಗ್ಗೆ ತಿಳಿಸುತ್ತವೆ.[೧೮] ಈ ಎರಡು ಶಾಸನಗಳು ಡೋಣಿಯಲ್ಲಿ ಜೈನಬಸದಿ ಇದ್ದಿತೆಂಬುದಕ್ಕೆ ಸಾಕ್ಷಿಯಾಗುತ್ತವೆ. ಆದರೆ ಈಗ ಡೋಣಿಯಲ್ಲಿ ಜೈನಬಸದಿಯ ಯಾವ ಕುರುಹುಗಳು ದೊರೆಯುವುದಿಲ್ಲ.

ಡಂಬಳದ ಕ್ರಿ.ಶ.೧೨೮೮ರ ಶಾಸನವೊಂದು ಸಪ್ತರಸಾದಿಗಳಿಂದ ನಗರ ಜಿನಾಲಯಕ್ಕೆ ಬಿಟ್ಟ ಸುಂಕಗಳ ದಾನವನ್ನು ತಿಳಿಸುತ್ತದೆ. ಆದರೆ ಇಂದು ಜೈನ ಬಸದಿ ಸಂಪೂರ್ಣವಾಗಿ ಹಾಳಾಗಿದೆ.[೧೯] ಈಗ ಗಮನ ಹರಿಸಿದರೆ ಅದರ ಬುನಾದಿಯನ್ನು ಉತ್ಖನನ ಮಾಡಬಹುದು.

**೬.೨. ದೇವಾಲಯಗಳು**

ದಕ್ಷಿಣ ಗದಗು ಭಾಗದಲ್ಲಿ ಜೈನಬಸದಿಗಳಿಗಿಂತ ಹೆಚ್ಚು ದೇವಾಲಯಗಳು ನಿರ್ಮಾಣಗೊಂಡಿವೆ. ಕ್ರಿ.ಶ.೧೦೨೬ರ ಕಲ್ಯಾಣಚಾಲುಕ್ಯರ ೨ನೇ ಜಯಸಿಂಹನ ಕಾಲದ ಅಸುಂಡಿ ಶಾಸನವೊಂದು ಭೋಗೇಶ್ವರ ದೇವರಿಗೆ ಭೂದಾನ ನೀಡಿದ ವಿವರವನ್ನು ತಿಳಿಸುತ್ತದೆ.[೨೦] ಮತ್ತು ಕ್ರಿ.ಶ.೧೦೫೩ರ ೧ನೇ ಸೋಮೇಶ್ವರನ ಶಾಸನವು ಸೋಮೇಶ್ವರದೇವರಿಗೆ ಭೂದಾನವನ್ನು ಮಾಡಿದ ವಿವರವನ್ನು ತಿಳಿಸುತ್ತದೆ.[೨೧] ಆದರೆ ಇಲ್ಲಿ ಭೋಗೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು ಇರುವುದಿಲ್ಲ. ಇಲ್ಲಿ ಒಂದು ಈಶ್ವರ ದೇವಾಲಯ ಮಾತ್ರ ಇರುತ್ತದೆ. ಭೋಗೇಶ್ವರ, ಸೋಮೇಶ್ವರ ಇಂದಿನ ಈಶ್ವರ ದೇವಾಲಯ ಒಂದೇ ಇರಬಹುದು. ಈ ದೇವಾಲಯ ಬಹಳಷ್ಟು ಜೀರ್ಣೋದ್ಧಾರವಾಗುತ್ತ ಬಂದಿರುತ್ತದೆ. ಈ ಗ್ರಾಮವನ್ನು ಪಸಲುಂಡಿ, ಎಲೆಪಸುಂಡಿ ಎಂದು ಮೊದಲಿಗೆ ಕರೆಯುತ್ತಿದ್ದುದಾಗಿ ತಿಳಿದುಬುತ್ತದೆ.

ಕ್ರಿ.ಶ.೧೧೧೯ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು ಎಲೆಶಿರೂರಿನಲ್ಲಿದ್ದು[೨೨] ಈ ದೇವಾಲಯದಲ್ಲಿ ಕ್ರಿ.ಶ.೧೧೪೪ರ ೨ನೇ ಜಗದೇಕಮಲ್ಲನ ಶಾಸನ,[೨೩] ಮತ್ತು ಕ್ರಿ.ಶ.೧೧೬೭ರ ಬಿಜ್ಜಳನ ಶಾಸನ ಇರುತ್ತವೆ.[೨೪] ಇವು ಭೋಗೇಶ್ವರ ದೇವಾಲಯಕ್ಕೆ ವಿವಿಧ ದಾನಗಳನ್ನು ನೀಡಿದ ಬಗ್ಗೆ ತಿಳಿಸುತ್ತವೆ. ಈ ದೇವಾಲಯವನ್ನು ಇಂದು ಜೋಡಿದೇವಾಲಯಗಳೆಂದು ಕರೆಯುತ್ತಾರೆ. ಇದರಲ್ಲಿ ಶಿವಲಿಂಗವಿದ್ದು ಅದನ್ನು ಸ್ಥಳೀಯರು ರಾಮಲಿಂಗ ಎಂದು ಕರೆಯುತ್ತಾರೆ. ಈ ದೇವಾಲಯವು ವಾಸ್ತುಶಿಲ್ಪ ದೃಷ್ಟಿಯಿಂದ ಗಮನಾರ್ಹವಾದುದಾಗಿದೆ.

ಕ್ರಿ.ಶ.೯೪೬ರ ರಾಷ್ಟ್ರಕೂಟರ ೩ನೇ ಕೃಷ್ಣನ ಕಾಲದ ಶಾಸನವು ಕುರ್ತುಕೋಟೆಯಲ್ಲಿದ್ದು, ಇದು ಮೂಲಸ್ಥಾನ ದೇವರಿಗೆ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨೫] ಕ್ರಿ.ಶ.೧೦೮೨ರ ೬ನೇ ವಿಕ್ರಮಾದಿತ್ಯನ ಶಾಸನವು[೨೬] ದಾಸೇಶ್ವರ ದೇವರಿಗೆ ನೀಡಿದ ದಾನವನ್ನು ಮತ್ತು ಇದೇ ದೊರೆಯ ಕ್ರಿ.ಶ.೧೦೮೭ರ ಶಾಸನವು[೨೭] ವಿಷ್ಣುಕೇಶವದೇವರಿಗೆ ಬಿಟ್ಟ ಭೂದಾನವನ್ನು ಮತ್ತು ಇದೇ ಕ್ರಿ.ಶ.೧೦೮೭ರ ಮತ್ತೊಂದು ಶಾಸನವು[೨೮] ಜರಗರ ಡೋಣಿ ಸಾಸಿರ್ವರು ದಾಸೇಶ್ವರ ದೇವರಿಗೆ ದಾನ ನೀಡಿದ ಬಗ್ಗೆ ಮತ್ತು ಕ್ರಿ.ಶ.೧೧೨೬ರ ಇದೇ ಅರಸನ ವಿರುಪಾಕ್ಷದೇವಾಲಯದ ಕಂಬದಲ್ಲಿರುವ ಶಾಸನವು[೨೯] ಕೇಶಿರಾಜನು ಇದೇ ದೇವರಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಈ ದೇವಾಲಯವು ಇಂದಿಗೂ ಇದೇ ಹೆಸರಿನಿಂದ ಕರೆಯಲ್ಪಡುತ್ತಿದೆ. ಈ ದೇವಾಲಯ ಶಿಥಿಲಾವಸ್ಥೆಯಲ್ಲಿದೆ. ಇಲ್ಲಿ ದಾಸೇಶ್ವರ ದೇವಸ್ಥಾನ

ಮತ್ತು ವಿಷ್ಣುಕೇಶವ ದೇವಾಲಯಗಳು ಇರುವುದಿಲ್ಲ. ಬದಲಿಗೆ ಈಶ್ವರ ಮತ್ತು ನರಸಿಂಹ ದೇವಾಲಯಗಳು ಇರುತ್ತವೆ. ದಾಸೇಶ್ವರ ಇಂದಿನ ಈಶ್ವರ ದೇವಾಲಯವಾಗಿ, ವಿಷ್ಣುಕೇಶವ ದೇವಾಲಯ ನರಸಿಂಹ ದೇವಾಲಯವಾಗಿ ಬದಲಾಗಿರುವುದನ್ನು ನೋಡಬಹುದು. ಇನ್ನು ಕ್ರಿ.ಶ.೧೧೩೮ರ ಶಾಸನವು[೩೦] ದೇವರ ನಂದಾದೀವಿಗೆಗೆ ಬಿಟ್ಟ ದಾನವನ್ನು ತಿಳಿಸುತ್ತದೆ. ಆದರೆ ಶಾಸನ ಉಲ್ಲೇಖಿತ ದೇವಾಲಯಗಳ ಹೆಸರು ಬದಲಾಗಿರುವುದನ್ನು ನಾವು ಇಲ್ಲಿ ಗಮನಿಸಬಹುದು.

ಗದಗಿನಲ್ಲಿರುವ ವೀರನಾರಾಯಣ ದೇವಾಲಯದ ಪ್ರಾಕಾರ, ರಂಗಮಂಟಪ, ಬಾವಿ, ಇಲ್ಲೆಲ್ಲ ಸುಮಾರು ೨೮-೩೦ ಶಾಸನಗಳಿದ್ದು, ಇವು ರಾಷ್ಟ್ರಕೂಟರ ನಿರುಪಮ, ಕಲ್ಯಾಣಚಾಲುಕ್ಯರ ಇರಿವಬೆಡಂಗ, ೬ನೇ ವಿಕ್ರಮಾದಿತ್ಯ, ೧, ೩, ಮತ್ತು ೪ನೇ ಸೋಮೇಶ್ವರರು, ಕಲಚುರಿಗಳಾದ ಬಿಜ್ಜಳ, ಸಂಕಮ, ಯಾದವರ ಬಿಲ್ಲಮ, ಸಿಂಗಣ, ಹೊಯ್ಸಳರ ೨ನೇ ಬಲ್ಲಾಳ, ವಿಜಯನಗರದ ಕೃಷ್ಣದೇವರಾಯ, ಅಚ್ಯುತರಾಯ ಇವರ ಶಾಸನಗಳು ದೊರೆಯುತ್ತವೆ. ತ್ರಿಕೂಟೇಶ್ವರ ದೇವಾಲಯದಲ್ಲಿ ಸುಮಾರು ೬ಶಾಸನಗಳಿದ್ದು, ಇವುಗಳಲ್ಲಿ ಬಹುತೇಕ ಶಾಸನಗಳು ತ್ರಿಕೂಟೇಶ್ವರ ದೇವರಿಗೆ ನೀಡಿದ ದಾನಗಳ ಬಗ್ಗೆ ತಿಳಿಸುತ್ತವೆ. ಅಲ್ಲದೆ ಈ ದೇವಾಲಯವು ಗದುಗಿನಲ್ಲಿರುವ ದೇವಾಲಯಗಳಲ್ಲಿ ಪ್ರಾಚೀನ ದೇವಾಲಯವಾಗಿದೆ. ಇದು ಇಂದಿಗೂ ಪೂಜೆಗೊಳ್ಳುತ್ತಿರುವ ದೇವಾಲಯವಾಗಿದೆ. ಆದರೆ ವೀರನಾರಾಯಣದೇವರಿಗೆ ದಾನಬಿಟ್ಟಿರುವ ಶಾಸನಗಳೇ ಇಲ್ಲ. ಕ್ರಿ.ಶ.೧೦೩೭ರ ಶಾಸನವು[೩೧] ದೋಯಿಯಪ್ಪರ್ಗಡೆ ಎಂಬ ಅಧಿಕಾರಿ ಬಾರನಾರಾಯಣ ದೇವಾಲಯ ನಿರ್ಮಿಸಿದ್ದರ ಬಗ್ಗೆ ತಿಳಿಸುತ್ತದೆ. ಆದ್ದರಿಂದ ಈಗ ಇರುವ ವೀರನಾರಾಯಣ ಗುಡಿಯೇ ಬಾರನಾರಾಯಣ ಗುಡಿಯಿರಬಹುದು.

ಕ್ರಿ.ಶ.೧೦೬೯ರ ಶಾಸನವು ಚಿಂಚಲಿಯಲ್ಲಿದ್ದು[೩೨] ಇದು ೨ನೇ ಸೋಮೇಶ್ವರನ ಕಾಲದ್ದಾಗಿದ್ದು, ಇದರಲ್ಲಿ ನಾಗೇಶ್ವರದೇವರಿಗೆ ಹೂದೋಟ ದಾನಮಾಡಿದ ಬಗ್ಗೆ ತಿಳಿಸುತ್ತದೆ. ಇಂದು ನಾಗೇಶ್ವರ ದೇವಾಲಯ ನಗರೇಶ್ವರ ದೇವಾಲಯವಾಗಿ ಮಾರ್ಪಟ್ಟಿದೆ. ಕ್ರಿ.ಶ.೧೦೮೪ರ ಇಲ್ಲಿಯ ಶಾಸನವು[೩೩] ಮಲ್ಲಿಕಾರ್ಜುನದೇವರಿಗೆ ಭೂದಾನ ಮಾಡಿದ ಬಗ್ಗೆ ತಿಳಿಸುತ್ತದೆ. ಇಂದಿಗೂ ಈ ದೇವಾಲಯವನ್ನು ಕಾಣಬಹುದು. ಇಂದು ಈ ದೇವಾಲಯವು ಶಿಥಿಲಾವಸ್ಥೆಯಲ್ಲಿದೆ.

ಕ್ರಿ.ಶ.೯೬೯ರ ಶಾಸನವು[೩೪] ರಾಮೇಶ್ವರ ದೇವರಿಗೆ ಶಿಕ್ಷಣಕ್ಕಾಗಿ ನೀಡಿದ ದಾನದ ಬಗ್ಗೆ ತಿಳಿಸುತ್ತದೆ. ಕ್ರಿ.ಶ.೧೨೧೫ರ ಶಾಸನವು[೩೫] ಮಹಾಬಳೇಶ್ವರದೇವರಿಗೆ ನೀಡಿದ ದಾನದ ಬಗ್ಗೆ ತಿಳಿಸುತ್ತದೆ. ಆದರೆ ಇಲ್ಲಿ ರಾಮೇಶ್ವರ ದೇವಾಲಯ ಮತ್ತು ಮಹಾಬಳೇಶ್ವರ ಹೆಸರಿನ ದೇವಾಲಯ ಇರುವುದಿಲ್ಲ.

ಬೆಂತೂರಿನ ಕ್ರಿ.ಶ.೧೨೦೦[೩೬]ಮತ್ತು ೧೨೦೫ರ[೩೭] ಶಾಸನಗಳು ಸ್ವಯಂಭೂದೇವರಿಗೆ ಸುವರ್ಣದಾನಮಾಡಿದ ಉಲ್ಲೇಖವಿದೆ. ಸ್ವಯಂಭೂದೇವಾಲಯವೇ ಇಂದಿನ ಶಂಭುಲಿಂಗ ದೇವಾಲಯವಾಗಿರುವುದು ತಿಳಿದುಬರುತ್ತದೆ.

ಕ್ರಿ.ಶ.೧೧೫೭ರ ಮಲ್ಲಸಮುದ್ರದ ಶಾಸನವು[೩೮] ಮೂಲಸ್ಥಾನದೇವರಿಗೆ ನೀಡಿದ ಭೂದಾನದ ಬಗ್ಗೆ ತಿಳಿಸುತ್ತದೆ. ಅಂದಿನ ಮೂಲಸ್ಥಾನ ದೇವಾಲಯವೇ ಇಂದಿನ ಈಶ್ವರದೇವರ ಗುಡಿ.

ಮುಳಗುಂದದಲ್ಲಿ ನರಸಿಂಹಭಟ್ಟರು ನಾರಾಯಣದೇವರಿಗೆ ಮೂರು ಜಲಪಾತ್ರೆಗಳನ್ನು ದಾನಮಾಡಿದ ವಿಷಯ ತಿಳಿಸುವ ಶಾಸನವಿದೆ.[೩೯] ಅಂದಿನ ನಾರಾಯಣ ದೇವಾಲಯವೇ ಇಂದಿನ ನಗರೇಶ್ವರ ದೇವಾಲಯ. ವಿಧುರೇಶ್ವರ ದೇವಾಲಯಕ್ಕೆ ಭೂದಾನ ಮಾಡಿದ ಶಾಸನ[೪೦] ಮತ್ತು ಕ್ರಿ.ಶ.೧೧೭೮ರಲ್ಲಿ[೪೧] ಮಹಾಜನರು ಇದೇ ದೇವರಿಗೆ ದಾನಮಾಡಿದ ಶಾಸನವು ದೊರೆಯುತ್ತದೆಯಾದರೂ ಈ ಹೆಸರಿನ ದೇವಾಲಯ ಇರುವುದಿಲ್ಲ. ಅಲ್ಲದೆ ತೆಲ್ಲಿಗೇಶ್ವರ, ಸ್ವಯಂಭೂದೇವಾಲಯ ಮತ್ತು ಸಿದ್ಧಯ್ಯದೇವಸ್ಥಾನದ ಪೂಜೆಗಾಗಿ ಸಿದ್ಧರಾಮನಿಗೆ ದಾನಮಾಡಿದ ಶಾಸನಗಳು ಇದ್ದು,[೪೨] ಆದರೆ ತೆಲ್ಲಿಗೇಶ್ವರ ಎಂಬ ಹೆಸರಿನ ದೇವಾಲಯವಿರುವುದಿಲ್ಲ. ಕುಂಬಸಲಿಂಗೇಶ್ವರ, ಸೋಮೇಶ್ವರ ಮತ್ತು ಸಿದ್ದಯ್ಯ (ಸಿದ್ಧೇಶ್ವರ) ದೇವಾಲಯಗಳು ಇಂದಿಗೂ ಇವೆ.

ಲಕ್ಕುಂಡಿಯ ಕ್ರಿ.ಶ.೧೦೭೫ರ ಶಾಸನವು[೪೩]ಮರುಳಿಮಯ್ಯನು ಮರುಳೇಶ್ವರದೇವರ ಪ್ರತಿಷ್ಠಾಪನೆ ಮಾಡಿ ಆ ದೇವಾಲಯಕ್ಕೆ ದಾನ ಮಾಡಿದ ವಿಷಯ ತಿಳಿಸುವ ಶಾಸನವಿದ್ದು, ಈ ಹೆಸರಿನ ದೇವಾಲಯ ಇಂದು ಮಲ್ಲಿಕಾರ್ಜುನ ದೇವಾಲಯ ಎಂದು ಕರೆಯಲಾಗುತ್ತದೆ. ಕ್ರಿ.ಶ.೧೦೭೬ರ ಶಾಸನವು[೪೪] ಕಲಿದೇವಸ್ವಾಮಿಗೆ ಸುವರ್ಣದಾನ ಮಾಡಿದ ವಿಷಯ ತಿಳಿಸುತ್ತದೆ. ಆದರೆ ಈ ಹೆಸರಿನ ದೇವಾಲಯ ಇರುವುದಿಲ್ಲ. ಈ ಶಾಸನವು ತಿಳಿಸುವ ಮಲ್ಲಿಕಾರ್ಜುನ ದೇವಾಲಯ ಮೊದಲಿಗೆ ಕಲಿದೇವಸ್ವಾಮಿ ದೇವಾಲಯವಾಗಿರಬಹುದು. ಕ್ರಿ.ಶ.೧೧೫೨ರ ಕಲ್ಯಾಣಚಾಲುಕ್ಯರ ೩ನೇ ತೈಲನ ಶಾಸನ[೪೫] ಕಾಶಿವಿಶ್ವನಾಥ ದೇವಾಲಯದ ತೊಲೆಯಮೇಲಿದ್ದು, ಇದು ತ್ರಿಭುವನ ಕೇಶವದೇವಾದಿಗಳಿಂದ ಕವಿತಾಳೇಶ್ವರ ದೇವರಿಗೆ ಭೂಮಿ ಮತ್ತು ಸುವರ್ಣದಾನ ಮಾಡಿದ ಬಗ್ಗೆ ತಿಳಿಸುತ್ತದೆ. ಆದರೆ ಇಲ್ಲಿ ಕವಿತಾಳೇಶ್ವರ ಹೆಸರಿನ ದೇವಾಲಯ ಇರುವುದಿಲ್ಲ. ಇದು ಕಾಶಿ ವಿಶ್ವನಾಥ ದೇವಾಲಯವಾಗಿದೆ.

ಕ್ರಿ.ಶ.೧೧೭೪ರ ಕಲಚುರಿ ವಂಶದ ಸೋವಿದೇವನ ಕಾಲದ ಶಾಸನವು[೪೬] ಚಂದ್ರಮೌಳೇಶ್ವರ ಗುಡಿಯ ತೊಲೆಯಲ್ಲಿದ್ದು, ಇದು ಕೇಶವಾದಿತ್ಯದೇವರ ನಂದಾದೀವಿಗೆಗೆ, ಕ್ರಿ.ಶ.೧೧೮೦ರ ೨ ಶಾಸನಗಳು[೪೭] ಕಲ್ಯಾಣ ಚಾಲುಕ್ಯ ದೊರೆ ೪ನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು, ಬಸವರಸ ಸಿದ್ಧಯ್ಯಾದಿಗಳು ಮತ್ತು ಆಯಿಚಿಸೆಟ್ಟಿಯಾದಿಗಳಿಂದ ಇದೇ ದೇವರಿಗೆ ಸುವರ್ಣ ದಾನ ಮಾಡಿದ ಬಗ್ಗೆ,

ಕ್ರಿ.ಶ.೧೧೭೯ರ ಇದೇ ವಂಶದ ಸಂಕಮನ ಕಾಲದ ಶಾಸನವು[೪೮] ವೀರಭದ್ರ ದೇವಾಲಯದಲ್ಲಿದ್ದು, ಅದು ೪ನೇ ಸೋಮೇಶ್ವರ ಮತ್ತು ಶಿಲ್ಪಿಗಳು ಇದೇ ಪ್ರಸನ್ನಕೇಶವದೇವರಿಗೆ ನೀಡಿದ ದಾನವನ್ನು, ಕ್ರಿ.ಶ.೧೧೮೪-೮೫ರ ಇನ್ನೊಂದು ಶಾಸನ[೪೯] ಇದೇ ದೇವರಿಗೆ ದಾನಮಾಡಿದ ಬಗ್ಗೆ ತಿಳಿಸುತ್ತದೆ. ಆದರೆ ಈ ಊರಿನಲ್ಲಿ ಕೇಶವ ದೇವಾಲಯ ಇರುವುದಿಲ್ಲ.

ಕ್ರಿ.ಶ.೧೧೮೬ರ ೪ನೇ ಸೋಮೇಶ್ವರನ ಕಾಲದ ಶಾಸನ[೫೦] ಶಂಕರಶೆಟ್ಟಿ ನನ್ನೇಶ್ವರ ದೇವರಿಗೆ ಸುವರ್ಣದಾನ ಮತ್ತು ೧೨ನೇ ಶತಮಾನದ ಶಾಸನವೊಂದು[೫೧] ಇದೇ ದೇವಾಲಯಕ್ಕೆ ಅಂಗಡಿಯನ್ನು ದಾನವಾಗಿ ಕೊಟ್ಟ ಬಗ್ಗೆ, ಮತ್ತೊಂದು ಶಾಸನ[೫೨] ಈ ದೇವಾಲಯದ ಕಂಬಗಳ ನಿರ್ಮಾಣದ ಬಗ್ಗೆ ತಿಳಿಸುತ್ತವೆ. ಈ ದೇವಾಲಯವು ಇಂದಿಗೂ ಕೂಡ ಗ್ರಾಮದ ದಕ್ಷಿಣಕ್ಕೆ ಪೂರ್ವಾಭಿಮುಖವಾಗಿ ಇದ್ದು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಂದೆ ತೆರೆದ ಮುಖ ಮಂಟಪವನ್ನು ಹೊಂದಿದ್ದು ಸಾಧಾರಣ ಸ್ಥಿತಿಯಲ್ಲಿದೆ.

ಕ್ರಿ.ಶ.೧೧೮೮ರ ಶಾಸನವೊಂದು[೫೩] ಭರತೇಶ್ವರ ದೇವಾಲಯದ ಶಿಲ್ಪಿಗಳಿಗೆ ಸುವರ್ಣದಾನ ಮಾಡಿದ ಬಗ್ಗೆ ತಿಳಿಸುತ್ತದೆ. ಆದರೆ ಇಲ್ಲಿ ಈಶ್ವರ ದೇವಾಲಯವಿದ್ದು, ಭರತೇಶ್ವರ ದೇವಾಲಯವೆಂದು ಕರೆಯುವ ದೇವಾಲಯವಿಲ್ಲ. ಭರತೇಶ್ವರ ದೇವಾಲಯವೇ ಇಂದು ಈಶ್ವರ ದೇವಾಲಯವಾಗಿದೆ.

ಕ್ರಿ.ಶ.೧೨೦೨ರ ಹೊಯ್ಸಳದೊರೆ ೨ನೇ ಬಲ್ಲಾಳನ ಶಾಸನ[೫೪] ಮಧುಸೂಧನ ದೇವರಿಗೆ ಸುವರ್ಣದಾನದ ಬಗ್ಗೆ ಮತ್ತು ಇದೇ ಕಲ್ಲಿನಲ್ಲಿ ಯಾದವದೊರೆ ಸಿಂಘಣನ ಕ್ರಿ.ಶ.೧೨೨೩ರ ಶಾಸನ[೫೫] ವ್ಯಾಪಾರಿಗಳಿಂದ ಇದೇ ದೇವರಿಗೆ ಸುವರ್ಣದಾನ ಮಾಡಿದ ಶಾಸನವು ಕಾಶಿ ವಿಶ್ವನಾಥ ದೇವಾಲಯದ ವೇದಿಕೆಯಲ್ಲಿದೆ. ಆದರೆ ಮಧುಸೂಧನ ಹೆಸರಿನ ದೇವಾಲಯ ಇರುವುದಿಲ್ಲ.

ಕ್ರಿ.ಶ.೧೧೭೩ರ ಕಲಚುರಿ ಸೋವಿದೇವನ ಕಾಲದ ಶಾಸನವು[೫೬] ಈಶ್ವರ ಗುಡಿಯ ಕಂಬದಲ್ಲಿದ್ದು, ಇದು ಹರ್ತಿಯ ಪನ್ನೀರ್ವರು ಗೌಂಡರಿಂದ ಗೋಯಿದೇಶ್ವರ ದೇವಾಲಯಕ್ಕೆ ದಾನ ಬಿಟ್ಟ ಬಗ್ಗೆ ತಿಳಿಸುತ್ತದೆ. ಕ್ರಿ.ಶ.೧೨೩೬ರ ಯಾದವ ಸಿಂಘಣನ ಶಾಸನ[೫೭] ಹರ್ತಿಯ ಈಶ್ವರ ಗುಡಿಯ ಇನ್ನೊಂದು ಕಂಬದಲ್ಲಿದ್ದು, ಹರ್ತಿಯ ೧೨ ಗೌಡರು, ಉಗುರಮುನ್ನೂರ್ವರು ಹಾಗೂ ಡೋಣಿ ಸಾಸಿರ್ವರಿಂದ ಮೂಲಸ್ಥಾನದೇವರಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತವಾದರೂ ಕೂಡ ಇಂದು ಇಲ್ಲಿ ಈಶ್ವರ ದೇವಾಲಯ ಇರುತ್ತದೆ. ಈ ದೇವಾಲಯವೇ ಗೋಯಿದೇಶ್ವರ ದೇವಸ್ಥಾನವಿರಬಹುದು.

ಕ್ರಿ.ಶ.೯೯೪-೯೫ರ ಕಲ್ಯಾಣ ಚಾಲುಕ್ಯ ೨ನೇ ತೈಲನ ಶಾಸನ[೫೮] ಹೊಸೂರಿನಲ್ಲಿದ್ದು, ಇದು ಕೊರಲಗೌಡನಿಂದ ಮೂಲಸ್ಥಾನದೇವರಿಗೆ ಬಿಟ್ಟ ಭೂದಾನವನ್ನು, ಕ್ರಿ.ಶ.೧೧೪೮ರ ೨ನೇ ಜಗದೇಕಮಲ್ಲನ ಕಾಲದ ಶಾಸನ[೫೯] ಹೊಲ್ಲಗೌಡನು ಮೂಲಸ್ಥಾನ ದೇವರಿಗೆ ಹೂದೋಟವನ್ನು, ಸುಮಾರು ೧೨ನೇ ಶತಮಾನದ ಶಾಸನವೊಂದು[೬೦] ಇದೇ ದೇವರಿಗೆ ಬಿಟ್ಟ ದಾನವನ್ನು, ಕ್ರಿ.ಶ.

೧೧೫೫ರ ೨ನೇ ಜಗದೇಕಮಲ್ಲನ ಶಾಸನ[೬೧] ಮೂಲಸ್ಥಾನ ದೇವಾಲಯದ ಗಂಗರಾಶಿಪಂಡಿತರಿಗೆ ಸತ್ರಕ್ಕಾಗಿ ನೀಡಿದ ದಾನದ ಬಗ್ಗೆ ತಿಳಿಸುತ್ತದೆ. ಈ ೪ ಶಾಸನಗಳು ಮೂಲಸ್ಥಾನ ದೇವಾಲಯದ ಬಗ್ಗೆ ತಿಳಿಸುತ್ತವೆ. ಆದರೆ ಇಲ್ಲಿ ಈಶ್ವರ ದೇವಾಲಯವಿದ್ದು ಇದನ್ನೇ ಮೊದಲು ಮೂಲಸ್ಥಾನದೇವರೆಂದು ಕರೆಯಲಾಗಿದೆ.

ಕ್ರಿ.ಶ.೧೧೦೩ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನ[೬೨] ನಾಕಿಗೌಡನಿಂದ ಮೊರಕೇಶ್ವರ ದೇವರಿಗೆ ದಾನ, ಕ್ರಿ.ಶ.೧೧೪೪ರ ೨ನೇ ಜಗದೇಕಮಲ್ಲನ ಕಾಲದ ಶಾಸನ[೬೩] ಸಾಮಿಯಣ್ಣ ನಾಯಕನಿಂದ ಸುಂಕದಾನ, ಕ್ರಿ.ಶ.೧೧೫೫ರ ೩ನೇ ತೈಲನ ಕಾಲದ ಶಾಸನ[೬೪] ಹೊಲ್ಲಗೌಡಾದಿಗಳಿಂದ ಈ ದೇವಾಲಯಕ್ಕೆ ದಾನ, ಕ್ರಿ.ಶ.೧೧೮೬ರ ೪ನೇ ಸೋಮೇಶ್ವರನ ಕಾಲದ ಶಾಸನ[೬೫] ಬಡಗಿ ಕಲ್ಲೋಜ ಈ ದೇವರಿಗೆ ಬಿಟ್ಟದಾನ ಮತ್ತು ಕ್ರಿ.ಶ.೧೨೦೭ರ ಹೊಯ್ಸಳ ೨ನೇ ಬಲ್ಲಾಳನ ಕಾಲದ ಶಾಸನ[೬೬] ಈ ಅರಸನ ಪ್ರಧಾನಮಂತ್ರಿ ಚಿಕ್ಕನರಸಿಂಹನು ಈ ದೇವರಿಗೆ ನೀಡಿದ ದಾನಗಳ ಬಗ್ಗೆ ತಿಳಿಸುತ್ತದೆ. ಆದರೆ ಮೊರಕೇಶ್ವರ ದೇವಾಲಯ ಎಂದು ಕರೆಯುವ ದೇವಾಲಯವಿಲ್ಲ. ಇಂದು ಇದರ ಹೆಸರು ತ್ರಿಕುಟೇಶ್ವರ ಎಂದು ಬದಲಾಗಿರುತ್ತದೆ.

ಕ್ರಿ.ಶ.೧೧೨೨ರ ೬ನೇ ವಿಕ್ರಮಾದಿತ್ಯನ ಶಾಸನ[೬೭] ಬೆಳ್ಳಟ್ಟಿ ಸಮೀಪ ಇರುವ ಕಪ್ಪಲಟ್ಟಿ ಇಲ್ಲಿ ಹನುಮಂತ ದೇವರ ಗುಡಿಯಲ್ಲಿದ್ದು, ಇದು ಯಾದವ ವಂಶದ ಮಹಾಮಂಡಳೇಶ್ವರ ಪೆರ್ಮಾಡಿ ಅರಸರ ವಿನಂತಿಯ ಮೇರೆಗೆ ಪೆರ್ಗಡೆ ಚಾವಿಸೆಟ್ಟಿಯು ಕಪಿಲೇಶ್ವರ ದೇವರಿಗೆ ಭೂದಾನವನ್ನು ನೀಡುತ್ತಾನೆ. ಇಲ್ಲಿ ಶಾಸನ ಉಲ್ಲೇಖಿತ ಕಪಿಲೇಶ್ವರ ದೇವಾಲಯ ಇಂದು ಪರಿವರ್ತನೆಯಾಗಿ ಹನುಮಂತ ದೇವಾಲಯವಾಗಿದೆ.

ಕ್ರಿ.ಶ.೧೩ನೇ ಶತಮಾನದ ಹೊಯ್ಸಳ ದೊರೆ ೨ನೇ ನರಸಿಂಹದೇವನ ಕಾಲದ ಶಾಸನವು[೬೮] ಬೆಳ್ಳಟ್ಟಿಯ ಮಾನಪ್ಪ ಪತ್ತಾರರ ಮನೆಯ ಹಿತ್ತಲಲ್ಲಿ ಇದ್ದು, ಮಲ್ಲಿಗಗೌಡನಿಂದ ಮಾಧವದೇವರ ಸ್ಥಾಪನೆ ಮತ್ತು ಭೂದಾನವನ್ನು ತಿಳಿಸುತ್ತದೆ. ಆದರೆ ಈ ಹೆಸರಿನ ದೇವಾಲಯ ಬೆಳ್ಳಟ್ಟಿಯಲ್ಲಿ ಈಗ ಇರುವುದಿಲ್ಲ.

ಕ್ರಿ.ಶ. ಸುಮಾರು ೧೫ನೇ ಶತಮಾನದ ಶಾಸನ[೬೯] ಅಕ್ಕೂರವರ ಮನೆಯ ಹಿತ್ತಲಲ್ಲಿದ್ದು, ಇದು ಮಲ್ಲಿಕಾರ್ಜುನ ದೇವಾಲಯಕ್ಕೆ ಬಿಟ್ಟ ಭೂಮಿಯ ಮೇರೆಗಳನ್ನು ತಿಳಿಸುತ್ತದೆ. ಆದರೆ ಈ ಮಲ್ಲಿಕಾರ್ಜುನ ದೇವಾಲಯ ಈಗ ಕಂಡುಬರುವುದಿಲ್ಲ.

ಕ್ರಿ.ಶ.೧೧೫೧ರ ತ್ರಿಭುವನಮಲ್ಲನ ಕಾಲದ ಶಾಸನ[೭೦] ಎಳವತ್ತಿಯಲ್ಲಿದ್ದು, ಇದು ಈ ಗ್ರಾಮದ ೧೨೦ ಮಹಾಜನರು ಗುಂಡೇಶ್ವರ ದೇವರಿಗೆ ಬಿಟ್ಟ ಭೂದಾನವನ್ನು, ಕ್ರಿ.ಶ.೧೧೫೯ರ ಶಾಸನವು[೭೧] ಮೂರನೇ ತೈಲನ ದಂಡನಾಯಕ ಹರಿದೇವನಿಂದ ಈ ದೇವರಿಗೆ ಉಮ್ಮಚ್ಚಿಗೆ ಗ್ರಾಮವನ್ನು, ಕ್ರಿ.ಶ.೧೧೯೫ರ ಬಿಜ್ಜಳನ ಕಾಲದ ಶಾಸನ[೭೨] ಮಾಗಡಿಯ ನೀಲಕಂಠದೇವರ ಶಿಷ್ಯ ಸೀಮನಬಲ್ಲಯ್ಯನು

ಈ ದೇವರಿಗಾಗಿ ಪುಷ್ಕರಣಿ ನಿರ್ಮಾಣ ಮಾಡಿರುವುದನ್ನು, ಸುಮಾರು ೧೨ನೇ ಶತಮಾನದ ಶಾಸನ[೭೩] ಸುಸಿಕಲ್ಲರಶಂಕರಯ್ಯನು ಈ ದೇವರಿಗೆ ನೆಲ್ಲಕ್ಕಿಕಂಬ ನಿರ್ಮಿಸಿದ ಬಗ್ಗೆ ತಿಳಿಸುತ್ತದೆ. ಈ ದೇವಾಲಯ ಇಂದಿಗೂ ಇದ್ದು ಇದನ್ನು ಗುಂಡಲಿಂಗ ದೇವಾಲಯ ಎಂದು ಕರೆಯುತ್ತಾರೆ.

ಇದೇ ಗ್ರಾಮದಲ್ಲಿ ಕ್ರಿ.ಶ.೧೧೫೮ರ ಬಿಜ್ಜಳನ ಕಾಲದ ಶಾಸನವು[೭೪] ನಾಗೇಶ್ವರ ದೇವಾಲಯದ ಆಚಾರ್ಯ ದೇವರಾಶಿಪಂಡಿತರಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಆದರೆ ಇಲ್ಲಿ ನಾಗೇಶ್ವರ ದೇವಾಲಯ ಕಂಡುಬರುವುದಿಲ್ಲ.

ಕ್ರಿ.ಶ.ಸುಮಾರು ೧೦ನೇ ಶತಮಾನದ ೨ನೇ ಮಾರಸಿಂಹನ ಕಾಲದ ಶಾಸನವು[೭೫] ಲಕ್ಷ್ಮೇಶ್ವರದ ಬಸಿಬಣದ ಬ್ರಹ್ಮದೇವರ ಗುಡಿಯ ಹತ್ತಿರವಿದ್ದು, ಇದು ಸೆಟ್ಟಿಯೊಬ್ಬನು ಬೀರನಾರಾಯಣದೇವರಿಗೆ ಭೂಮಿ ಮತ್ತು ಸುಂಕ ದಾನವನ್ನು ಮಾಡಿದ ಬಗ್ಗೆ ತಿಳಿಸುತ್ತದೆ. ಆದರೆ ಬೀರನಾರಾಯಣ ದೇವಾಲಯ ಇರುವುದಿಲ್ಲ ವೀರನಾರಾಯಣ ದೇವಾಲಯವಿರುತ್ತದೆ.

ಕ್ರಿ.ಶ.೧೦೭೭ರ ೨ನೇ ಸೋಮೇಶ್ವರನ ಕಾಲದ ಶಾಸನವು[೭೬] ಪುಲಿಗೆರೆಯ ದೇವಾಲಯಕ್ಕೆ ಪುನರ್ದತ್ತಿ, ಕ್ರಿ.ಶ.೧೧೦೨ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನ[೭೭] ಮಾಧವ ಭಟ್ಟನು ಸೋಮನಾಥ ದೇವರಿಗೆ ಬಿಟ್ಟ ಸುಂಕದಾನವನ್ನು, ಕ್ರಿ.ಶ.೧೧೦೭ರ ಶಾಸನ[೭೮] ಮಹಾಮಂಡಳೇಶ್ವರ ತೈಲದೇವನಿಂದ ಈ ದೇವಾಲಯಕ್ಕೆ ಕಲ್ಲವಣ ಗ್ರಾಮದಾನ ಮತ್ತು ಹಣದಾನ, ಕ್ರಿ.ಶ.೧೧೨೨ರ ಶಾಸನವು[೭೯] ನೂರಿಪ್ಪತ್ತು ಮಹಾಜನರಿಂದ ದಂಡನಾಯಕ ನಾಗವರ್ಮಯ್ಯನು ಭೂಮಿಯನ್ನು ಕೊಂಡು ಮಾಡಿದ ದಾನವನ್ನು, ಕ್ರಿ.ಶ.೧೨೧೫ರ ಶಾಸನ[೮೦] ಮತ್ತು ಮತ್ತೊಂದು ಶಾಸನ[೮೧] ದಾನಬಿಟ್ಟ ಬಗ್ಗೆ, ಕ್ರಿ.ಶ.೧೧೨೮ರ ೩ನೇ ಸೋಮೇಶ್ವರನ ಕಾಲದ ಶಾಸನವು[೮೨] ಮಹಾಮಂಡಳೇಶ್ವರ ಜಯಕೇಶಿದೇವನು ಬಿಟ್ಟ ದಾನವನ್ನು, ಕ್ರಿ.ಶ.೧೧೩೮ರ ಶಾಸನವು[೮೩] ಇದೇ ದಂಡನಾಯಕನು ಇದೇ ದೇವರಿಗೆ ನಿಟ್ಟೂರ ಗ್ರಾಮದಾನವನ್ನು, ಕ್ರಿ.ಶ.೧೧೪೭ರ ೨ನೇ ಜಗದೇಕಮಲ್ಲನ ಕಾಲದ ಶಾಸನವು[೮೪] ದಂಡನಾಯಕ ಮೇಚರಸನು ಈ ದೇವಾಲಯಕ್ಕೆ ಬಿಟ್ಟ ಭೂದಾನವನ್ನು, ಕ್ರಿ.ಶ.೧೩೫೩ರ ವಿಜಯನಗರ ಅರಸ ಸಾವಣ್ಣವಡೆಯನ ಕಾಲದ ಶಾಸನವು[೮೫] ಚಿಕ್ಕಕೆರೆಯ ನಾಯಕನಿಂದ ದೇವಾಲಯದ ಜೀರ್ಣೋದ್ಧಾರವನ್ನು, ಕ್ರಿ.ಶ.೧೩೯೨ರ ಶಾಸನವೊಂದು[೮೬] ಭೈರವದೇವನಿಂದ ಈ ದೇವಾಲಯದ ದಕ್ಷಿಣದ್ವಾರದ ಜೀರ್ಣೋದ್ಧಾರವನ್ನು, ಕ್ರಿ.ಶ.೧೪೩೨ರ ಶಾಸನವು[೮೭] ಸುಂಕದಾನವನ್ನು ಬಿಟ್ಟ ಬಗ್ಗೆ ತಿಳಿಸುತ್ತದೆ. ಸುಮಾರು ೧೧ ಶಾಸನಗಳು ಸೋಮೇಶ್ವರ ದೇವಾಲಯದ ಬಗ್ಗೆ ಉಲ್ಲೇಖಿಸುತ್ತವೆ. ಇದು ಪ್ರಾಚೀನ ದೇವಾಲಯವಾಗಿದ್ದು, ಕಾಲಕಾಲಕ್ಕೆ ತನ್ನ ವಿಸ್ತಾರವನ್ನು ಬೆಳೆಸಿಕೊಳ್ಳುತ್ತಾ, ರಾಜಮಹಾರಾಜರಿಂದ ಬಹಳಷ್ಟು ದಾನದತ್ತಿಗಳನ್ನು ಪಡೆಯುತ್ತಾ ಇಂದಿಗೂ ಉಳಿದು ಬಂದು ಪೂಜೆಗೊಳ್ಳುತ್ತಿರುವ ದೇವಾಲಯವಾಗಿದೆ.

ಕ್ರಿ.ಶ.೧೧೧೮ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು[೮೮] ಈ ಗ್ರಾಮದಲ್ಲಿದ್ದ ರಾಮೇಶ್ವರ ದೇವಾಲಯದ ಆಚಾರ್ಯರಾದ ಸಾಮವೇದಿಪಂಡಿತನಿಗೆ ದಾನಮಾಡಿದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ.೧೧೨೩ರ ಶಾಸನ[೮೯] ಈ ದೇವಾಲಯದಲ್ಲಿ ಕೌಮಾರ ವ್ಯಾಕರಣವನ್ನು ಭೋಧಿಸುತ್ತಿದ್ದ ಉಪಾಧ್ಯಾಯನಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಆದರೆ ರಾಮೇಶ್ವರ ಹೆಸರಿನ ದೇವಾಲಯ ಇರುವುದಿಲ್ಲ. ಈಶ್ವರ ದೇವಾಲಯವಿರುತ್ತದೆ.

ಕ್ರಿ.ಶ.೧೧೮೯ರ ಸಂಕಮನ ಕಾಲದ ಶಾಸನವು[೯೦] ಲಕ್ಷ್ಮಣೇಶ್ವರ ದೇವಾಲಯದ ಜಿರ್ಣೋದ್ಧಾರಕ್ಕಾಗಿ ತ್ರಿಲೋಚನಪಂಡಿತದೇವನಿಗೆ ದಾನ ಮಾಡಿದ್ದನ್ನು ತಿಳಿಸುತ್ತದೆ. ಇದು ತ್ರಿಕೂಟ ದೇವಾಲಯವಾಗಿದ್ದು, ಲಕ್ಷ್ಮಣೇಶ್ವರ ಎಂಬ ಹೆಸರಿನಿಂದಲೆ ಈ ಊರಿಗೆ ಲಕ್ಷ್ಮೇಶ್ವರ ಎಂಬ ಹೆಸರು ಬಂದಿದೆ ಎನ್ನಲಾಗುತ್ತದೆ.

ಕ್ರಿ.ಶ.೧೨೨೭ರ ಯಾದವದೊರೆ ಸಿಂಹಣನ ಕಾಲಕ್ಕೆ ಸೇರಿದ ಶಾಸನವು[೯೧] ಮೂರುಜಾವಿದೇವನಿಂದ ಕೇದಾರದೇವ ಮತ್ತು ಚಿಕ್ಕೇಶ್ವರ ದೇವರ ದೇವಾಲಯಗಳಿಗೆ ದಾನ ಮಾಡಿದ್ದನ್ನು ತಿಳಿಸುತ್ತದೆ. ಆದರೆ ಕೇದಾರದೇವ ದೇವಾಲಯ ಈಗ ಈಶ್ವರ ದೇವಾಲಯವೆಂದು ಕರೆಸಿಕೊಳ್ಳುತ್ತಿದೆ.

ಸಂಗಯ್ಯನಿಂದ ಸೋಮನಾಥ ದೇವಾಲಯದ ಆವರಣದಲ್ಲಿ ರೆಮ್ಮೇಶ್ವರ ದೇವಾಲಯ ನಿರ್ಮಾಣ ಮತ್ತು ಅದಕ್ಕೆ ಬಿಟ್ಟ ಭೂದಾನವನ್ನು ತಿಳಿಸುವ ಒಂದು ಶಾಸನವಿದ್ದು[೯೨] ಇಂದು ಇಲ್ಲಿ ರೆಮ್ಮೇಶ್ವರ ದೇವಾಲಯ ಇರುವುದಿಲ್ಲ.

ಕ್ರಿ.ಶ.೧೫೭೬ರ ಅಲಿದವಳಬಾದಶಾಹಿ ಒಡೆಯನ ಕಾಲದ ಶಾಸನವೊಂದು,[೯೩] ಮಲ್ಲಿಕಾರ್ಜುನದೇವರಿಗೆ ಗೌಡಗೆರೆ ಗ್ರಾಮದಾನ ಮಾಡಿದ ಬಗ್ಗೆ ತಿಳಿಸುತ್ತದೆ. ಇಂದಿಗೂ ಕೂಡ ಚಿಕ್ಕದಾದ ಒಂದು ಮಲ್ಲಿಕಾರ್ಜುನ ದೇವಾಲಯವಿದೆ.

ಕ್ರಿ.ಶ.೧೭೭೭ರ ಶಾಸನವು[೯೪] ಶಿರಹಟ್ಟಿಯ ಪಕೀರಸ್ವಾಮಿ ಮಠದಲ್ಲಿದ್ದು, ಇದು ಚನ್ನವೀರಸ್ವಾಮಿಯವರಿಗೆ ಬಿಟ್ಟ ದಾನದ ಬಗ್ಗೆ ತಿಳಿಸುತ್ತದೆ. ಇಂದು ಈ ಮಠವು ದೊಡ್ಡದಾಗಿ ಬೆಳೆದು ಜಿಲ್ಲೆಯಾದ್ಯಂತ ಹೆಸರು ಮಾಡಿದೆ.

ಕ್ರಿ.ಶ.೧೦೫೩ರ ೧ನೇ ಸೋಮೇಶ್ವರನ ಕಾಲದ ಶಾಸನವು[೯೫] ಸಾಸರವಾಡದ ಹನುಮಂತದೇವರ ಗುಡಿಯ ಎದುರು ಇದ್ದು, ಇದು ಇಂದ್ರಕೇಶಿ ಅರಸನ ವಿನಂತಿಯ ಮೇರೆಗೆ ಮಸಣಯ್ಯನಾಯಕನು ಉತ್ತರೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿ ಅದಕ್ಕೆ ಸಾಸಿರಾರವೆ ಗ್ರಾಮವನ್ನು ಗ್ರಾಮದಾನ ಮಾಡಿದ ಬಗ್ಗೆ ಉಲ್ಲೇಖವಿದೆ. ಆದರೆ ಉತ್ತರೇಶ್ವರ ದೇವಾಲಯವು ನಾಶವಾಗಿರುತ್ತದೆ.

ಕ್ರಿ.ಶ.೮೭೫ರ ರಾಷ್ಟ್ರಕೂಟದೊರೆ ೨ನೇ ಕೃಷ್ಣ (ಅಮೋಘವರ್ಷ ಬದ್ದೆಗ)ನ ಕಾಲದ ಶಾಸನವೊಂದು[೯೬] ಹೆಬ್ಬಾಳದಲ್ಲಿದು, ಇದು ಗಂಗ ದೊರೆ ಮಾರಸಿಂಹನ ಅಜ್ಜಿಯಾದ ಭುಜ್ಜಬ್ಬರಸಿಯು ಶಿವದೇವಾಲಯವನ್ನು ನಿರ್ಮಿಸಿ, ಭೂದಾನವನ್ನು ಮಾಡಿದ ವಿಷಯವನ್ನು ತಿಳಿಸುತ್ತದೆ. ಇಂದು ಬದಲಾದ ಹೊಸ ಶಿವ ದೇವಾಲಯವು ಇರುತ್ತದೆ.

ಕ್ರಿ.ಶ.೧೦೯೧ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು[೯೭] ಪೇಠಾಆಲೂರಿನ ವೀರಭದ್ರದೇವರ ಗುಡಿಯ ಗೋಡೆಯಲ್ಲಿದ್ದು, ಇದು ಲೆಂಕಸುರಿಗೆಯ ಮಹದೇವಯ್ಯನಿಂದ ಮಾಳದಾಲೂರದ ತ್ರೈಪುರುಷ ದೇವರಿಗೆ ಭೂದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಆದರೆ ಈ ಹೆಸರಿನ ದೇವಾಲಯ ಇರುವುದಿಲ್ಲ. ವೀರಭದ್ರದೇವರ ಗುಡಿಯ ಪಕ್ಕದಲ್ಲಿ ನಾಗನಾಥೇಶ್ವರ ದೇವಾಲಯವಿದೆ. ಈ ದೇವಾಲಯವೇ ತ್ರೈಪುರುಷ ದೇವಾಲಯವಾಗಿರಬಹುದು.

ಕ್ರಿ.ಶ. ಸುಮಾರು ೧೬ನೇ ಶತಮಾನದಲ್ಲಿ ಮಹಾಜನರು ದುರ್ಗಾಪರಮೇಶ್ವರಿ ದೇವತೆಗೆ ಸುವರ್ಣದಾನ ಮಾಡಿದ ಬಗ್ಗೆ ತಿಳಿಸುತ್ತದೆ.[೯೮] ಆದರೆ ಇಲ್ಲಿ ಈ ಹೆಸರಿನ ದೇವಾಲಯ ಇರುವುದಿಲ್ಲ.

ಕ್ರಿ.ಶ.೧೧೧೩ರ ಶಾಸನವೊಂದು[೯೯] ಮಲ್ಲಿಕಾರ್ಜುನ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಆದರೆ ಮಲ್ಲಿಕಾರ್ಜುನ ದೇವಾಲಯ ಇರುವುದಿಲ್ಲ. ಇಂದಿನ ಈಶ್ವರ ದೇವಾಲಯವೇ ಮಲ್ಲಿಕಾರ್ಜುನ ದೇವಾಲಯವಾಗಿರಬಹುದು.

ಕ್ರಿ.ಶ.೧೧೨೭ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು[೧೦೦] ಚಿಕ್ಕವಡ್ಡಟ್ಟಿಯಲ್ಲಿದ್ದು, ಇದು ಕಲಿದೇವರಿಗೆ ನೀಡಿದ ಭೂದಾನವನ್ನು ಮತ್ತು ಕ್ರಿ.ಶ.೧೧೪೫ರ ಶಾಸನವು[೧೦೧] ಮಹಾಮಂಡಳೇಶ್ವರ ವಲ್ಲರಸನು ಕಲಿದೇವರಿಗೆ ನೀಡಿದ ಭೂದಾನದ ಬಗ್ಗೆ ತಿಳಿಸುತ್ತದೆ. ಇಂದು ಈ ದೇವಾಲಯವನ್ನು ಕಲ್ಮೇಶ್ವರ ದೇವಾಲಯವೆಂದು ಕರೆಯಲಾಗುತ್ತದೆ. ಈ ದೇವಾಲಯವು ಶಿಥಿಲಾವಸ್ಥೆಯಲ್ಲಿದೆ.

ಕ್ರಿ.ಶ.೧೧೨೪ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು[೧೦೨] ಡಂಬಳದ ದೊಡ್ಡ ಬಸಪ್ಪನ ದೇವಾಲಯದ ಎದುರಿಗೆ ಇದ್ದು, ಇದು ಮಹಾಮಂಡಳೇಶ್ವರ ಪೆರ್ಮಭೂಪಾಳನು ಅಜ್ಜಮೇಶ್ವರ ದೇವಾಲಯಕ್ಕೆ ಬಿಟ್ಟ ಭೂದಾನದ ಬಗ್ಗೆ ತಿಳಿಸುತ್ತದೆ. ಅಂದಿನ ಅಜ್ಜಮೇಶ್ವರ ದೇವಾಲಯವೇ ಇಂದಿನ ದೊಡ್ಡಬಸಪ್ಪನ ದೇವಾಲಯವಾಗಿದೆ. ಇದರ ಬಗ್ಗೆ ಶಾಸನದಲ್ಲಿ ವರ್ಣಿಸುತ್ತ

ಕುಳಪರ್ವ್ವತಮಂ ತಂದದ ।
ನಳವಿಗೆವರೆ ಕಡೆದು ಪಡೆದರೆನಿಸಿಯುಮಂತಾ ॥
ಪೊಳಲಿಂಗೆ ಕಳಶದಂತಿರೆ ।
ವಿಳಾಸಮಮಂ ತಾಳ್ದಿತ್ತಜ್ಜಮೇಶ್ವರ ಭವನಂ ॥

ಎನ್ನುತ್ತದೆ. ಅಂದರೆ ಕುಲ ಪರ್ವತವನ್ನು ತಂದು, ಅದನ್ನು ಕಡೆದು ದೇವಾಲಯವನ್ನು ನಿರ್ಮಿಸಿದ್ದು, ಅದು ಆ ಪಟ್ಟಣಕ್ಕೆ ಕಲಶವಿಟ್ಟಂತೆ ತೊರುತ್ತಿತ್ತು ಎಂದು ಬಣ್ಣಿಸಲಾಗಿದೆ.

ಕ್ರಿ.ಶ.೧೨೮೩ರ ಯಾದವದೊರೆ ರಾಮದೇವನ ಕಾಲದ ಶಾಸನವು[೧೦೩] ಭೋಗದೇವ ದೇವಾಲಯದ ಆಚಾರ್ಯರಿಗೆ ಬಿಟ್ಟ ಭೂದಾನದ ಉಲ್ಲೇಖವಿದೆ. ಆದರೆ ಇಲ್ಲಿ ಭೋಗದೇವ ದೇವಾಲಯವಾಗಲಿ, ಭೋಗೇಶ್ವರ ದೇವಾಲಯವಾಗಲಿ ಇರುವುದಿಲ್ಲ.

ಕ್ರಿ.ಶ.೧೦೮೦[೧೦೪] ಮತ್ತು ೧೯೮ರ[೧೦೫] ೬ನೇ ವಿಕ್ರಮಾದಿತ್ಯನ ಕಾಲದ ಶಾಸನಗಳು ಡೋಣಿಯಲ್ಲಿದ್ದು, ಇದು ದ್ರೋಣಪುರದ ಸೆಟ್ಟಿಯರು ಮತ್ತು ಅರವತ್ತುಮಹಾಜನರು ಸಿದ್ಧೇಶ್ವರ ದೇವಾಲಯಕ್ಕೆ ಬಿಟ್ಟ ಭೂದಾನದ ವಿಷಯವನ್ನು, ೧೯೪ರ ಶಾಸನವು[೧೦೬] ದಂಡನಾಯಕ ಮಹಾದೇವಭಟ್ಟರ ಆದೇಶದ ಮೇರೆಗೆ ಸುಂಕವೆರ್ಗಡೆವಿಟ್ಟರಸರು ಈ ದೇವಾಲಯಕ್ಕೆ ಬಿಟ್ಟ ಸುಂಕಗಳ ದಾನವನ್ನು, ಮತ್ತೊಂದು ಶಾಸನವು[೧೦೭] ಇದೇ ದೇವಾಲಯಕ್ಕೆ ದ್ರೋಣಿಪುರ ಊರೊಡೆಯನಿಂದ ದೇವರಿಗೆ ನೀಡಿದ ಭೂದಾನದ ವಿಷಯವನ್ನು ತಿಳಿಸುತ್ತದೆ. ಈ ನಾಲ್ಕು ಶಾಸನಗಳಲ್ಲಿ ಸಿದ್ಧೇಶ್ವರ ದೇವಾಲಯದ ಉಲ್ಲೇಖವಿದೆ. ಅಂದಿನ ಸಿದ್ಧೇಶ್ವರ ದೇವಾಲಯವೇ ಇಂದಿನ ಸಿದ್ಧಲಿಂಗದೇವರ ಗುಡಿ. ಇಲ್ಲಿಯ ಮತ್ತೊಂದು ಅಪ್ರಕಟಿತ ಶಾಸನದಲ್ಲಿ ಬೆಂಕೇಶ್ವರ ದೇವಾಲಯದ ಉಲ್ಲೇಖ ಬರುತ್ತಾದರೂ ಸಹ ದೇವಾಲಯ ನಾಶವಾಗಿ ಅದರ ಅವಶೇಷಗಳು ಬಿದ್ದಿರುವುದು ಕಂಡುಬರುತ್ತದೆ.

ಕ್ರಿ.ಶ ಸುಮಾರು ೧೩ನೇ ಶತಮಾನದ ಶಾಸನವೊಂದು[೧೦೮] ಶ್ರೀಧರಾಚಾರ್ಯರ ಮಗನು ಶ್ರೀಪತಿದೇವರ ಗುಡಿಗೆ ಭೂದಾನವನ್ನು ಬಿಟ್ಟ ಬಗ್ಗೆ ತಿಳಿಸುತ್ತದೆ. ಆದರೆ ಇಂದು ಶ್ರೀಪತಿದೇವರ ಗುಡಿ ಇರುವುದಿಲ್ಲ.

ಕ್ರಿ.ಶ.೧೧೧೩ರ ೬ನೇ ವಿಕ್ರಮಾದಿತ್ಯನ ಕಾಲದ ಶಾಸನವು[೧೦೯] ಕಕ್ಕೂರಿನ ಹನುಮಂತ ದೇವರ ಗುಡಿಯ ಬಳಿ ಇದ್ದು ಇದು ಅಲ್ಲಿಯ ಮಲ್ಲಿಕಾರ್ಜುನ ದೇವಾಲಯಕ್ಕೆ ಸೆಟ್ಟಿಯೊಬ್ಬನು ಬಿಟ್ಟ ದಾನದ ಬಗ್ಗೆ ತಿಳಿಸುತ್ತದೆ. ಇಂದು ಈ ದೇವಾಲಯವು ಹಾಳಾಗಿದ್ದು ನವೀಕರಿಸಲಾಗಿದೆ.

ಕ್ರಿ.ಶ.೧೦೫೪ರ ಕಲ್ಯಾಣಚಾಲುಕ್ಯರ ದೊರೆ ೧ನೇ ಸೋಮೇಶ್ವರನ ಕಾಲಕ್ಕೆ ಸೇರಿದ ಶಾಸನವೊಂದು[೧೧೦] ತಾಮ್ರಗುಂಡಿಯಲ್ಲಿದ್ದು, ಇದು ಮೂಲಸ್ಥಾನಕಲಿದೇವಸ್ವಾಮಿಗೆ ಸುವರ್ಣದಾನ ಮಾಡಿದ ವಿಷಯವನ್ನು ತಿಳಿಸುತ್ತದೆ. ಇಂದು ಹಳೆಯಗ್ರಾಮ ಬಿಟ್ಟು ೧ಕಿ.ಮಿ ದೂರದಲ್ಲಿ ಹೊಸ ಊರನ್ನು ರಚಿಸಲಾಗಿದೆ. ಇಂದಿಗೂ ಕೂಡ ಈ ದೇವಾಲಯವಿದ್ದು ಒಳಗಡೆ ಶಿವಲಿಂಗವಿದೆ.

ಕ್ರಿ.ಶ.೧೦೨೨ರ ೨ನೇ ಜಯಸಿಂಹದ ಶಾಸನವು[೧೧೧] ನಾಗರಹಳ್ಳಿಯ ತುಂಗಭದ್ರ ನದಿದಂಡೆಯ ಮೇಲೆ ಇರುವ ಪಂಚಲಿಂಗೇಶ್ವರ ದೇವಾಲಯದಲ್ಲಿದ್ದು, ಇದು ತ್ರಿಭುವನ ನಾರಾಯಣ ಧರ್ಮಸೆಟ್ಟಿಯು

ನಿರ್ಮಿಸಿದ ಧರ್ಮೇಶ್ವರ ದೇವಾಲಯಕ್ಕೆ ಬಿಟ್ಟ ದಾನವನ್ನು ತಿಳಿಸುತ್ತದೆ. ಇಂದು ಈ ದೇವಾಲಯವು ನಾಶದ ಅಂಚಿನಲ್ಲಿ ಇದೆ. ಇದನ್ನು ಪಂಚಲಿಂಗೇಶ್ವರ ದೇವಾಲಯವೆಂದು ಕರೆಯುವರು.

ಕ್ರಿ.ಶ ಸುಮಾರು ೧೨ನೇ ಶತಮಾನದ ಬರದೂರು ಶಾಸನವು[೧೧೨] ಭರತೇಶ್ವರ ದೇವಾಲಯಕ್ಕೆ ನೀಡಿದ ದಾನದ ಬಗ್ಗೆ ತಿಳಿಸುತ್ತದೆ. ಇಲ್ಲಿ ಉಲ್ಲೇಖವಾಗಿರುವ ಭರತೇಶ್ವರ ದೇವಾಲಯ ಇಂದು ಈಶ್ವರಗುಡಿ ಎಂದು ಮಾತ್ರ ಕರೆಯುತ್ತಿದ್ದಾರೆ.

ಕ್ರಿ.ಶ.೧೦೫೨ರ ಶಾಸನ[೧೧೩] ಮತ್ತು ಕ್ರಿ.ಶ.೧೧೪೯-೫೦ರ ೨ನೇ ಜಗದೇಕಮಲ್ಲನ ಶಾಸನ[೧೧೪] ಬಿದರಹಳ್ಳಿಯ ಸೋಮೇಶ್ವರ ದೇವಾಲಯಕ್ಕೆ ಭೂದಾನ ಮಾಡಿದ ವಿಚಾರವನ್ನು ಹೇಳುತ್ತವೆ. ಈ ಎರಡು ಶಾಸನಗಳೂ ಸೋಮೇಶ್ವರ ದೇವಾಲಯದ ಬಗ್ಗೆ ತಿಳಿಸುತ್ತಿದ್ದು, ಈ ದೇವಾಲಯವು ಇಂದಿಗೂ ಇದೇ ಹೆಸರಿನಿಂದ ಕರೆಸಿಕೊಳ್ಳುತ್ತಿದೆ.

ಕ್ರಿ.ಶ.೧೧೪೮ರ ೨ನೇ ಜಗದೇಕಮಲ್ಲನ ಶಾಸನ[೧೧೫] ಬೂದಿಹಾಳದಲ್ಲಿ ಇದ್ದು, ಇದು ಕುಪ್ಪದೇವರಸನು ಸಾಸವಾಡಿ-೧೪೦ನ್ನು ಆಳುತ್ತಿರುವಾಗ, ಕಲಿದೇವಸ್ವಾಮಿ ದೇವಾಲಯಕ್ಕೆ ಬಮ್ಮಿಸೆಟ್ಟಿ ಬಿಟ್ಟ ಭೂದಾನವನ್ನು ತಿಳಿಸುತ್ತದೆ. ಅಂದಿನ ಕಲಿದೇವಸ್ವಾಮಿ ದೇವಾಲಯ ಇಂದು ಈಶ್ವರ ದೇವಾಲಯ ಎಂದು ಕರೆಯಲಾಗುತ್ತದೆ. ಈ ದೇವಾಲಯವು ಹಳೆಯ ಸ್ಥಿತಿಯನ್ನು ಕಳೆದುಕೊಂಡು ನವೀನತೆಯನ್ನು ಪಡೆದುಕೊಂಡಿದೆ.

ಮುಂಡರಗಿಯ ಗುಡ್ಡದ ಮೇಲೆ ಇರುವ ಸುಮಾರು ೧೬ನೇ ಶತಮಾನದ ಶಾಸನವೊಂದು[೧೧೬] ಇಲ್ಲಿಯ ದೇವಾಲಯಕ್ಕೆ ಬಿಟ್ಟ ದಾನದ ಬಗ್ಗೆ ತಿಳಿಸುತ್ತದಾದರೂ ಯಾವದೇವರು ಎಂಬುದನ್ನು ತಿಳಿಸುವುದಿಲ್ಲ.

ಕ್ರಿ.ಶ.೯೮ರ ರಾಷ್ಟ್ರಕೂಟರ ದೊರೆ ೨ನೇ ಕೃಷ್ಣನ ಕಾಲದ ಶಾಸನವು[೧೧೭] ಮೇಳೆವೀಡು ರಾಜಧಾನಿಯ ಕೋಯಿಗೇಶ್ವರ ದೇವಾಲಯಕ್ಕೆ ಸಾಮಂತನೊಬ್ಬನು ದಾನ ನೀಡಿದ ಬಗ್ಗೆ ತಿಳಿಸುತ್ತದಾದರೂ ಇಲ್ಲಿ ಕೊಯಿಗೇಶ್ವರ ದೇವಾಲಯ ಇರುವುದಿಲ್ಲ.

ಕ್ರಿ.ಶ. ಸುಮಾರು ೧೨ನೇ ಶತಮಾನದ ಶಾಸನವೊಂದು[೧೧೮] ಕುಪ್ಪದೇವರಸನು ಕುಪ್ಪೇಶ್ವರ ದೇವಾಲಯಕ್ಕೆ ನೀಡಿದ ದಾನದ ಬಗ್ಗೆ ಹೇಳುತ್ತದಾದರೂ ಇಲ್ಲಿ ಈ ಹೆಸರಿನ ದೇವಾಲಯವಿರುವುದಿಲ್ಲ.

ಕ್ರಿ.ಶ.೧೧೯೬ರ ಹೊಯ್ಸಳ ದೊರೆ ೨ನೇ ವೀರಬಲ್ಲಾಳನ ಕಾಲದ ಶಾಸನಗಳು[೧೧೯] ಎರಡು ಇದ್ದು, ಇವು ಕ್ರಮವಾಗಿ ನಖರರು ಹಾಗೂ ಮುಮ್ಮುರಿದಂಡಗಳು ಮತ್ತು ಐಹೊಳೆ ಐನೂರ್ವರು, ದೇಹುತಗೆರೆಯ ಬಿಲ್ಲೇಶ್ವರ ದೇವರಿಗೆ ನೀಡಿದದಾನ ಮತ್ತು ಸುಂಕದಾನವನ್ನು ಬಿಟ್ಟ ಮಾಹಿತಿಯನ್ನು ತಿಳಿಸುತ್ತದೆ. ಇಂದು ಈ ಬಿಲ್ಲೇಶ್ವರ ದೇವರ ಹೆಸರಿನಲ್ಲಿ ಕರೆಯುವ ದೇವಾಲಯವಿರುವುದಿಲ್ಲ. ಇಂದಿನ ವೆಂಕಟೇಶ್ವರ ದೇವಾಲಯ ಮೊದಲ ಬಿಲ್ಲೇಶ್ವರ ದೇವಾಲಯವಾಗಿರಬೇಕು. ಈ ದೇವಾಲಯ

ಕಾಲಕಾಲದ ಅರಸರುಗಳಿಂದ ಮಾರ್ಪಾಡಾಗುತ್ತ ಬಂದಿರುವುದನ್ನು ಕಾಣಬಹುದು. ಇಂದಿನ ಮೇವುಂಡಿ ಗ್ರಾಮವು ಶಾಸನಗಳಲ್ಲಿ ದೇಹುತಗೆರೆಯೆಂದು ಉಲ್ಲೇಖಿಸಿರುವುದು ವಿಶೇಷ. ಈ ದೇವಾಲಯ ಕಾಲನಂತರದಲ್ಲಿ ಶೈವದಿಂದ ವೈಷ್ಣವ ಧರ್ಮಕ್ಕೆ ಬದಲಾಗಿರುವ ಸಾಧ್ಯತೆಗಳು ಇಲ್ಲದಿಲ್ಲ.

ಕ್ರಿ.ಶ.೧೨೨೩ರ ಯಾದವ ದೊರೆ ಸಿಂಘಣನ ಕಾಲದ ಶಾಸನವು[೨೦] ಮೇವುಂಡಿಯ ದಿಡಿಗೇಶ್ವರ ದೇವಾಲಯದ ನವರಂಗದಲ್ಲಿದ್ದು, ಇದು ಪುರುಷೋತ್ತಮನಾಯಕನ ಮಡದಿ ಹೀರುಬಾಯಿ ದಾನಮಾಡಿದ ಬಗ್ಗೆ ತಿಳಿಸುತ್ತದೆ. ಈ ದೇವಾಲಯವನ್ನು ನೀಲಕಂಠೇಶ್ವರ ದೇವಾಲಯ ಎಂದು ಕರೆಯಲಾಗುತ್ತದೆ.

ಕ್ರಿ.ಶ.ಸುಮಾರು ೧೧-೧೨ನೇ ಶತಮಾನದ ಶಾಸನವು[೨೧] ಭಾಗಲಾದೇವಿಯ ವಿನಂತಿಯ ಮೇರೆಗೆ, ಆಕೆಯ ಮಾವನಾದ ಪೆರ್ಗಡೆ ಮಾರ್ತಂಡಯ್ಯನು ಸುವರ್ಣದಾನ ಮತ್ತು ಗದ್ಯಾಣಗಳ ದಾನ ಮತ್ತು ಕ್ರಿ.ಶ.೧೨೯೧ರ ಯಾದವ ದೊರೆ ರಾಮಚಂದ್ರನ ಕಾಲದ ಶಾಸನವು,[೨೨] ಶಿರೂರ ಮಳಗೇಶ್ವರ ದೇವಾಲಯದ ಎದುರು ಇದ್ದು, ಇದು ನಾಯಕನೊಬ್ಬನು ಸ್ವಯಂಭೂಲಿಂಗ ದೇವಾಲಯಕ್ಕೆ ಭೂದಾನಮಾಡಿದ ವಿಚಾರವನ್ನು ತಿಳಿಸುತ್ತದೆ. ಇಂದಿನ ಮಳಗೇಶ್ವರ ದೇವಾಲಯವೇ ಸ್ವಯಂಭೂಲಿಂಗ ದೇವಾಲಯ. ಇದು ಶಂಭುಲಿಂಗ ದೇವಾಲಯವಾಗಿದೆ.

ಹೀಗೆ ಅನೇಕ ಶಾಸನಗಳು ದೇವಾಲಯಗಳ ಬಗ್ಗೆ ಮಾಹಿತಿಯನ್ನು ನೀಡುತ್ತಿದ್ದು. ಆ ದೇವಾಲಯಗಳ ಚರಿತ್ರೆ ಮಹತ್ವಗಳನ್ನು ತಿಳಿಸುತ್ತವೆ, ದಕ್ಷಿಣ ಗದಗಿನ ಬಹುಭಾಗಗಳಲ್ಲಿ ಬಸದಿ, ದೇವಾಲಯ ನಿರ್ಮಾಣ ಚಟುವಟಿಕೆಗಳು ಬಹಳ ಚುರುಕಿನಿಂದ ನಡೆಯುತ್ತಿದ್ದವು.

ಅಡಿ ಟಿಪ್ಪಣಿಗಳು

೧. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೪,೫,೬ ೨೪೪,೨೪೫,೨೪೬

೨. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೦೭ ಕ್ರಿಶ.೭೩೫

೩. ಮುಳಗುಂದ, ಇ.ಐ೩ ಮು.ಸಂ.೧೯೨-೯೪ ಕ್ರಿ.ಶ.೯೦೨-೦೩

೪. ಮುಳಗುಂದ, ಎಸ್.ಐ.ಐ.೧೫ ಶಾ.ಸಂ.೬೧೫, ೬೯೫ ಕ್ರಿಶ.೧೬ಶ

೫. ಹೊಸೂರು, ಎಸ್.ಐ.ಐ.೧೧ ಶಾ.ಸಂ.೪೭ ಕ್ರಿಶ.೧೦೨೮-೨೯

೬. ಶಿರೂರು, ಅಪ್ರಕಟಿತ ಶಾಸನ ಸಂ.ಡಿ.ವಿ.ಪರಮಶಿವಮೂರ್ತಿ ಕ್ರಿ.ಶ.೯೮೬

೭. ಸೊರಟೂರು, ಎಸ್.ಐ.ಐ.೧೫ ಶಾ.ಸಂ.೬೨೩ ಕ್ರಿಶ.೧೩ಶ

೮. ಅಕ್ಕಿಗುಂದಿ, ಎಸ್.ಐ.ಐ.-- ಶಾ.ಸಂ.-- ಕ್ರಿಶ.೧೨ಶ

೯. ಲಕ್ಕುಂಡಿ, ಎಸ್.ಐ.ಐ.೧೧ ಶಾ.ಸಂ.೫೨ ಕ್ರಿಶ.೧೦೦೭

೧೦. ಲಕ್ಕುಂಡಿ, ಎಸ್.ಐ.ಐ.೧೧ ಶಾ.ಸಂ.೫೨ ಕ್ರಿಶ.೧೦೦೭

೧೧. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೧೧೯ ಕ್ರಿ.ಶ.೧೧೭೩

೧೨. ಡಂಬಳ, ಕೆ.ಐ.೫ ಶಾ.ಸಂ.೪೬ ಕ್ರಿ.ಶ.೧೨೮೮

೧೩. ಗದಗ, ಎಸ್.ಐ.ಐ.೧೧ ಶಾ.ಸಂ.೭೨ ಕ್ರಿ.ಶ.೧೦೩೭

೧೪. ಬೆಳ್ಳಟ್ಟಿ, ಕೆ.ಆರ್. ಐ ಕ್ರಿ.ಶ.೯೯೦

೧೫. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೧೫ ಕ್ರಿ.ಶ.೧೨೪೭

೧೬. ಕಲಕೇರಿ, ಎಸ್.ಐ.ಐ.೧೫ ಶಾ.ಸಂ.೫೬೮ ಕ್ರಿ.ಶ. ೧೨ಶ

೧೭. ಡೋಣಿ, ಎಸ್.ಐ.ಐ.೧೫ ಶಾ.ಸಂ.೫೭೨ ಕ್ರಿ.ಶ. ೧೨ಶ

೧೮. ಡೋಣಿ, ಎಸ್.ಐ.ಐ.೧೫ ಶಾ.ಸಂ.೬೧೪ ಕ್ರಿ.ಶ. ೧೨೬

೧೯. ಡಂಬಳ, ಕೆ.ಐ೫ ಶಾ.ಸಂ.೪೬ ಕ್ರಿ.ಶ.೧೨೮೮

೨೦. ಅಸುಂಡಿ, ಎಸ್.ಐ.ಐ.೧೧ ಶಾ.ಸಂ.೬೩ ಕ್ರಿ.ಶ.೧೦೨೬

೨೧. ಅಸುಂಡಿ, ಎಸ್.ಐ.ಐ.೧೧ ಶಾ.ಸಂ.೮೯ ಕ್ರಿ.ಶ.೧೦೫೩

೨೨. ಎಲೆಶಿರೂರು, ಎಸ್.ಐ.ಐ.೧೧ ಶಾ.ಸಂ.೧೫೮ ಕ್ರಿ.ಶ.೧೧೧೯

೨೩. ಎಲೆಶಿರೂರು, ಎಸ್.ಐ.ಐ.೧೫ ಶಾ.ಸಂ.೨೫ ಕ್ರಿ.ಶ.೧೧೪೪

೨೪. ಎಲೆಶಿರೂರು, ಎಸ್.ಐ.ಐ.೧೫ ಶಾ.ಸಂ.೧೦೭ ಕ್ರಿ.ಶ.೧೧೬೭

೨೫. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೩೭ ಕ್ರಿ.ಶ.೯೪೬

೨೬. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೧೨೭ ಕ್ರಿ.ಶ.೧೦೮೨

೨೭. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೧೩೩ ಕ್ರಿ.ಶ.೧೦೮೭

೨೮. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೧೩೪ ಕ್ರಿ.ಶ.೧೦೮೭

೨೯. ಕುರ್ತುಕೋಟಿ, ಎಸ್.ಐ.ಐ.೧೧ ಶಾ.ಸಂ.೨೦೦ ಕ್ರಿ.ಶ.೧೧೨೬

೩೦. ಕುರ್ತುಕೋಟಿ, ಎಸ್.ಐ.ಐ.೧೫ ಶಾ.ಸಂ.೧೭ ಕ್ರಿ.ಶ.೧೧೩೮

೩೧. ಗದಗ, ಎಸ್.ಐ.ಐ.೧೧ ಶಾ.ಸಂ.೭೨ ಕ್ರಿ.ಶ.೧೦೩೭

೩೨. ಚಿಂಚಲಿ, ಎಸ್.ಐ.ಐ.೧೧ ಶಾ.ಸಂ.೧೦೮ ಕ್ರಿ.ಶ.೧೦೬

೩೩. ಚಿಂಚಲಿ, ಎಸ್.ಐ.ಐ.೧೫ ಶಾ.ಸಂ.೬೪ ಕ್ರಿ.ಶ.೧೦೮೫

೩೪. ನಾಗಾವಿ, ಎಸ್.ಐ.ಐ.೧೧ ಶಾ.ಸಂ.೪೧ ಕ್ರಿ.ಶ.೯೬

೩೫. ನಾಗಾವಿ, ಎಸ್.ಐ.ಐ.೧೧ ಶಾ.ಸಂ೧೬೨ ಕ್ರಿ.ಶ.೧೨೧೫

೩೬. ಬೆಂತೂರು, ಎಸ್.ಐ.ಐ.೧೫ ಶಾ.ಸಂ.೨೧೫ ಕ್ರಿ.ಶ.೧೨೦೦

೩೭. ಬೆಂತೂರು, ಎಸ್.ಐ.ಐ.೧೫ ಶಾ.ಸಂ.೨೧೮ ಕ್ರಿ.ಶ.೧೨೦೫

೩೮. ಮಲ್ಲಸಮುದ್ರ, ಎಸ್.ಐ.ಐ.೧೫ ಶಾ.ಸಂ.೫೪ ಕ್ರಿ.ಶ.೧೧೫೭

೩೯. ಮುಳಗುಂದ, ಎಸ್.ಐ.ಐ.೧೧ ಶಾ.ಸಂ.೨೦೩

೪೦.ಮುಳಗುಂದ, ಎಸ್.ಐ.ಐ.೧೧ ಶಾ.ಸಂ.೧೯೮ ಕ್ರಿ.ಶ.೧೧೨೩-೨೪

೪೧. ಮುಳಗುಂದ, ಎಸ್.ಐ.ಐ.೧೫ ಶಾ.ಸಂ ೧೩೧ ಕ್ರಿ.ಶ.೧೧೭೮

೪೨. ಮುಳಗುಂದ, ಎಸ್.ಐ.ಐ.೧೫ ಶಾ.ಸಂ ೬೭೧ ಕ್ರಿ.ಶ.೧೫೩

೪೩. ಲಕ್ಕುಂಡಿ, ಕೆ.ಐ.೨ ಶಾ.ಸಂ.೦೯ ಕ್ರಿ.ಶ.೧೦೭೫

೪೪. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೫೩೩ ಕ್ರಿ.ಶ.೧೦೭೬

೪೫. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೪೮ ಕ್ರಿ.ಶ.೧೧೫೨

೪೬. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೧೨೫ ಕ್ರಿ.ಶ.೧೧೭೪

೪೭. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೧೩೭ ಕ್ರಿ.ಶ.೧೧೮೦

೪೮. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೧೩೫ ಕ್ರಿ.ಶ.೧೧೭೯

೪೯. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೬೩ ಕ್ರಿ.ಶ.೧೧೮೪-೮೫

೫೦. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೭೦ ಕ್ರಿ.ಶ.೧೧೮೬

೫೧. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೫೫೮ ಕ್ರಿ.ಶ.೧೨ಶ

೫೨. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೫೬೧ ಕ್ರಿ.ಶ.೧೨ಶ

೫೩. ಲಕ್ಕುಂಡಿ, ಎಸ್.ಐ.ಐ.೧೧ ಶಾ.ಸಂ.೧೯೩ ಕ್ರಿ.ಶ.೧೧೮೮

೫೪. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೨೨೨ ಕ್ರಿ.ಶ.೧೨೦೨

೫೫. ಲಕ್ಕುಂಡಿ, ಎಸ್.ಐ.ಐ.೧೫ ಶಾ.ಸಂ.೧೬೭ ಕ್ರಿ.ಶ.೧೨೨೩

೫೬. ಹರ್ತಿ, ಎಸ್.ಐ.ಐ.೧೫ ಶಾ.ಸಂ.೧೨೦ ಕ್ರಿ.ಶ.೧೧೭೩

೫೭. ಹರ್ತಿ, ಎಸ್.ಐ.ಐ.೧೫ ಶಾ.ಸಂ.೧೭೬ ಕ್ರಿ.ಶ.೧೨೩೬

೫೮. ಹೊಸೂರು, ಎಸ್.ಐ.ಐ.೧೧ ಶಾ.ಸಂ.೪೭ ಕ್ರಿ.ಶ.೯೪-೯೫

೫೯. ಹೊಸೂರು, ಎಸ್.ಐ.ಐ.೧೫ ಶಾ.ಸಂ.೩೬ ಕ್ರಿ.ಶ.೧೧೪೮

೬೦. ಹೊಸೂರು, ಎಸ್.ಐ.ಐ.೧೫ ಶಾ.ಸಂ.೨೩೯ ಕ್ರಿ.ಶ.೧೨ಶ

೬೧. ಹೊಸೂರು, ಎಸ್.ಐ.ಐ.೧೫ ಶಾ.ಸಂ.೫೧ ಕ್ರಿ.ಶ.೧೧೫೫

೬೨. ಹೊಸೂರು, ಎಸ್.ಐ.ಐ.೧೧ ಶಾ.ಸಂ.೧೫೨ ಕ್ರಿ.ಶ.೧೧೦೩

೬೩. ಹೊಸೂರು, ಎಸ್.ಐ.ಐ.೧೫ ಶಾ.ಸಂ.೨೬ ಕ್ರಿ.ಶ.೧೧೪೪

೬೪. ಹೊಸೂರು, ಎಸ್.ಐ.ಐ.೧೫ ಶಾ.ಸಂ.೫೨ ಕ್ರಿ.ಶ.೧೧೫೫

೬೫. ಹೊಸೂರು, ಎಸ್.ಐ.ಐ.೧೫ ಶಾ.ಸಂ.೬೯ ಕ್ರಿ.ಶ.೧೧೮೬

೬೬. ಹೊಸೂರು, ಎಸ್.ಐ.ಐ.೧೫ ಶಾ.ಸಂ.೨೧೯ ಕ್ರಿ.ಶ.೧೨೦೭

೬೭. ಬೆಳ್ಳಟ್ಟಿ, ಅಪ್ರಕಟಿತ ಶಾಸನ ಸಂ.ಡಿ.ವಿ.ಪರಮಶಿವಮೂರ್ತಿ ಕ್ರಿ.ಶ.೧೧೨೨

೬೮. ಬೆಳ್ಳಟ್ಟಿ, ಅಪ್ರಕಟಿತ ಶಾಸನ ಸಂ.ಡಿ.ವಿ.ಪರಮಶಿವಮೂರ್ತಿ ಕ್ರಿ.ಶ.೧೩ಶ

೬೯. ಬೆಳ್ಳಟ್ಟಿ, ಅಪ್ರಕಟಿತ ಶಾಸನ ಸಂ.ಡಿ.ವಿ.ಪರಮಶಿವಮೂರ್ತಿ ಕ್ರಿ.ಶ.೧೫೪

೭೦. ಎಳವತ್ತಿ ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೧೫೧

೭೧. ಎಳವತ್ತಿ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೧೫೯

೭೨. ಎಳವತ್ತಿ, ಎಸ್.ಐ.ಐ.-- ಶಾ.ಸಂ.-- ಕ್ರಿ.ಶ.೧೧೯೫

೭೩. ಎಳವತ್ತಿ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೨೪

೭೪. ಎಳವತ್ತಿ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೧೫೮

೭೫. ಲಕ್ಷ್ಮೇಶ್ವರ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೦೪

೭೬. ಲಕ್ಷ್ಮೇಶ್ವರ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೦೭೭

೭೭. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೬೬ ಕ್ರಿ.ಶ.೧೧೦೨

೭೮. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೨೨ ಕ್ರಿ.ಶ.೧೧೦೭

೭೯. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೮೧ ಕ್ರಿ.ಶ.೧೨೨

೮೦. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೯೧ ಕ್ರಿ.ಶ.೧೨೧೫

೮೧. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೦೭ ಕ್ರಿ.ಶ.೧೨೧೫

೮೨. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೯೯ ಕ್ರಿ.ಶ.೧೧೨೮

೮೩. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೦೭ ಕ್ರಿ.ಶ.೧೧೩೮

೮೪. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೧೭ ಕ್ರಿ.ಶ.೧೧೪೭

೮೫. ಲಕ್ಷ್ಮೇಶ್ವರ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೩೫೩

೮೬. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೩೬೬ ಕ್ರಿ.ಶ.೧೩೯೨

೮೭. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ೩೮೦ ಕ್ರಿ.ಶ.೧೪೩೨

೮೮. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೭೮ ಕ್ರಿ.ಶ.೧೧೧೮

೮೯. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೮೩ ಕ್ರಿ.ಶ.೧೧೨೩

೯೦. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೧೬೭ ಕ್ರಿ.ಶ.೧೧೭೯

೯೧. ಲಕ್ಷ್ಮೇಶ್ವರ. ಎಸ್.ಐ.ಐ.೨೦ ಶಾ.ಸಂ.೧೯೮ ಕ್ರಿ.ಶ.೧೨೨೭

೯೨. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೦೬

೯೩. ಲಕ್ಷ್ಮೇಶ್ವರ, ಎಸ್.ಐ.ಐ.೨೦ ಶಾ.ಸಂ.೨೫೭ ಕ್ರಿ.ಶ.೧೫೭೬

೯೪. ಶಿರಹಟ್ಟಿ, ಎಸ್.ಐ.ಐ.-- ಶಾ.ಸಂ.--- ಕ್ರಿ.ಶ.೧೭೭೭

೯೫. ಸಾಸರವಾಡ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೦೫೩

೯೬. ಹೆಬ್ಬಾಳ, ಇ.ಐ. ೪ ಮ.ಸಂ.೩೫೦/೩೫೬ ಕ್ರಿ.ಶ.೯೭೫

೯೭. ಪೇತಾಆಲೂರು, ಎಸ್.ಐ.ಐ.೧೧ ಶಾ.ಸಂ.೧೩೬ ಕ್ರಿ.ಶ.೧೦೯೧

೯೮. ಪೇತಾಆಲೂರು, ಎಸ್.ಐ.ಐ.೧೫ ಶಾ.ಸಂ.೭೦೩ ಕ್ರಿ.ಶ.೧೬೪

೯೯. ಪೇತಾಆಲೂರು, ಎಸ್.ಐ.ಐ.೧೧ ಶಾ.ಸಂ.೧೬೫ ಕ್ರಿ.ಶ.೧೧೧೩

೧೦೦. ಚಿಕ್ಕವಡ್ಡಟ್ಟಿ, ಎಸ್.ಐ.ಐ.೧೧ ಶಾ.ಸಂ.೧೭೮ ಕ್ರಿ.ಶ.೧೧೨೭

೧೦೧. ಚಿಕ್ಕವಡ್ಡಟ್ಟಿ, ಎಸ್.ಐ.ಐ.೧೫ ಶಾ.ಸಂ.೨೯ ಕ್ರಿ.ಶ.೧೧೪೫

೧೦೨. ಡಂಬಳ, ಎಸ್.ಐ.ಐ.೧೧ ಶಾ.ಸಂ.೧೭೫ ಕ್ರಿ.ಶ.೧೧೨೪

೧೦೩. ಡಂಬಳ, ಎಸ್.ಐ.ಐ.೧೫ ಶಾ.ಸಂ.೨೦೦ ಕ್ರಿ.ಶ.೧೨೮೩

೧೦೪. ಡಂಬಳ, ಎಸ್.ಐ.ಐ.೧೧ ಶಾ.ಸಂ.೧೨೬ ಕ್ರಿ.ಶ.೧೦೮೦

೧೦೫. ಡಂಬಳ, ಎಸ್.ಐ.ಐ.೧೧ ಶಾ.ಸಂ.೧೪೦ ಕ್ರಿ.ಶ.೧೦೯೬

೧೦೬. ಡಂಬಳ, ಎಸ್.ಐ.ಐ.೧೧ ಶಾ.ಸಂ.೧೮೧ ಕ್ರಿ.ಶ.೧೦೯೪

೧೦೭. ಡಂಬಳ, ಎಸ್.ಐ.ಐ.೧೧ ಶಾ.ಸಂ.೧೮೨ ಕ್ರಿ.ಶ.೧೦೯೮

೧೦೮. ಡಂಬಳ, ಎಸ್.ಐ.ಐ.೧೫ ಶಾ.ಸಂ.೬೭೩ ಕ್ರಿ.ಶ.೧೫೪

೧೦೯. ಕಕ್ಕೂರು, ಎಸ್.ಐ.ಐ.೧೧ ಶಾ.ಸಂ.೧೬೫ ಕ್ರಿ.ಶ.೧೧೧೩

೧೧೦. ತಾಮ್ರಗುಂಡಿ, ಎಸ್.ಐ.ಐ.೧೧ ಶಾ.ಸಂ.೯೨ ಕ್ರಿ.ಶ.೧೦೫೪

೧೧೧. ನಾಗರಹಳ್ಳಿ, ಎಸ್.ಐ.ಐ.೧೧ ಶಾ.ಸಂ.೫೮ ಕ್ರಿ.ಶ.೧೦೨೨

೧೧೨. ಬರದೂರ,ಎಸ್.ಐ.ಐ.೧೫ ಶಾ.ಸಂ.೫೬೭ ಕ್ರಿ.ಶ.೧೦೪

೧೧೩. ಬಿದರಳ್ಳಿ,ಎಸ್.ಐ.ಐ.— ಶಾ.ಸಂ.—ಕ್ರಿ.ಶ.೧೦೫೨

೧೧೪. ಬಿದರಳ್ಳಿ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೧೪೯-೫೦

೧೧೫. ಬೂದಿಹಾಳ, ಎಸ್.ಐ.ಐ.೧೫ ಶಾ.ಸಂ.೩೩ ಕ್ರಿ.ಶ.೧೧೪೭

೧೧೬. ಮುಂಡರಗಿ, ಎಸ್.ಐ.ಐ.-- ಶಾ.ಸಂ.೭೦೧ ಕ್ರಿ.ಶ.೧೬೪

೧೧೭. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೨೨ ಕ್ರಿ.ಶ.೮೯೭

೧೧೮. ಮೇವುಂಡಿ, ಎಸ್.ಐ.ಐ.೧೧ ಶಾ.ಸಂ.೩೦ ಕ್ರಿ.ಶ.೧೨೪

೧೧೯. ಮೇವುಂಡಿ, ಎಸ್.ಐ.ಐ.-- ಶಾ.ಸಂ.—ಕ್ರಿ.ಶ.೧೧೯೬

೧೨೦. ಮೇವುಂಡಿ, ಎಸ್.ಐ.ಐ.೧೫ ಶಾ.ಸಂ.೧೬೮ ಕ್ರಿ.ಶ.೧೨೨೩

೧೨೧. ಶಿರೂರು, ಎಸ್.ಐ.ಐ.೧೫ ಶಾ.ಸಂ.೨೦೬ ಕ್ರಿ.ಶ.೧೧-೧೨೪

೧೨೨. ಶಿರೂರು, ಎಸ್.ಐ.ಐ.೧೫ ಶಾ.ಸಂ.೨೦೨ ಕ್ರಿ.ಶ.೧೨೧೯

# ಅಧ್ಯಾಯ ೭

## ಶಾಸನ ಶಿಲ್ಪ

೭.೧. ಜೈನ ಶಾಸನಶಿಲ್ಪಗಳು

೭.೨. ಶೈವ ಶಾಸನಶಿಲ್ಪಗಳು

೭.೩. ವೈಷ್ಣವ ಶಾಸನಶಿಲ್ಪಗಳು

೭.೪. ಗೋಸಾಸ ಶಾಸನಶಿಲ್ಪ

೭.೫. ವೀರ ಶಾಸನಶಿಲ್ಪಗಳು

೭.೬. ಆತ್ಮಬಲಿ ಶಿಲ್ಪಗಳು

೭.೭. ಮಹಾಸತಿ ಶಿಲ್ಪಗಳು

೭.೮. ರೇಖಾ ಚಿತ್ರ

೭

## ಶಾಸನ ಶಿಲ್ಪ

ಶಾಸನಗಳ ಜೊತೆಯಲ್ಲಿದ್ದು ಶಾಸನಗಳ ವಿಷಯವನ್ನು ಸಮರ್ಥಿಸುವ ಶಿಲ್ಪಗಳನ್ನು 'ಶಾಸನಶಿಲ್ಪಗಳು' ಎಂದು ಕರೆಯುತ್ತೇವೆ. ದಕ್ಷಿಣ ಗದಗು ಜಿಲ್ಲೆಯ ಅನೇಕ ಭಾಗದಲ್ಲಿ ಉತ್ತಮ ಶಾಸನಶಿಲ್ಪಗಳು ದೊರೆಯುತ್ತವೆ. ಶಾಸನಶಿಲ್ಪದ ಅಧ್ಯಯನದ ಸಂದರ್ಭದಲ್ಲಿ ಇದು ಬೆಳೆದುಬಂದ ಬಗೆಯನ್ನು ನಾವು ಮೊದಲಿಗೆ ಗಮನಿಸಬೇಕಾಗುತ್ತದೆ. ಆದಿ ಹಳೆಶಿಲಾಯುಗದಿಂದ ನೋಡಿದರೆ ಮೊದಲಿಗೆ ರೇಖಾಚಿತ್ರಗಳು ಹಲವು ಮಾಹಿತಿಗಳನ್ನು ನೀಡುತ್ತಾ ಬಂದಿವೆ. ಆದಿ ಹಳೆಶಿಲಾಯುಗದ ಮಾನವನ ಕಲಾತ್ಮಕ ಕೆತ್ತನೆಗಳು, ಗುಹೆಗಳ ಗೋಡೆ ಮತ್ತು ಬಂಡೆಗಳ ಮೇಲೆ ಕಂಡುಬಂದಿವೆ. ಅವುಗಳಲ್ಲಿ ಪ್ರಧಾನವಾಗಿ ಗೂಳಿ, ಹಸು, ಕುರಿ, ಕೋಣ, ಹಂದಿ, ಹುಲಿ, ಜಿಂಕೆ, ಪಾರಿವಾಳ, ಮೊದಲಾದುವುಗಳನ್ನು ರೇಖಾಚಿತ್ರ ಮತ್ತು ಉಬ್ಬುಚಿತ್ರಗಳಲ್ಲಿ ಕೆತ್ತಲಾಗಿದೆ. ಕೆಲವು ಕಡೆ ಅವುಗಳಿಗೆ ಕೆಂಪು ಮತ್ತು ಕಪ್ಪು ಬಣ್ಣಗಳನ್ನು ಬಳಿಯಲಾಗಿದೆ. ಗೂಳಿಗಳು ಉದ್ದನೆಯ ಕೊಂಬು, ಭುಜ ಮತ್ತು ದಷ್ಟಪುಷ್ಟ ದೇಹಗಳಿಂದ ಕೂಡಿವೆ. ಇವುಗಳಲ್ಲಿ ಲಿಪಿಗಳಿಲ್ಲದಿದ್ದರೂ ಅವುಗಳ ಅರ್ಥ ಬಹುತೇಕ ಜನರಿಗೆ ಅರ್ಥವಾಗುತ್ತದೆ. ಅಲ್ಲದೆ ಹರಪ್ಪ ಸಂಸ್ಕೃತಿಯಲ್ಲಿ ಸಿಗುವ ಪಶುಪತಿ, ಡುಬ್ಬದಗೂಳಿ ಮತ್ತು ಮಾತೃದೇವತೆಯ ಮುದ್ರೆಗಳು ಅಂದಿನ ಕಾಲದ ಧಾರ್ಮಿಕ ಜೀವನವನ್ನು ತಿಳಿಸುತ್ತವೆ.

ಶಿಲ್ಪ ಎಂಬ ಪದವು ಹಲವು ಬಗೆಯ ವೃತ್ತಿಗಳಿಗೆ ಮತ್ತು ವಿದ್ಯೆಗಳಿಗೆ ಬಳಸಬಹುದಾದ ಪದವಾಗಿದೆ. ಯಾವುದೇ ಒಂದು ವಾಸ್ತವಿಕ ಇಲ್ಲವೆ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಯನ್ನು 'ಶಿಲ್ಪ' ಎಂದು ಕರೆಯಲಾಗುತ್ತದೆ. ಶಾಸನಶಿಲ್ಪದ ಬೆಳವಣಿಗೆಗೆ ಸುಮಾರು ಒಂದುವರೆ ಸಹಸ್ರ ವರ್ಷಗಳ ಇತಿಹಾಸವಿದೆ. ಇಷ್ಟು ದೀರ್ಘ ಅವಧಿಯಲ್ಲಿ ಶಾಸನ ಶಿಲ್ಪವು ನಾನಾ ಬದಲಾವಣೆಗಳನ್ನು ಪಡೆದು, ಧರ್ಮ, ರಾಜಕೀಯ ಮತ್ತು ಸಂಸ್ಕೃತಿಯ ಬೆಂಬಲದೊಂದಿಗೆ

ಬೆಳೆದುಬಂದಿದೆ. ಕನ್ನಡದ ಅತ್ಯಂತ ಪ್ರಾಚೀನವಾದ 'ಹಲ್ಮಿಡಿ ಶಾಸನ'ವು ಪರಾಕ್ರಮವನ್ನು ಪುರಸ್ಕರಿಸುವುದಕ್ಕಾಗಿಯೇ ಹುಟ್ಟಿದುದು. ಆದರೆ ಈ ಶಾಸನಶಿಲೆಯ ಮೇಲ್ಭಾಗದಲ್ಲಿ ತಿರುಗುತ್ತಿರುವಂತೆ ಕಾಣುವ ಚಕ್ರದ ಗುರುತಿದ್ದು, ಇದು 'ಸುದರ್ಶನಚಕ್ರ' ವೆಂದು ಎಲ್ಲರ ನಂಬಿಕೆ. ಅಂದರೆ ಲಿಪಿ ಇಲ್ಲದ ಶಾಸನದಲ್ಲಿ ಶಿಲ್ಪ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ ಎಂಬುದನ್ನು ಡಾ||ಡಿ.ವಿ.ಪರಮಶಿವಮೂರ್ತಿಯವರು ತಮ್ಮ 'ಕನ್ನಡ ಶಾಸನಶಿಲ್ಪ' ಕೃತಿಯಲ್ಲಿ ತಿಳಿಸಿದ್ದಾರೆ.[೧] ಶಾಸನಗಳಲ್ಲಿ ಲಿಪಿಭಾಗವನ್ನು ಹೊರತುಪಡಿಸಿ, ಅದರಲ್ಲಿ ಇರುವ ಶಿಲ್ಪದ ಭಾಗವಾದ ದೇವತೆಗಳ, ಪ್ರಾಣಿಗಳ ಮತ್ತು ಪ್ರಕೃತಿಯ ಚಿತ್ರಗಳನ್ನು ಬಿಡಿಸಿರುವ ಭಾಗಕ್ಕೆ ಶಾಸನಶಿಲ್ಪವೆಂದು ಕರೆಯಬಹುದು. ಇವು ಅನಕ್ಷರಸ್ಥ ಮನುಷ್ಯನಿಗೆ ಸಂಪೂರ್ಣವಾಗಿ ವಿಷಯವನ್ನು ತಿಳಿಸಲು ಆಗದೇ ಇದ್ದರೂ ಸಹ ಮೇಲ್ನೋಟಕ್ಕೆ ಬಹಳಷ್ಟು ವಿಷಯಗಳನ್ನು ತಿಳಿಸುತ್ತದೆ. ಶಾಸನಶಿಲ್ಪದ ಬೆಳವಣಿಗೆಯನ್ನು ಗುರುತಿಸಲು ದಾನಶಾಸನಗಳಿಗಿಂತಲೂ ಸ್ಮಾರಕಶಾಸನಗಳು ಹೆಚ್ಚು ಸಹಾಯಕವಾಗುತ್ತವೆ.

ಶಿಲ್ಪಶಾಸ್ತ್ರದ ಸ್ವರೂಪ ಮತ್ತು ಅದರ ಲಕ್ಷಣದ ಬಗ್ಗೆ ನಮ್ಮ ಶಿಲ್ಪಶಾಸ್ತ್ರ ಗ್ರಂಥಗಳು ಸೋದಾಹರಣವಾಗಿ ವಿವರಿಸುತ್ತವೆ. ಆದರೆ ಇದರ ಹಿನ್ನೆಲೆಯಲ್ಲಿ ಶಾಸನಶಿಲ್ಪದ ಸ್ವರೂಪ ಮತ್ತು ಉದ್ದೇಶಗಳನ್ನು ವಿವರಿಸಲು ಸಾಧ್ಯವಿಲ್ಲ. ಶಿಲ್ಪಶಾಸ್ತ್ರದ ಶೈಲಿಯ ಅನುಕರಣೆ ಮಾತ್ರ ಈ ಶಾಸನ ಶಿಲ್ಪದಲ್ಲಿ ಕಂಡುಬರುತ್ತದೆಯೇ ಹೊರತು ಶಾಸ್ತ್ರಬದ್ಧವಾದ ನಿರೂಪಣೆ, ಚೌಕಟ್ಟು ಅಲ್ಲ. ಶಾಸ್ತ್ರೀಯ ಶಿಲ್ಪಶಾಸ್ತ್ರದ ಹಿನ್ನೆಲೆಯ ಶಿಲ್ಪಗಳ ಉದ್ದೇಶಗಳೇ ಬೇರೆ. ಶಾಸನಶಿಲ್ಪದ ಉದ್ದೇಶಗಳೇ ಬೇರೆ. ಆದ್ದರಿಂದ ಶಾಸನಶಿಲ್ಪದ ಸ್ವರೂಪ ಮತ್ತು ಉದ್ಧೇಶಗಳನ್ನು ತಿಳಿಯುವ ಕ್ರಮದಲ್ಲಿ ಅದರ ಹುಟ್ಟು, ವಿಕಾಸ, ಬೆಳವಣಿಗೆಯ ಹಾದಿಯನ್ನು ನಾವು ಗಮನಿಸಬೇಕಾಗುತ್ತದೆ. ಲಿಪಿ ಇಲ್ಲದಿದ್ದಾಗ ಅಥವಾ ಸಂಪೂರ್ಣವಾಗಿ ಲಿಪಿ ನಾಶವಾದಾಗ ಆ ಶಾಸನದಶಿಲ್ಪವು ಅಧ್ಯಯನಕ್ಕೆ ಇಂಬುಕೊಡುತ್ತದೆ. ಕೆಲವು ಸಂದರ್ಭದಲ್ಲಿ ಅಕ್ಷರದಲ್ಲಿ ಹೇಳಲಾಗದ ಬಹಳಷ್ಟು ಮಾಹಿತಿ ಶಿಲ್ಪದಲ್ಲಿ ಸಿಗುತ್ತದೆ. (ಉದಾಹರಣೆಗೆ ಮಿಥುನ ಶಿಲ್ಪಗಳು). ಶಾಸನಗಳಲ್ಲಿ ಲಿಪಿ ವಿಷಯವಸ್ತುವನ್ನು ಕೊಟ್ಟರೆ, ಅದರ ಶಿಲ್ಪ ರೂಪಚಿತ್ರವನ್ನು ಕೊಡುತ್ತದೆ. ಇಂತಹ ಶಿಲ್ಪಗಳಲ್ಲಿ ಅಂದಿನ ವ್ಯಕ್ತಿಗಳ ಸ್ಥಾನಮಾನ, ವ್ಯಕ್ತಿತ್ವ, ಸಾಮಾಜಿಕ, ಧಾರ್ಮಿಕ ಜೀವನದ ಹಲವಾರು ವೈಶಿಷ್ಟ್ಯಗಳು ತಿಳಿದುಬರುತ್ತವೆ. ಸಾಮಾನ್ಯವಾಗಿ ಶಿಲ್ಪದಲ್ಲಿ ಎರಡು ವಿಧ ೧) ದುಂಡುಶಿಲ್ಪ ೨) ಉಬ್ಬುಶಿಲ್ಪ. ದುಂಡುಶಿಲ್ಪವನ್ನು ಯಾವ ದಿಕ್ಕಿನಿಂದಾದರೂ ನೋಡಬಹುದು ಮತ್ತು ತಿರುಗಿಸಿ ವೀಕ್ಷಿಸಬಹುದು. ಅದಕ್ಕಾಗಿಯೇ ಇದನ್ನು ಪೂರ್ಣಶಿಲ್ಪವೆಂದು ಕರೆಯಲಾಗುತ್ತದೆ. ಆದರೆ ಉಬ್ಬುಶಿಲ್ಪವನ್ನು ನೇರವಾಗಿ ನಿಂತು ವೀಕ್ಷಿಸಬೇಕು. ಏಕೆಂದರೆ ಇದು ಒಂದು ಮೂಲವಸ್ತುವಿಗೆ ಅಂಟಿಕೊಂಡು ನಿಂತಿರುವ ಶಿಲ್ಪವಾಗಿರುತ್ತದೆ.

ಈ ಅಧ್ಯಾಯದಲ್ಲಿ ಶಾಸನಶಿಲ್ಪವನ್ನು ದಾನಶಾಸನಶಿಲ್ಪ, ಸ್ಮಾರಕಶಾಸನಶಿಲ್ಪ ಮತ್ತು ಮಹಾಸತಿಶಿಲ್ಪಗಳೆಂದು ಮೂರು ಭಾಗಗಳಾಗಿ ವಿಂಗಡಿಸಿ ನೋಡಲಾಗಿದೆ.

**೭.೧. ದಾನಶಾಸನ ಶಿಲ್ಪಗಳು**

ಶಾಸನಗಳಲ್ಲಿ ದಾನಕ್ಕೆ ವಿಶೇಷವಾದಂತಹ ಮಹತ್ವವನ್ನು ನೀಡಲಾಗಿದೆ. ದಾನಗಳಲ್ಲಿ ಕೆಲವು ದಾನಗಳನ್ನು ಮಹಾದಾನಗಳೆಂದು ಕರೆಯಲಾಗಿದೆ. ದಕ್ಷಿಣ ಗದಗ ಜಿಲ್ಲೆಯಲ್ಲಿ ದೊರೆಯುವ ಬಹಳಷ್ಟು ಶಾಸನಗಳಲ್ಲಿ ದಾನಶಾಸನಗಳೇ ಪ್ರಮುಖವಾಗಿವೆ. ಇವುಗಳಲ್ಲಿ ಭೂದಾನ, ಸುವರ್ಣ, ಹೂವಿನತೋಟ, ಗಾಣ, ಎಣ್ಣೆ, ಅಂಗಡಿ, ತೆರಿಗೆ ಹೀಗೆ ಹಲವಾರು ದಾನಗಳನ್ನು ನೀಡಲಾಗಿದೆ. ಇಂತಹ ದಾನಶಾಸನಶಿಲ್ಪವನ್ನು ಜೈನ ದಾನಶಾಸನಶಿಲ್ಪ , ವೈಷ್ಣವ ದಾನಶಾಸನಶಿಲ್ಪ, ಶೈವ ದಾನಶಾಸನಶಿಲ್ಪ ಮತ್ತು ಗೋಸಹಸ್ರದಾನ ಶಿಲ್ಪಗಳೆಂದು ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೭.೧.೧. ಜೈನ ದಾನಶಾಸನ ಶಿಲ್ಪ**

ಜೈನಧರ್ಮವು ಭಾರತದ ಧರ್ಮಗಳಲ್ಲಿ ಪ್ರಾಚೀನವಾದುದಾಗಿದೆ. ಜೈನಧರ್ಮದಲ್ಲಿ ದಾನಕ್ಕೆ ಬಹಳ ಮಹತ್ವವನ್ನು ನೀಡಲಾಗಿದೆ. ಜೈನರ ದಾನಶಾಸನಶಿಲ್ಪಗಳಲ್ಲಿ ಸಾಮಾನ್ಯವಾಗಿ ತೀರ್ಥಂಕರನು ಕುಳಿತ ಅಥವಾ ನಿಂತ ಭಂಗಿಯಲ್ಲಿರುವ ಚಿತ್ರಣವಿರುತ್ತದೆ. ಶಾಸನದ ಮೇಲ್ಭಾಗದಲ್ಲಿ (ಲಲಾಟದಲ್ಲಿ) ಎಡ ಹಾಗೂ ಬಲಭಾಗದಲ್ಲಿ ಸೂರ್ಯ–ಚಂದ್ರರನ್ನು ಬಿಡಿಸಲಾಗಿದ್ದು, ಜಿನ ಮೂರ್ತಿಯ ತಲೆಯ ಸ್ವಲ್ಪ ಮೇಲ್ಭಾಗದಲ್ಲಿ ಮುಕ್ಕೊಡೆಯನ್ನು, ಆ ಕೊಡೆಯ ಎರಡೂ ಕಡೆಗೆ ಚಾಮರಗಳನ್ನು ಚಿತ್ರಿಸಲಾಗಿರುತ್ತದೆ. ಅಲ್ಲದೆ ಯಕ್ಷರನ್ನು ಜೊತೆಗೆ ಆ ದಾನವನ್ನು ನೀಡಿರುವ ದಂಪತಿಗಳ ಚಿತ್ರವನ್ನು ಚಿತ್ರಿಸಲಾಗಿದೆ. ಅಲ್ಲದೆ ಆಕಳು ಮತ್ತು ಕರುವಿನ ಚಿತ್ರವನ್ನು ಬಿಡಿಸಲಾಗಿದೆ. ಇಂತಹ ಶಾಸನಗಳು ಗದಗ[೨], ಲಕ್ಕುಂಡಿ[೩], ಲಕ್ಷ್ಮೇಶ್ವರ[೪] ಮುಂತಾದಕಡೆ ನೋಡಬಹುದು.

ಇನ್ನು ಕೆಲವು ಶಾಸನಗಳಲ್ಲಿ ಕೇವಲ ಹುಲಿಮುಖದ ಒಳಗೆ ಧ್ಯಾನಾಸಕ್ತನಾಗಿ ಕುಳಿತಿರುವ ಶಿಲ್ಪವು ಇದೆ. ಇಂತಹ ಶಾಸನ ಶಿಲ್ಪಗಳನ್ನು ಲಕ್ಕುಂಡಿ[೫], ಗದುಗಿನ[೬] ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ನೋಡಬಹುದು. ಲಕ್ಕುಂಡಿಯ ಅತ್ತಿಮಬ್ಬೆ ಶಾಸನದಲಿ[೭] ಶಿಲ್ಪದಭಾಗವನ್ನು ಮೂರು ಮಂಟಪಗಳನ್ನಾಗಿ ವಿಭಾಗಿಸಿ ಮಧ್ಯದ ಮಂಟಪದಲ್ಲಿ ಯಕ್ಷರಿಂದ ಕೂಡಿದ ಜಿನಮೂರ್ತಿಯು ಎಡ ಹಾಗೂ ಬಲ ಭಾಗಗಳ ಮಂಟಪದಲ್ಲಿ ಹಾಲುಣಿಸುತ್ತಿರುವ ಆಕಳಿನ ಶಿಲ್ಪವು ಇವೆ. ಈ ಶಾಸನದ ಇಡೀ ಶಿಲ್ಪವು ದೇವಾಲಯದ ಮುನ್ನೋಟದ ಚಿತ್ರವನ್ನು ನೀಡುತ್ತದೆ. ಜೊತೆಗೆ ಮುಕ್ಕೊಡೆ, ಕಲ್ಲಿನಲ್ಲಿ ಶಾಪಾಶಯದ ಧ್ವನಿರೂಪವಾದ ಕೈಗತ್ತಿಯನ್ನು ಹಾಗೂ ಹಾಲುಣಿಸುತ್ತಿರುವ ಗೋವನ್ನು ಕೆತ್ತಲಾಗಿದೆ. ಇದರ ಅರ್ಥ ದಾನವನ್ನು ಅಪಹರಿಸಿದರೆ ಗೋವನ್ನು ಕೊಂದ ದೋಷ ಬರುತ್ತದೆ ಎಂಬುದಾಗಿದೆ.

ಮುಂಡರಗಿ ತಾಲೂಕಿನ ಹಮ್ಮಿಗಿ ಗ್ರಾಮದಲ್ಲಿ ಧ್ಯಾನಾಸಕ್ತ ಭಂಗಿಯಲ್ಲಿರುವ ಅಮೃತಶಿಲೆಯ ಜಿನಬಿಂಬವು ಇದ್ದು, ಇದು ಜೈನ ಧಾರ್ಮಿಕ ಕೇಂದ್ರವಾಗಿರುವುದು ತಿಳಿದುಬರುತ್ತದೆ. ಅಲ್ಲದೆ ಗದಗ ತಾಲೂಕಿನ ಕಳಸಾಪುರದಲ್ಲಿ ನಿಂತಭಂಗಿಯಲ್ಲಿ ಸುಮಾರು ೯.೪ಅಡಿ ಎತ್ತರವಿರುವ ಜೈನ ತೀರ್ಥಂಕರ ಮೂರ್ತಿಯು ಸೊಗಸಾಗಿದೆ. ಮುಳಗುಂದದಲ್ಲಿ ಪಾರ್ಶ್ವನಾಥ ಬಸದಿಯ ಹಿಂದೆ ದೊಡ್ಡಬಂಡೆಯಲ್ಲಿ ಜಿನಮೂರ್ತಿಯನ್ನು ನಿರ್ಮಿಸಲು ಪ್ರಯತ್ನಿಸಿ, ಅರ್ಧಕ್ಕೆ ಬಿಟ್ಟಿರುವ ಅರೆಮೂರ್ತಿಯನ್ನು ನೋಡಬಹುದು. ಗದಗ ದಕ್ಷಿಣ ಭಾಗದಲ್ಲಿ ಲಕ್ಕುಂಡಿ, ಡಂಬಳ, ಶಿರೂರ, ಹಮ್ಮಿಗಿ, ಲಕ್ಷ್ಮೇಶ್ವರ, ಅಕ್ಕಿಗುಂದಿ, ಡೋಣಿ, ಡಂಬಳ, ಮೇವುಂಡಿ ಮುಂತಾದ ಗ್ರಾಮಗಳು ಜೈನ ಶಿಲ್ಪದ ಪ್ರಮುಖ ಕೇಂದ್ರಗಳಾಗಿದ್ದವು.

ಇನ್ನು ಕೆಲವು ಶಾಸನಶಿಲ್ಪಗಳಲ್ಲಿ ಮುಖ್ಯ ಮಂಟಪದಲ್ಲಿ ಜಿನನನ್ನು ಕಾಣಬಹುದಲ್ಲದೆ ಇಲ್ಲಿ ಪ್ರತ್ಯೇಕ ಐದು ಅಂಕಣಗಳನ್ನು ನೊಡಬಹುದು. ಇದರಲ್ಲಿ ಧರ್ಮಸಮನ್ವಯತೆ ತೊರುತ್ತದೆ. ನಂದಿ, ಗಣಪತಿ, ಜಿನ, ಲಕ್ಷೀ ಮತ್ತು ಆಕಳನ್ನು ನೋಡುತ್ತೇವೆ. ಅಲ್ಲದೆ ಇದರಲ್ಲಿ ಸೂಕ್ಷ್ಮ ಕೆತ್ತನೆಯನ್ನು ನೋಡಬಹುದು. ಗೋಪುರಾಕೃತಿ, ಅದರಲ್ಲಿ ವಿವಿಧ ಅಲಂಕಾರಿಕ ಚಿತ್ರಗಳನ್ನು ಚಿತ್ರಿಸಲಾಗಿದೆ. ಈ ರೀತಿಯ ಶಾಸನಶಿಲ್ಪಗಳು ಲಕ್ಕುಂಡಿ[೮], ಡೋಣ[೯], ಹೆಬ್ಬಾಳ[೧೦], ಲಕ್ಷ್ಮೇಶ್ವರ[೧೧], ಡಂಬಳ[೧೨] ಮುಂತಾದ ಕಡೆ ನೋಡಸಿಗುತ್ತವೆ.

**೭.೧.೨. ನಿಸಿಧಿ ಶಾಸನಶಿಲ್ಪ**

ಜೈನಧರ್ಮದಲ್ಲಿ ಸಲ್ಲೇಖನ ವ್ರತವನ್ನು ಆಚರಿಸಿ ಮರಣವನ್ನು ಹೊಂದುವ ಪದ್ಧತಿಗೆ ನಿಸಿಧಿ ಎಂದು ಕರೆಯುತ್ತಾರೆ, ಅಂದರೆ "ಉಪಸರ್ಗೇ ದುರ್ಭಿಕ್ಷೇ ಜರಸಿರುಜಾಯಾಂ ಚಸಿ ಪ್ರತಿಕಾರೇ ಧರ್ಮಾಯ ತನುವಿಮೋಚನ ಮಾಹುಃ ಸಲ್ಲೇಖನಾಮಾರ್ಯಃ॥" ಅಂದರೆ ಆಪತ್ಕಾಲದಲ್ಲಿ, ವೃದ್ಧಾಪ್ಯದಿಂದ ಜರ್ಜರಿತನಾದರೆ, ಗುಣಪಡಿಸಲಾಗದಂತಹ ರೋಗದಿಂದ ಬಳಲುತ್ತಿದ್ದರೆ, ಬದುಕುವ ಆಸೆ ಬತ್ತಿಹೋದಾಗ ಸಲ್ಲೇಖನ ವಿಧಾನದಿಂದ ಮರಣವನ್ನು ಆಹ್ವಾನಿಸುವುದೇ ಸಲ್ಲೇಖನವೃತ ಎನ್ನುತ್ತಾರೆ. ಸನ್ಯಾಸ ವಿಧಿಯಿಂದ ಮಡಿದವರ ಸ್ಮಾರಕವಾಗಿ ವೀರರಿಗೆ ವೀರಗಲ್ಲುಗಳನ್ನು ನಿಲ್ಲಿಸಿದಂತೆ, ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇವುಗಳನ್ನು 'ನಿಸಿಧಿ ಕಲ್ಲುಗಳು' ಎಂದು ಕರೆಯುತ್ತಾರೆ. ಇವುಗಳು ಬಸದಿಗಳ ಮುಂದಿನ ಪ್ರತ್ಯೇಕ ಶಿಲಾಫಲಕಗಳಲ್ಲಿ, ಬಸದಿಯ ಕಂಬಗಳ ಮೇಲೆ, ಊರಹೊರಗಿನ ಹೊಲಗಳಲ್ಲಿ ನೆಟ್ಟ ಕಲ್ಲುಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇವುಗಳನ್ನು ಕಂಬಗಳ ಆಕಾರ, ಫಲಕದ ಆಕಾರ, ಪಾದಗಳ ಆಕಾರದ ಶಿಲ್ಪಗಳಾಗಿ ಮೂರು ರೀತಿಯಲ್ಲಿ ನೋಡಬಹುದು.

ಗದಗ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಸೊರಟೂರು[೧೩], ಹೊಸೂರು[೧೪], ಡೋಣಿ[೧೫], ಮುಳಗುಂದ[೧೬] ಗ್ರಾಮಗಳಲ್ಲಿ ನಿಸಿಧಿ ಶಾಸನಶಿಲ್ಪಗಳನ್ನು ನೋಡಬಹುದು. ಡೋಣಿಯ[೧೭] ಹೊಲವೊಂದರಲ್ಲಿ ಸರಳ

ನಿಸಿಧಿ ಕಲ್ಲು ಇದ್ದು, ಇದು ಧ್ಯಾನಾಸಕ್ತನಾಗಿರುವ ಜಿನಮೂರ್ತಿಯನ್ನು ಮಾತ್ರ ಹೊಂದಿದೆ. ಸೊರಟೂರಿನ ಜೈನಬಸದಿಯ ಮುಂದೆ ಇರುವ ನಿಸಿಧಿ ಶಾಸನವು ನರೇಂದ್ರಸೇನನ ಶಿಷ್ಯೆ ಪಮಿಗೌಡತಿಯ ನಿಸಿಧಿಯು ಇದ್ದು, ಇದರಲ್ಲಿ ಮಧ್ಯದಲ್ಲಿ ಕುಳಿತ ತೀರ್ಥಂಕರನ ಮೂರ್ತಿ, ಅದರ ತಲೆ ಮೇಲೆ ಮುಕ್ಕೊಡೆ, ಎಡಭಾಗದಲ್ಲಿ ಸ್ತ್ರೀಯೊಬ್ಬಳು ಕೈಮುಗಿದು ಕುಳಿತುಕೊಂಡಿರುವ ಶಿಲ್ಪವನ್ನು ಚಿತ್ರಿಸಲಾಗಿದೆ. ಹೊಸೂರಿನ ಒಂದು ಶಾಸನದಲ್ಲಿ ಕೇವಲ ಶಿಲ್ಪ ಮಾತ್ರ ಇದ್ದು, ಇನ್ನೊಂದು ಶಾಸನದಲ್ಲಿ ಶಾಸನ ಸಹಿತ ಶಿಲ್ಪವಿದೆ.

ಒಟ್ಟಾರೆಯಾಗಿ ನಿಸಿಧಿ ಶಿಲ್ಪಗಳು ಜೈನಧರ್ಮದ ಉನ್ನತಿ ಮತ್ತು ಮಹತ್ವವನ್ನು ತಿಳಿಸುತ್ತವೆ. ನಿಸಿಧಿಗಳಲ್ಲಿ ಜಿನಮೂರ್ತಿಯನ್ನು ಅತ್ಯಂತ ಗೌರವದಿಂದ ಚಿತ್ರಿಸಲಾಗಿದೆ. ಇವು ಜೈನಧರ್ಮದ ಅಧ್ಯಯನಕ್ಕೆ ಕೈಗನ್ನಡಿಯಾಗಿವೆ.

**೭.೨. ಶೈವ ದಾನಶಾಸನ ಶಿಲ್ಪಗಳು**

ಈ ಭಾಗದಲ್ಲಿ ಶೈವ ಮತ್ತು ವೀರಶೈವ ಎಂದು ಪರಿಗಣಿಸದೆ ಒಂದೇ ದೃಷ್ಟಿಯಲ್ಲಿ ನೋಡಲಾಗಿದೆ. ಕನ್ನಡದ ವಚನಕಾರರಾದ ಬಸವಣ್ಣನವರು "ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ" ಎಂಬ ಮಾತಿನಂತೆ

"ಅನ್ನದೊಳಗೆ ಒಂದಗುಳ
ಹೊನ್ನಿನೊಳಗೆ ಒಂದುವರೆಯ
ಇಂದಿಗೆ, ನಾಳಿಂಗೆ ಬೇಕೆಂದೆನಾದೊಡೆ
ನಿಮ್ಮಾಣೆ ನಿಮ್ಮ ಪ್ರಮಥರಾಣೆ" ಎಂಬ ವಚನದಂತೆ[೧೮]

ಅನ್ನವನು ಇಕ್ಕುವುದು,
ನನ್ನಿಯನು ನುಡಿಯುವುದು,
ತನ್ನಂತೆ ಪರರ ಬಗೆದೊಡೆ ಕೈಲಾಸ ನೆರಮನೆಯೊಕ್ಕು ಸರ್ವಜ್ಞ[೧೯]

ಎಂಬ ಸರ್ವಜ್ಞನ ನುಡಿಯಂತೆ ದಾನಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಈ ಧರ್ಮದ ಶಾಸನ ಶಿಲ್ಪಗಳನ್ನು ಒಂದೆಡೆ ಸೇರಿಸಿದರೆ ಶಿವಲಿಂಗದ ಪೂಜೆ ಮಾಡುತ್ತಿರುವ ಯತಿಗಳ ಚಿತ್ರ, ಅವರ ಹಿಮ್ಮಡಿಯವರೆಗೂ ತಲೆಗೂದಲು ಇರುವುದನ್ನು ಕಾಣಬಹುದು. ಈ ಶಾಸನಶಿಲ್ಪದಲ್ಲಿ ಶಿವಲಿಂಗದ ಚಿತ್ರಣ, ನಂದಿ ಶಿಲ್ಪ, ಜೊತೆಗೆ ಹಸು ಮತ್ತು ಕರು, ಭಕ್ತ ಹಾಗೂ ಆಕಳ ಶಿಲ್ಪ ಕಂಡು ಬರುತ್ತವೆ. ಶೈವ ಧರ್ಮಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಶಿವಲಿಂಗ ಸರ್ವೆಸಾಮಾನ್ಯವಾಗಿರುತ್ತದೆ. ಶಿವಲಿಂಗದ ಅಕ್ಕ ಪಕ್ಕ

ಸೂರ್ಯ–ಚಂದ್ರರ ಚಿತ್ರಣವಿರುತ್ತದೆ. ಜೊತೆಗೆ ಕೆಲವು ಶಾಸನಗಳಲ್ಲಿ ಗಣಪತಿ ಮತ್ತು ಲಕ್ಷ್ಮಿ ಶಿಲ್ಪಗಳು ಇರುವುದನ್ನು ಕಾಣಬಹುದು.

ರಾಷ್ಟ್ರಕೂಟರ ಕಾಲದ ಶಾಸನಗಳು ದೊಡ್ಡದಾಗಿದ್ದು, ಅವು ಎತ್ತರವಾಗಿಯೂ ಇವೆ. ಅಲ್ಲದೆ ಅವರ ಕಾಲದ ಶಾಸನಗಳಲ್ಲಿ ಮಹಿಷಮರ್ಧಿನಿ, ಗಣಪತಿ, ಗೋವು, ಮೇಲ್ಭಾಗದಲ್ಲಿ ಶಿವಲಿಂಗವನ್ನು ಕಾಣಬಹುದಾಗಿದೆ. ಅಲ್ಲದೆ ಹೂಬಳ್ಳಿಗಳ ಕುಸರಿ ಕೆಲಸವನ್ನು ಮಾಡಲಾಗಿದೆ. ಇಂತಹ ಶಾಸನಗಳು ಎಲೆ ಶಿರೂರಿನಲ್ಲಿ[೨೦] ಕಾಣಸಿಗುತ್ತವೆ.

ಲಕ್ಷೇಶ್ವರದ[೨೧] ಸೋಮೇಶ್ವರ ದೇವಾಲಯದ ಬಳಿಯಿರುವ ಶಾಸನದಲ್ಲಿ ತಾವು ಮಾಡಿದ ದಾನಕಾರ್ಯವನ್ನು ಪ್ರಸ್ತುತಪಡಿಸಲಾಗಿದೆ. ಎಲ್ಲ ದಾನಗಳಿಗಿಂತ ಉದಕದಾನ ಉತ್ತಮವಾದುದು, ಪರಮ ಶ್ರೇಷ್ಟವಾದುದು ಎಂಬುದನ್ನು ಅರಿತ ನಮ್ಮ ಜನ ಬಾವಿಗಳನ್ನು ತೊಡಿಸಿ ಜನರಿಗೆ ಅನುಕೂಲ ಮಾಡಿದ್ದಾರೆ. ಅಲ್ಲದೇ ಏತದಿಂದ ನೀರನ್ನು ಎತ್ತಿ ಹಾಯಿಸುತ್ತಿರುವ ಚಿತ್ರಣವನ್ನು ಚಿತ್ರಿಸಲಾಗಿದೆ.

ಶಿವಲಿಂಗದ ಜೊತೆ ಆಕಳು ಮತ್ತು ನಂದಿಯ ಶಿಲ್ಪ :– ಕೆಲವು ಶಾಸನಳಲ್ಲಿ ಶಿವಲಿಂಗದ ಪಕ್ಕದಲ್ಲಿ ಕರುವಿಗೆ ಹಾಲು ಕುಡಿಸುತ್ತಿರುವ ಆಕಳಶಿಲ್ಪ ಇರುವ ಶಾಸನಗಳು ಎಲಿಶಿರೂರ[೨೨], ಲಕ್ಕುಂಡಿ[೨೩], ಲಕ್ಷ್ಮೇಶ್ವರ[೨೪], ಹೆಬ್ಬಾಳ[೨೫], ಕುರ್ತಕೋಟಿ[೨೬], ಡಂಬಳ[೨೭], ಮೇವುಂಡಿ[೨೮], ಗದಗ[೨೯], ಡೋಣಿ[೩೦] ಮುಂತಾದ ಕಡೆ ಕಾಣಸಿಗುತ್ತವೆ.

ವಿಶೇಷವಾಗಿ ಸೊರಟೂರಿನಲ್ಲಿ[೩೧] ಗಜಲಕ್ಷ್ಮಿಯ ಚಿತ್ರವಿರುವ ದಾನಶಾಸನಶಿಲ್ಪಗಳು ಕಂಡುಬರುತ್ತವೆ. ವಿಶೇಷವಾಗಿ ಈ ದಾನಶಿಲ್ಪಗಳಲ್ಲಿ ಸೊಂಡಿಲನ್ನು ಎತ್ತಿ ಎರಡೂ ಕಡೆ ನಿಂತಿರುವ ಆನೆಗಳ ಮಧ್ಯೆ ಗಜಲಕ್ಷ್ಮಿಯ ಶಿಲ್ಪ ಮತ್ತು ಕೆಳಭಾಗದಲ್ಲಿ ಕರುವಿಗೆ ಹಾಲುಣಿಸುತ್ತಿರುವ ಆಕಳ ಶಿಲ್ಪವಿರುವ ಶಾಸನಗಳನ್ನು ಕಾಣಬಹುದಾಗಿದೆ.

**ಮಂಟಪದಲ್ಲಿ ಶಿವಲಿಂಗ–ಭಕ್ತ ಮತ್ತು ನಂದಿಯ ಶಿಲ್ಪ** :– ಕೆಲವು ಶಾಸನಗಳ ಲಲಾಟದಲ್ಲಿ, ಮಂಟಪದಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಪೂಜೆ ಮಾಡುತ್ತಿರುವ ಭಕ್ತನ ಶಿಲ್ಪವಿರುತ್ತದೆ. ಇಲ್ಲಿನ ಮಂಟಪಗಳಿಗೆ ದೇವಾಲಯಗಳಲ್ಲಿರುವಂತೆ ಗೋಪುರಗಳನ್ನು ಚಿತ್ರಿಸಲಾಗಿದ್ದು, ಮಂಟಪದ ಎಡ–ಬಲ ಭಾಗಗಳಲ್ಲಿ ನಂದಿ ಹಾಗೂ ಹಸುವಿನ ಚಿತ್ರವಿರುತ್ತದೆ. ಇಂತಹ ಶಾಸನಶಿಲ್ಪವಿರುವ ಶಾಸನಗಳು ಹೆಬ್ಬಾಳ[೩೨], ಡಂಬಳ[೩೩], ಎಲೆಶಿರೂರು[೩೪], ಡೋಣಿ[೩೫], ಗದಗ[೩೬] ಈ ಗ್ರಾಮಗಳಲ್ಲಿ ಕಾಣಬಹುದಾಗಿದೆ.

ಕೆಲವು ರಾಷ್ಟ್ರಕೂಟರ ಶಾಸನಗಳಲ್ಲಿ ಮೇಲೆ ಲಲಾಟದಲ್ಲಿ ಶಿವಲಿಂಗವಿದ್ದು, ಅದರ ಕೆಳಭಾಗದಲ್ಲಿ ಗಣಪತಿ, ಕರುವಿಗೆ ಹಾಲುಣಿಸುತ್ತಿರುವ ಹಸು ಹಾಗೂ ವಿಷ್ಣುವಿನ ಶಿಲ್ಪವಿರುವ ಶಾಸನಗಳನ್ನು ಕಾಣಬಹುದಾಗಿದೆ.

**ಶಿವಲಿಂಗ-ಭಕ್ತ ಆಕಳ ಶಿಲ್ಪ :-** ಶೈವ ಶಾಸನಗಳಲ್ಲಿ ಹೆಚ್ಚಾಗಿ ಶಿವಲಿಂಗ ಅದರ ಬಳಿ ನಿಂತಿರುವ ಅಥವಾ ಕುಳಿತಿರುವ ಭಕ್ತ ಮತ್ತು ಹಸುವಿನ ಶಿಲ್ಪ ಕಂಡುಬರುತ್ತವೆ. ಇಂತಹ ಶಾಸನಗಳು ಗದಗಿನ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ, ಲಕ್ಕುಂಡಿ[೩೭], ಲಕ್ಷ್ಮೇಶ್ವರ[೩೮], ಶಿಂಗಟಾಲೂರು[೩೯], ಡಂಬಳ[೪೦] ಇಲ್ಲಿ ಕಾಣಬಹುದಾಗಿದೆ.

ಶಿವಲಿಂಗಕ್ಕೆ ಹೂವಿನ ಕಿರೀಟವನ್ನು ತೊಡಿಸಿರುವ ಶಿಲ್ಪಗಳನ್ನು ಹಲವು ಶಾಸನಗಳಲ್ಲಿ ಕಾಣಬಹುದಾಗಿದೆ. ಎಲೆಶಿರೂರಿನ[೪೧] ಒಂದು ಶಾಸನವು ದಾನಮಾಡಿದ ದಂಪತಿಗಳನ್ನು, ಮಧ್ಯೆಮಂಟಪದಲ್ಲಿ ಶಿವಲಿಂಗವಿದ್ದು, ಮುಂದೆ ನಂದಿಯನ್ನು ಖಂಡರಿಸಲಾಗಿದೆ. ಪಕ್ಕದಲ್ಲಿ ಸೂರ್ಯ ಚಂದ್ರರನ್ನು ಬಿಂಬಿಸಲಾಗಿದೆ. ಮಂಟಪವು ಗೋಪುರಾಕೃತಿಯನ್ನು ಹೊಂದಿದ್ದು, ಉಬ್ಬು ಶಿಲ್ಪಗಳಾಗಿ ಕೆತ್ತಲಾಗಿದೆ.

ಕೆಲವು ಶಾಸನಗಳಲ್ಲಿ ಭಕ್ತ, ನಂದಿ, ಆಕಳುಶಿಲ್ಪಗಳನ್ನು ಬಿಡಿಸಲಾಗಿದ್ದು, ಉಬ್ಬು ಶಿಲ್ಪ ಸೊಗಸಾಗಿ ಕಾಣುತ್ತದೆ. ಅಲ್ಲದೆ ಮೇಲ್ಭಾಗದಿಂದ ಇಳಿಬಿದ್ದಿರುವ ಗೊಂಡೆಯು ಚಕ್ರಕಾರದಂತೆ ಛತ್ರಿಯೋಪಾದಿಯಲ್ಲಿ ಕಾಣುತ್ತಿದೆ. ಇಕ್ಕೆಲಗಳಲ್ಲಿ ಸೂರ್ಯ ಚಂದ್ರರ ಶಿಲ್ಪಗಳನ್ನು ಚಿತ್ರಿಸಲಾಗಿದೆ.

**೭.೩.ವೈಷ್ಣವ ಶಾಸನಶಿಲ್ಪ**

ಕರ್ನಾಟಕದ ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವು ಒಂದು. ನಮ್ಮ ರಾಜ್ಯವನ್ನಾಳಿದ ಅನೇಕ ರಾಜಮನೆತನಗಳು ವೈಷ್ಣವ ಧರ್ಮವನ್ನು ಅವಲಂಭಿಸಿದ್ದವು. ಇವುಗಳಲ್ಲಿ ಹೊಯ್ಸಳದೊರೆ ವಿಷ್ಣುವರ್ಧನ, ವಿಜಯನಗರದ ಅರಸರುಗಳು ಮುಖ್ಯರಾದವರು. ಈ ಧರ್ಮದ ದಾನಶಾಸನಗಳ ಮೇಲೆ ಸಾಮಾನ್ಯವಾಗಿ ಶಂಖ, ಚಕ್ರಗಳ ಶಿಲ್ಪವಿರುತ್ತದೆ.

ಕೆಲವು ಶಾಸನಗಳಲ್ಲಿ ವೈಷ್ಣವ ದೇವತೆಗಳಾದ ಗರುಡ, ವಿಷ್ಣು, ಲಕ್ಷ್ಮಿಯರ ಶಿಲ್ಪಗಳು ಇರುತ್ತವೆ. ವೈಷ್ಣವಧರ್ಮದ ಸಂಕೇತ ವಿಷ್ಣುವಿನ ಆಯುಧಗಳಾದ ಶಂಖ ಮತ್ತು ಚಕ್ರಗಳು, ಇವು ಧರ್ಮದ ಲಾಂಛನವೂ ಆಗಿವೆ. ಕೆಲವು ಶಾಸನಗಳಲ್ಲಿ ಗರುಡ, ವಿಷ್ಣು, ವಿಷ್ಣುವಿನ ಎಡ-ಬಲಗಳಲ್ಲಿ ಚಾಮರಕನ್ಯೆಯರು, ಜೊತೆಗೆ ಹಾಲುಣಿಸುತ್ತಿರುವ ಆಕಳು ಅತ್ಯಂತ ಸುಂದರವಾದ ಶಿಲ್ಪವನ್ನು ಹೊಂದಿರುವ ಇಂತಹ ಶಾಸನ ಗದುಗಿನ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ಅದೇ ರೀತಿ ಶಯನಾವಸ್ಥೆಯಲ್ಲಿರುವ ವಿಷ್ಣುವಿನ ಶಿಲ್ಪ ಮೋಹಕವಾಗಿದೆ. ಇಂತಹ ಶಾಸನಗಳು ಸಿಗುವುದು ಅಪರೂಪ. ಬಹುತೇಕ ವೈಷ್ಣವ ದಾನಶಾಸನಗಳಲ್ಲಿ ಗರುಡ, ಶಂಖ, ಚಕ್ರ, ವಿಷ್ಣು ಇವುಗಳನ್ನು ಮಾತ್ರ ನೋಡುತ್ತೇವೆ. ಇನ್ನು ಕೆಲವು ಶಾಸನಗಳಲ್ಲಿ ಎರಡು ಕಡೆ ಗೋವುಗಳನ್ನು, ಸೂರ್ಯಚಂದ್ರರನ್ನು ಚಿತ್ರಿಸಿ, ಮಲಗಿರುವ ವಿಷ್ಣುವಿನ ಬದಿಯಲ್ಲಿ ಭಕ್ತರು ಕುಳಿತಿರುವಂತೆ ಚಿತ್ರಿಸಲಾಗಿದೆ ಇಂತಹ ಶಾಸನಗಳನ್ನು ಲಕ್ಕುಂಡಿ[೪೨], ಗದಗ ಮುಂತಾದ ಕಡೆ ನೋಡಬಹುದು.

## ೭.೪. ಗೋಸಾಸ ಶಾಸನಶಿಲ್ಪ

ಗೋವುಗಳನ್ನು ದಾನ ಮಾಡಿದ ಸಂದರ್ಭಗಳಲ್ಲಿ ಅದರ ನೆನಪಿಗಾಗಿ ನಿಲ್ಲಿಸುತ್ತಿದ್ದ ಶಾಸನಗಳೇ ಗೋಸಾಸ ಶಾಸನಗಳು. ಇದೂ ಸಹ ದಾನಶಾಸನಗಳಲ್ಲಿ ಒಂದು ಪ್ರಕಾರ. ನಮ್ಮ ಪ್ರಾಚೀನ ಭಾರತದಲ್ಲಿ ದಾನಕ್ಕೆ ಬಹಳ ಮಹತ್ವವಿದೆ. ದಾನಗಳಲ್ಲಿ ಶ್ರೇಷ್ಠವಾದ ದಾನವೆಂದರೆ ಗೋದಾನ. ಇದನ್ನು ಋಗ್ವೇದದಲ್ಲಿ ಕಕ್ಷೀವಂತ ಮುನಿಯು ಸೈನಯ ಮಹಾರಾಜನಿಂದ ಅರವತ್ತು ಸಾವಿರ ಗೋವುಗಳನ್ನು ದಾನ ಪಡೆದ ಉಲ್ಲೇಖವಿದೆ. ಮಹಾದಾನಗಳಲ್ಲಿ ಗೋ ಸಹಸ್ರದಾನ ಒಂದು ಪ್ರಮುಖ ದಾನವಾಗಿದೆ. ಇದನ್ನು ಮತ್ಸಪುರಾಣ ಮತ್ತು ಲಿಂಗಪುರಾಣಗಳಲ್ಲಿ ಈ ರೀತಿಯಾಗಿ ವಿವರಿಸಿದ್ದಾರೆ. ದಾನ ನೀಡುವ ವ್ಯಕ್ತಿ ಮೂರುದಿನ ಅಥವಾ ಒಂದುದಿನ ಮೊದಲೇ ಕೇವಲ ಹಾಲನ್ನು ಮಾತ್ರ ಸ್ವೀಕರಿಸುತ್ತ ಉಪವಾಸವಿದ್ದು, ದಾನದ ಮೊದಲು ಧ್ಯಾನ, ಹವನ, ಹೋಮಗಳನ್ನು ಕೈಗೊಳ್ಳಬೇಕು. ಹೋಮಕಾರ್ಯ ಪೂರ್ಣಗೊಂಡ ನಂತರ ಬಲಿಷ್ಠವಾದ ಒಂದು ಗೂಳಿಯನ್ನು ಕರೆತಂದು, ಅದರ ಮೈಗೆ ಸುಗಂಧದ್ರವ್ಯಗಳನ್ನು ಹಚ್ಚಿ, ಅಲಂಕರಿಸಿ ನಂತರ ಆ ಗೂಳಿಯನ್ನು ಒಂದು ಎತ್ತರವಾದ ವೇದಿಕೆಯಲ್ಲಿ ನಿಲ್ಲಿಸಿ, ದಾನ ಮಾಡಲು ತಂದಿರುವ ಸಾವಿರ ಹಸುಗಳಲ್ಲಿ ಸುಲಕ್ಷಣವುಳ್ಳ ಹತ್ತು ಹಸುಗಳನ್ನು ಆರಿಸಿ, ಅವುಗಳ ಮೈಮೇಲೆ ಬಣ್ಣದ ಬಟ್ಟೆಯನ್ನು ಹೊದಿಸಿ, ಅವುಗಳ ಕೊಂಬುಗಳಿಗೆ ಚಿನ್ನದ ಕಳಸಗಳನ್ನು ಜೋಡಿಸಿ, ಅವುಗಳ ಕಾಲಿನ ಗೊರಸಿಗೆ ಬೆಳ್ಳಿಯ ತಗಡನ್ನು ಹೊದಿಸಬೇಕು. ಆ ನಂತರ ಅವುಗಳನ್ನು ವೇದಿಕೆಯ ಬಳಿ ನಿಲ್ಲಿಸಿ, ಅವುಗಳಿಗೆ ಗೌರವಯುತವಾಗಿ ಪೂಜೆ ಸಲ್ಲಿಸಿ, ಅವುಗಳ ಮಧ್ಯ ಒಂದು ಬಂಗಾರದ ನಂದಿಯ ವಿಗ್ರಹವನ್ನು ಇಟ್ಟು, ಅದರ ಕೊರಳಿಗೆ ಚಿನ್ನದ ಗಂಟೆಯನ್ನು ಕಟ್ಟಿ, ಅದರ ಬೆನ್ನಿನ ಮೇಲೂ ರೇಷ್ಮೆ ವಸ್ತ್ರವನ್ನು ಹೊದಿಸಿ, ಸುಗಂಧ ದ್ರವ್ಯಗಳನ್ನು ಸಿಂಪಡಿಸಿ, ಹೂವಿನಿಂದ ಅಲಂಕರಿಸಿ, ನಂತರ ದಾನ ಮಾಡುವವನು ಸರ್ವ ಔಷಧಯುಕ್ತ ಉದಕದಿಂದ ಸ್ನಾನವನ್ನು ಮಾಡಿ, ತನ್ನ ಬೊಗಸೆಯ ತುಂಬ ಹೂವನ್ನು ಹಿಡಿದುಕೊಂಡು ಮಂತ್ರವನ್ನು ಉಚ್ಚರಿಸುತ್ತ ಆ ಹತ್ತು ಹಸುಗಳನ್ನು ಪುಣ್ಯ ನೀಡುವಂತೆ ಪ್ರಾರ್ಥಿಸಬೇಕು. ಅನಂತರ ನಂದಿಯ ಪ್ರತಿಮೆಯನ್ನು ಬ್ರಾಹ್ಮಣರ ಮುಖ್ಯ ಗುರುವಿಗೆ ನೀಡಬೇಕು. ಅದರ ಜೊತೆಯಲ್ಲಿ ಹತ್ತು ಹಸುಗಳಲ್ಲಿ ಎರಡು ಹಸುಗಳನ್ನು ನೀಡಬೇಕು. ಉಳಿದ ಎಂಟು ಹಸುಗಳನ್ನು ಇತರ ಎಂಟು ಮಂದಿ ಬ್ರಾಹ್ಮಣರಿಗೆ ಹಂಚಬೇಕು. ಉಳಿದ ೯೯೦ ಹಸುಗಳನ್ನು ಎಲ್ಲ ಬ್ರಾಹ್ಮಣರಿಗೂ ೧೦ ಅಥವಾ ೫ ರಂತೆ ಹಂಚಬೇಕು. ದಾನ ನೀಡಿದವನು ದಾನನೀಡಿದ ನಂತರ ಮತ್ತೆ ಒಂದು ದಿವಸ ಕೇವಲ ಹಾಲನ್ನು ಮಾತ್ರ ಸೇವಿಸಿ, ಆ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಬೇಕು. ಹೀಗೆ ದಾನಮಾಡಿದವನು ಶಿವನ ಆಶೀರ್ವಾದವನ್ನು ಹೊಂದಬೇಕು. ಈ ರೀತಿ ಮಾಡುವದರಿಂದ ದಾನಮಾಡಿದವನ ತಂದೆ ಮತ್ತು ತಾಯಿಯ ಕಡೆಯ ಸ್ವರ್ಗದಲ್ಲಿರುವ ಹಿರಿಯರನ್ನು ಶಿವನು ಕಾಪಾಡುತ್ತಾನೆ ಎಂದು ವಿವರಿಸಲಾಗಿದೆ.

ಗೋಸಹಸ್ರ ದಾನಶಾಸನಗಳು ಸ್ವರೂಪದ ದೃಷ್ಟಿಯಿಂದ ಬಹಳ ವಿಶಿಷ್ಟವಾದುದಾಗಿದೆ. ಇತರೆ ದಾನಶಾಸನನಗಳಿಗಿಂತ ಪಾಠನಿರೂಪಣೆಯಲ್ಲಿ ಹಾಗೂ ಶಿಲ್ಪ ವಿನ್ಯಾಸದಲ್ಲಿ ಗೋಸಾಸ ಕಲ್ಲುಗಳು ಭಿನ್ನವಾಗಿರುತ್ತವೆ. ಗೋಸಾಸ ಕಲ್ಲುಗಳು ಫಲಕದ ಆಕಾರದಲ್ಲಿರದೇ ಸ್ಥಂಬದ ಮಾದರಿಯಲ್ಲಿರುತ್ತವೆ. ಆದರೂ ಈ ಶಾಸನಗಳ ಆಕಾರವನ್ನು ಸ್ಥಂಬದ ಆಕಾರವೆಂದು ಕರೆಯಲು ಮನಸ್ಸು ಬರುವುದಿಲ್ಲ. ಏಕೆಂದರೆ ಇವು ಕಂಬಗಳಂತೆ ಎತ್ತರವಾಗಿರುವುದಿಲ್ಲ. ಅಲ್ಲದೇ ಕಂಬಗಳಂತೆ ಕೆಳಗಿನಿಂದ ಮೇಲಿನವರೆಗೂ ಒಂದೇ ಆಕಾರದಲ್ಲಿಯೂ ಇರುವುದಿಲ್ಲ. ನೆಲಕ್ಕೆ ಹೂಳುವ ಭಾಗವು ಚೌಕಾಕಾರದಲ್ಲಿ ಅಥವಾ ಆಯತಾಕಾರದಲ್ಲಿ ದೊರೆಯುತ್ತದೆ. ಮೇಲ್ಭಾಗವು ಸುಮಾರು ಮೂರರಿಂದ ನಾಲ್ಕು ಅಡಿ ಎತ್ತರವಾಗಿದ್ದು, ಅರ್ಧ ವೃತ್ತಾಕಾರದ ತುದಿಯನ್ನು ಹೊಂದಿರುತ್ತದೆ. ನೆಲಕ್ಕೆ ಹೂಳುವ ಮತ್ತು ಮೇಲ್ಭಾಗದ ಮಧ್ಯ ಚೌಕಾಕಾರವಾಗಿದ್ದು, ಮೇಲ್ಭಾಗವು ಅಷ್ಟ ಕೋನಾಕೃತಿಯಲ್ಲಿವೆ. ಇಂತಹ ಗೋಸಾಸ ಶಾಸನಗಳು ಗದಗ ತಾಲೂಕಿನ ಸೊರಟೂರಿನಲ್ಲಿ ಇದ್ದು, ಇವು ರಾಷ್ಟ್ರಕೂಟರ ಕಾಲದ ಗೋಸಹಸ್ರ ದಾನವನ್ನು ತಿಳಿಸುತ್ತವೆ. ಇವು ಸೊರಟೂರಿನ[೪೩] ವೀರಭದ್ರ ದೇವಾಲಯದ ಮುಂದೆ ಇದ್ದು, ಇಂದಿಗೂ ಕೂಡ ಅಚ್ಚಳಿಯದೇ ಉಳಿದಿವೆ ಮತ್ತು ಗೋಸಹಸ್ರ ದಾನವನ್ನು ಸಾರುತ್ತವೆ.

**೭.೫. ವೀರ ಶಾಸನಶಿಲ್ಪ**

ಕರ್ನಾಟಕದಲ್ಲಿ ದಾನಶಾಸನಗಳನ್ನು ಬಿಟ್ಟರೆ ಎರಡನೆಯ ಸ್ಥಾನದಲ್ಲಿ ಸಿಗುವ ಶಾಸನಗಳೆಂದರೆ ವೀರಗಲ್ಲುಗಳು. ಇವುಗಳ ಶಿಲ್ಪವನ್ನು ಶಾಸನಸಹಿತ ಶಿಲ್ಪ ಮತ್ತು ಶಾಸನರಹಿತ ಶಿಲ್ಪವೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಆದರೆ ಶಾಸನವಿರಲಿ, ಇಲ್ಲದಿರಲಿ ಆ ವೀರಗಲ್ಲಿನ ಉದ್ದೇಶ ಒಂದೇ ಆಗಿರುತ್ತದೆ. ವೀರಗಲ್ಲುಗಳ ವಿಷಯ ಮತ್ತು ಅವುಗಳಲ್ಲಿರುವ ಶಿಲ್ಪಗಳ ಆಧಾರದ ಮೇಲೆ ವ್ಯಕ್ತಿ-ವ್ಯಕ್ತಿಗಳ ಹೋರಾಟಶಿಲ್ಪ, ವ್ಯಕ್ತಿ-ಪ್ರಾಣಿಗಳ ಹೋರಾಟಶಿಲ್ಪ, ಪ್ರಾಣಿ-ಪ್ರಾಣಿಗಳ ಹೋರಾಟಶಿಲ್ಪ ಮತ್ತು ವೀರಸ್ತಂಭಗಳಶಿಲ್ಪ ಎಂದು ನಾಲ್ಕು ಪ್ರಕಾರದ ಶಿಲ್ಪಗಳಾಗಿ ವಿಂಗಡಿಸಬಹುದು. ೭.೫.೧. **ವ್ಯಕ್ತಿ-ವ್ಯಕ್ತಿಗಳ ಹೋರಾಟಶಿಲ್ಪ**

ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಜೊತೆ ಹೋರಾಡುತ್ತಿರುವ ಶಿಲ್ಪ ಎಂದರೆ, ತನ್ನ ಪ್ರಾಣ ರಕ್ಷಣೆಗಾಗಿಯೋ, ತನ್ನ ನಾಡರಕ್ಷಣೆಗಾಗಿಯೋ ಅಥವಾ ಆಸ್ತಿ, ಸ್ತ್ರೀ, ದನ-ಕರುಗಳ ರಕ್ಷಣೆಗಾಗಿಯೋ ಶತೃಗಳ ಜೊತೆ ಹೋರಾಡುತ್ತಿರುವುದನ್ನು ಸೂಚಿಸುವ ಶಿಲ್ಪಗಳು. ಇವುಗಳನ್ನು ನಾವು ಅಧ್ಯಯನದ ದೃಷ್ಟಿಯಿಂದ ತುರುಗೊಳ್‌ಶಿಲ್ಪ, ಪೆಣ್ಬುಯಲ್‌ಶಿಲ್ಪ, ಊರಳಿವುಶಿಲ್ಪ, ಗಡಿಕಾಳಗಶಿಲ್ಪ ಮತ್ತು ಕಳ್ಳರೊಡನೆ ಹೋರಾಟದಶಿಲ್ಪ ಎಂದು ಐದು ಪ್ರಕಾರವಾಗಿ ವಿಂಗಡಿಸಬಹುದು. ವೀರಗಲ್ಲುಗಳಶಿಲ್ಪದಲ್ಲಿ ಒಂದು ಘಟನೆಯನ್ನು ರಸವತ್ತಾಗಿ ಶಿಲ್ಪ ಚಿತ್ರಿಸಿರುವುದು ತಿಳಿದುಬರುತ್ತದೆ. ಹೋರಾಡುತ್ತಿರುವ ವ್ಯಕ್ತಿಯು ಒಬ್ಬ ಪ್ರಮುಖ ವ್ಯಕ್ತಿಯಾಗಿರುವುದು, ಅವನ ಮೇಲೆ ಹಿಡಿದಿರುವ ಛತ್ರಿ ತಿಳಿಸಿಕೊಡುತ್ತದೆ. ಅನಕ್ಷರಸ್ಥರೂ

ಕೂಡಾ ಈ ಶಿಲ್ಪಗಳನ್ನು ನೋಡಿದ ಕೂಡಲೇ ಅದರ ಭಾವವನ್ನು ನೋಡಿ, ಘಟನೆಯನ್ನು ಅರ್ಥಮಾಡಿಕೊಳ್ಳಬಲ್ಲ ತೆರದಲ್ಲಿ ಇರುತ್ತವೆ. ಹೀಗಾಗಿ ವೀರಗಲ್ಲುಗಳ ಶಿಲ್ಪಗಳು ನಮ್ಮ ಪ್ರಾಚೀನ ಜನರ ಜೀವನದ ಮೌಲ್ಯಗಳನ್ನು ತಿಳಿಸುತ್ತವೆ.

ದಕ್ಷಿಣ ಗದಗ ಜಿಲ್ಲೆಯ ಭಾಗದ ವೀರಗಲ್ಲುಗಳನ್ನು ಗಮನಸಿದರೆ ಬಹುತೇಕ ಮೂರು ಹಂತದಲ್ಲಿ ಸಿದ್ಧಪಡಿಸಿದ ವೀರಗಲ್ಲುಗಳೆ ಹೆಚ್ಚು. ಅದರಲ್ಲಿ ಒಂದನೇ ಹಂತವು ವೀರಗಲ್ಲಿನ ಘಟನೆಯನ್ನು ತಿಳಿಸುವ, ವೀರನು ಹೋರಾಡುತ್ತಿರುವ ಚಿತ್ರಣವನ್ನು, ಎರಡನೆಯದು ಹೋರಾಟದಲ್ಲಿ ಮರಣಹೊಂದಿರುವ ವೀರನನ್ನು ಅಪ್ಸರೆಯರು ಪುಷ್ಪಕ ವಿಮಾನದಲ್ಲಿ, ಪಲ್ಲಕಿಯಲ್ಲಿ ಅಥವಾ ಹೆಗಲ ಮೇಲೆ ಕರೆದೊಯ್ಯುತ್ತಿರುವ ಶಿಲ್ಪವನ್ನು, ಮೂರನೆಯದು ವೀರನು ಸ್ವರ್ಗದಲ್ಲಿ ಆಸೀನನಾಗಿರುವ ಚಿತ್ರಣವನ್ನು ನೀಡುತ್ತವೆ. ಈ ರೀತಿಯ ಶಾಸನಗಳು ರಾಷ್ಟ್ರಕೂಟ ಮತ್ತು ಚಾಲುಕ್ಯರ ಕಾಲದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಶಿಲ್ಪಗಳ ನಿಜವಾದ ಪ್ರತಿಭೆಯು ಮತ್ತು ಅದರ ಜೀವನಾನುಭವದ ಅಭಿವ್ಯಕ್ತಿಯು ಹೆಚ್ಚಾಗಿ ಕಲ್ಯಾಣಚಾಲುಕ್ಯರ ಮತ್ತು ಹೊಯ್ಸಳರ ಕಾಲದ ವೀರಗಲ್ಲುಗಳಲ್ಲಿ ಕಂಡುಬರುತ್ತದೆ. ಇಂತಹ ವೀರಗಲ್ಲುಗಳಲ್ಲಿ ಮೊದಲ ಹಂತದಲ್ಲಿ ವೀರನು ವೀರನ ಜೊತೆ ಹೋರಾಡುತ್ತಿರುವ ವೀರರಸ ಪ್ರಕಟವಾದರೆ, ಎರಡನೇ ಹಂತದಲ್ಲಿ ಅಪ್ಸರೆಯರು ಆತನನ್ನು ದೇವ ಲೋಕಕ್ಕೆ ಒಯ್ಯುತ್ತಿರುವ ಶೃಂಗಾರರಸ ಪ್ರಧಾನವಾಗುತ್ತದೆ. ಮೂರನೆಯ ಹಂತದಲ್ಲಿ ವೀರನು ಯೋಗಮುದ್ರೆಯಲ್ಲಿ ಕುಳಿತ ಶಾಂತರಸ ಎದ್ದು ಕಾಣುತ್ತದೆ. ಹೋರಾಟದಲ್ಲಿ ನಡೆಯುವ ಎಲ್ಲಾ ಅಮಾನುಷ ಕೃತ್ಯಗಳನ್ನು ಶಾಸನದಲ್ಲಿ ಪ್ರತಿಬಿಂಬಿಸಲಾಗುತ್ತದೆ. ಹೋರಾಡುವ ವೀರರು ಬಿಲ್ಲು, ಬಾಣ, ಭರ್ಜಿ, ಕತ್ತಿಗಳನ್ನು ತಮ್ಮ ರಕ್ಷಣೆಗಾಗಿ ಗುರಾಣಿ ಹಿಡಿದಿರುವುದು ಕಂಡುಬರುತ್ತದೆ. ಇನ್ನು ಕೆಲವು ಶಾಸನಶಿಲ್ಪಗಳಲ್ಲಿ ಎರಡು ಪಟ್ಟಿಕೆಯಿದ್ದು, ಅದರಲ್ಲಿ ಒಂದು ವೀರನು ಹೋರಾಡುತ್ತಿರುವ ಚಿತ್ರ ಮತ್ತು ಎರಡನೇ ಪಟ್ಟಿಕೆಯಲ್ಲಿ ಅಪ್ಸರೆಯರು ಅವನನ್ನು ದೇವಲೋಕಕ್ಕೆ ಕೊಂಡೊಯ್ಯುತ್ತಿರುವ ಚಿತ್ರಗಳನ್ನು ಬಿಡಿಸಲಾಗಿದೆ. ಇಂತಹ ಶಾಸನಗಳು ಎಲೆಶಿರೂರ[೪೪], ಲಕ್ಷ್ಮೇಶ್ವರ[೪೫], ಗದಗದಲ್ಲಿ[೪೬] ನೋಡಬಹುದು.

ಲಕ್ಷ್ಮೇಶ್ವರದ[೪೭] ಜೋಡು ಕಪಿಲೆಬಾವಿಯ ಬಳಿ ಇರುವ ವೀರಗಲ್ಲಿನಲ್ಲಿ, ವೀರನು ಕತ್ತಿಯನ್ನು ಬೀಸುತ್ತಿರುವ ದೃಶ್ಯ ಮನಮೋಹಕವಾಗಿದೆ. ತನ್ನ ರಕ್ಷಣೆಗಾಗಿ ಗುರಾಣಿಯನ್ನು ಹಿಡಿದು ವೈರಿಗಳೊಂದಿಗೆ ಹೊರಾಡುತ್ತಿದ್ದಾನೆ ಮಧ್ಯೆದಲ್ಲಿ ಅಪ್ಸರೆಯರು ಅವನನ್ನು ಪುಷ್ಪಕ ವಿಮಾನದಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ದ್ಯಾನಾಸಕ್ತನಾಗಿ ಕುಳಿತ್ತಿದ್ದಾನೆ. ಈ ಶಾಸನದಲ್ಲಿ ಉಬ್ಬು ಶಿಲ್ಪಚಿತ್ರಣ ಸೊಗಸಾಗಿ ಮೂಡಿಬಂದಿದೆ. ಅದೇ ರೀತಿ ಸೊರಟೂರಿನ[೪೮] ಆಂಜನೇಯ ದೇವಸ್ಥಾನದ ಎರಡೂ ಪಕ್ಕದಲ್ಲಿರುವ ವೀರಗಲ್ಲುಗಳಲ್ಲಿ ಆಳೆತ್ತರದ ಬಿಲ್ಲುಗಳನ್ನು ಹಿಡಿದು, ವೈರಿಗಳ ಜೊತೆ ಹೋರಾಡುತ್ತಿರುವ ದೃಶ್ಯ ಸೊಗಸಾಗಿದೆ. ಇದೇ

ಸೊರಟೂರಿನಲ್ಲಿ ಮತ್ತೊಂದು ವೀರಗಲ್ಲಿದ್ದು, ಇದು ಮೇಲ್ಭಾಗದಲ್ಲಿ ಹುಲಿ ಮುಖವನ್ನು ಹೊಂದಿ, ಕುದುರೆಕಾಳಗವನ್ನು ಬಿಂಬಿಸುತ್ತದೆ. ಕುದುರೆಯ ಮೇಲಿರುವ ವೀರನು ಈಟಿಯಿಂದ ಕೆಳಭಾಗದಲ್ಲಿರುವ ವೈರಿಯನ್ನು ತಿವಿಯುತ್ತಿದ್ದರೆ, ಎದುರಿಗಿರುವ ವೀರನು ಬಿಲ್ಲನ್ನು ಹಿಡಿದು, ಬೆನ್ನಿಗೆ ಬತ್ತಳಿಕೆಯನ್ನು ಬಿಗಿದು, ಕುದುರೆಯ ಮೇಲಿರುವ ವೀರನಿಗೆ ಬಾಣವನ್ನು ಬಿಡುತ್ತಿರುವುದು ಮನೋಜ್ಞವಾಗಿದೆ. ಇದೇ ರೀತಿ ಎಲೆಶಿರುಂಜದ[೪೯] ಚಾವಡಿಯ ಬಳಿ ಇರುವ ವೀರಗಲ್ಲುಗಳು ಕುದುರೆಕಾಳಗವನ್ನು ಸೊಗಸಾಗಿ ಬಿಂಬಿಸುತ್ತವೆ. ಇಂತಹ ಕುದುರೆಕಾಳಗದ ವೀರಗಲ್ಲುಗಳು ಲಕ್ಷ್ಮೇಶ್ವರದ[೫೦] ಸೋಮೇಶ್ವರ ದೇವಾಲಯದ ಮುಂದೆ ಮೂರು ಇವೆ. ಮುಳುಗುಂದದಲ್ಲಿ[೫೧] ಇರುವ ವೀರಗಲ್ಲಿನಲ್ಲಿ ವೀರನು ಬಿಲ್ಲನ್ನಿಡಿದು ಯುದ್ಧಕ್ಕೆ ಹೊರಟಿರುವ ಚಿತ್ರವನ್ನು ಮಾತ್ರ ಚಿತ್ರಿಸಲಾಗಿದೆ. ಇದೇ ರೀತಿ ಕದಾಂಪುರದ[೫೨] ಹನುಮಂತ ದೇವಾಯದ ಮುಂದೆ ಎರಡು ಶಿಲ್ಪಗಳಿವೆ.

ಯುದ್ಧಕ್ಕೆ ಹೊರಟು ನಿಂತಿರುವ ಚಿತ್ರಗಳನ್ನು ಹಲವು ಕಡೆ ನೊಡಬಹುದು. ಕೈಯಲ್ಲಿ ಕತ್ತಿ, ಗುರಾಣಿ ಹಿಡಿದು ನಿಂತಿರುವಂತಹ ಶಿಲ್ಪಗಳೂ ಸಹ ಹೋರಾಟದ ಅಂಶಗಳನ್ನು ತಿಳಿಸುತ್ತವೆ. ಇಲ್ಲಿರುವ ವೀರನ ಮೇಲ್ಭಾಗದಲ್ಲಿ ದೊಡ್ಡ ಛತ್ರಿ ಇರುವುದು, ಅವನು ಉನ್ನತ ವ್ಯಕ್ತಿ ಎಂಬುದನ್ನು ತಿಳಿಸುತ್ತದೆ. ಇಂತಹ ಶಿಲ್ಪಗಳು ಎಲೆಶಿರುಜ[೫೩], ಡಂಬಳ[೫೪] ಮತ್ತು ಕದಾಂಪುರಗಳಲ್ಲಿ[೫೫] ಕಾಣುತ್ತೇವೆ.

ಲಕ್ಷ್ಮೇಶ್ವರದಲ್ಲಿರುವ[೫೬] ಲಕ್ಷ್ಮಣೇಶ್ವರ ದೇವಾಯದ ಚಾವಣಿಯಲ್ಲಿರುವ ವೀರಗಲ್ಲೊಂದು ಬಿಲ್ಲು ಬಾಣಗಳನ್ನು ಹಿಡಿದು ಯುದ್ಧಕ್ಕೆ ಹೊರಟಿರುವ ಸಾಲುವೀರರ ಚಿತ್ರವನ್ನು ಚಿತ್ರಿಸುತ್ತದೆ. ವಿಶೇಷವೆಂದರೆ ಎರಡೂ ಪಡೆಯ ವೀರರು ಯುದ್ಧಕ್ಕೆ ಬಿಲ್ಲು ಬಾಣಗಳನ್ನು ಬಳಸಿರುವುದು ಅಂದಿನ ಹೋರಾಟದ ಚಿತ್ರಣವನ್ನು ಬಿಂಬಿಸುತ್ತದೆ. ಇದೇ ರೀತಿ ಗದಗ ಬೆಟಗೇರಿಯ ೧೧ ವೀರಗಲ್ಲುಗಳಿರುವ ಪ್ರದೇಶವನ್ನು ಮಲ್ಲಯ್ಯನ ಕಟ್ಟೆಯೆಂದು ಕರೆಯಲಾಗುತ್ತದೆ. ಇಲ್ಲಿರುವ ವೀರಗಲ್ಲುಗಳ ಬಹುತೇಕ ಮೇಲ್ಭಾಗವು ಗೋಪುರಾಕೃತಿಯನ್ನು ಹೊಂದಿವೆ. ಇದೇ ರೀತಿ ಗದಗಿನ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿನ ವೀರಗಲ್ಲುಗಳು ಬಹುತೇಕ ದೇವಾಲಯದ ಗೋಪುರದ ಚಿತ್ರಣವನ್ನು ಹೊಲುತ್ತವೆ. ಅಲ್ಲದೆ ಮೇಲ್ಭಾಗದ ಮಧ್ಯೆ ಕುಂಭ ಅಥವ ಕಲಶವನ್ನು ಬಿಡಿಸಲಾಗಿದೆ. ಕೆಲವು ಶಾಸನಗಳಲ್ಲಿ ಸಿಂಹಲಲಾಟ, ಕೀರ್ತಿಮುಖಗಳು ಮುಂತಾದ ಶಿಲ್ಪಗಳು ಪ್ರಮುಖವಾಗಿವೆ. ಇವು ಹೆಚ್ಚಾಗಿ ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಾಗಿದ್ದು, ವೀರಗಲ್ಲಿನ ಮೇಲ್ಭಾಗದಲ್ಲಿ ವಿಷ್ಣುವಿನ ವಾಹನವಾದ ಗರುಡನ ಚಿತ್ರವನ್ನು ಬಿಡಿಸಲಾಗಿದೆ. ಎಲೆಶಿರುಂಜದ[೫೭] ವೀರಗಲ್ಲೊಂದರಲ್ಲಿ ಇಂತಹ ಚಿತ್ರಗಳನ್ನು ಬಿಡಿಸಲಾಗಿದೆ. ಒಂದರಲ್ಲಿ ಲಲಾಟದಲ್ಲಿ ಉಗ್ರನರಸಿಂಹನು ಹಿರಣ್ಯಕಷಪುವನ್ನು ತನ್ನ ತೊಡೆಯಮೇಲೆ ಮಲಗಿಸಿಕೊಂಡು ಅವನ ಉದರವನ್ನು ಸೀಳುತ್ತಿರುವ ಚಿತ್ರವಿದೆ. ಕೆಲವು ವೀರಗಲ್ಲುಗಳಲ್ಲಿ ನಂದಿ, ಚಾಮರ, ಶಿವಲಿಂಗ, ಯತಿ ಇರುವ ವೀರಗಲ್ಲುಗಳು ಇವೆ.

ಅಲ್ಲದೆ ವೀರರು ಕೊರಳಲ್ಲಿ, ಕಿವಿಗಳಲ್ಲಿ, ಕೈಯಲ್ಲಿ ಆಭರಣಗಳನ್ನು ಧರಿಸಿ, ತಲೆಯ ಕೂದಲನ್ನು ತುರುಬುಗಟ್ಟಿ ನಿಂತಿರುವುದನ್ನು ಕಾಣಬಹುದು.

೭.೫.೨. **ತುರುಗೊಳ್ ಶಿಲ್ಪ**

ರನ್ನ ಕವಿಯು ತನ್ನ 'ಗದಾಯುದ್ಧ' ಕೃತಿಯಲ್ಲಿ ತುರುಗೊಳ್, ಸ್ತ್ರೀ, ಊರು ರಕ್ಷಣೆಯ ಬಗ್ಗೆ ಈ ರೀತಿ ಹೇಳುತ್ತಾನೆ.

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಜೊಳೂರಟೆವಿನೊಳಂ
ತಱೆಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತುಂ ಷಂಡಂ ॥[೫೮]

ಮೇಲಿನ ಪದ್ಯದ ಆಧಾರದಿಂದ ಆ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು, ಸ್ತ್ರೀಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತು ಎಂಬುದು ತಿಳಿಯುತ್ತದೆ. ಯಾವ ಕಾರಣದಿಂದಲಾದರೂ ಶತ್ರುಗಳು ದನಕರುಗಳನ್ನು ಅಪಹರಿಸಿದಾಗ, ಆ ದನಕರುಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ಆ ಹೋರಾಟದಲ್ಲಿ ಕೆಲವರು ಗೆದ್ದು ಹಿಂತಿರುಗಿದರೆ, ಕೆಲವರು ಸಾವನ್ನಪ್ಪುತ್ತಿದ್ದರು. ಇಂತಹ ವೀರರ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲುಗಳನ್ನು ನಾವು ಸುಲಭವಾಗಿ ಗುರುತಿಸಬಹುದು. ವೀರಗಲ್ಲುಗಳ ಹೋರಾಟದ ಹಂತದ ಶಿಲ್ಪದಲ್ಲಿ ಯಾವುದಾದರೂ ಒಂದು ಕಡೆ ಕೆಲವು ದನಗಳು ನಿಂತಿರುವಂತೆ ಚಿತ್ರಿಸಿರುತ್ತಾರೆ. ಆರಂಭದ ಕಾಲದ ವೀರಗಲ್ಲುಗಳಲ್ಲಿ ವೀರನ ಸಮೀಪ ದನಗಳ ಸಣ್ಣ ಚಿತ್ರವನ್ನು ಬಿಡಿಸುವ ಪದ್ಧತಿಯಿದ್ದು, ಒಂದೇ ಹಂತದಲ್ಲಿ ಶಿಲ್ಪವಿರುತ್ತಿತ್ತು. ನಂತರದ ಕಾಲದ ವೀರಗಲ್ಲುಗಳಲ್ಲಿ ಎರಡರಿಂದ ನಾಲ್ಕು ಹಂತದವರೆಗೆ ಶಿಲ್ಪವಿದ್ದು, ಹೋರಾಟದ ಹಂತದಲ್ಲಿ ದನಕರುಗಳು ಸಾಲಾಗಿ ನಿಂತಿರುವಂತೆ ಬಿಡಿಸಲಾಗಿರುತ್ತದೆ. ಶಿರುಂಜದ ತುರುಗೋಳ್ ವೀರಗಲ್ಲು ವಿಶೇಷವಾಗಿದೆ. ಇದರ ಮೊದಲ ಹಂತದಲ್ಲಿ ವೀರನೊಬ್ಬನು ಹೋರಾಡುವ ಸಂದರ್ಭದಲ್ಲಿ ಬಾಣಗಳು ನೆಟ್ಟಿರುವುದು ಕಂಡುಬರುತ್ತದೆ. ಅಲ್ಲದೆ ಅಂಬರದಲ್ಲಿ ಆತನೆಡೆಗೆ ನುಗ್ಗಿ ಬರುತ್ತಿರುವ ಬಾಣಗಳ ಚಿತ್ರವನ್ನು ಕೂಡ ಬಿಡಿಸಲಾಗಿದೆ . ಈ ತರಹದ ಚಿತ್ರವನ್ನು ಹೊಂದಿದೆ. ವೀರರು ಹೋರಾಡುತ್ತಿರುವ ಚಿತ್ರವನ್ನು ಮಧ್ಯೆದಲ್ಲಿ ಬಿಡಿಸಲಾಗಿದ್ದು, ಸುತ್ತ ದನಕರುಗಳು ಸಾಲಾಗಿ ಓಡುತ್ತಿರುವಂತೆ ಚಿತ್ರಿಸಲಾಗಿದೆ. ಹೋರಾಡುತ್ತಿರುವ ವೀರರು ಸತ್ತ ಶತ್ರುಗಳ ಶವದ ಮೇಲೆಯೇ ಹೋರಾಡುತ್ತಿರುವಂತೆ ಈ ಶಾಸನದಲ್ಲಿ ಬಿಡಿಸಲಾಗಿದೆ. ಗದಗ ತಾಲೂಕಿನ ಶಿರೋಳ[೫೯] ಗ್ರಾಮದ ತುರುಗೋಳ್ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ಪ್ರಮುಖವಾಗಿದೆ. ಮೊದಲ ಹಂತದಲ್ಲಿ ವೈರಿಗಳೊಡನೆ ವೀರನೊಬ್ಬನು ಹೋರಾಡುವ ಚಿತ್ರಣವಿದೆ. ವೀರನ ಹಿಂದೆ ಮೂರು ಜನ ಸ್ತ್ರೀಯರ

ಶಿಲ್ಪಗಳಿವೆ. ಅಲ್ಲದೆ ಅನೇಕ ತುರುಗಳ ಚಿತ್ರವಿದ್ದು, ವೀರನ ಮೇಲೆ ಬಾಣಗಳನ್ನು ಬಿಡುವಂತೆ ಚಿತ್ರಿಸಲಾಗಿದೆ. ಆಕಾಶದಲ್ಲಿ ಬಾಣಗಳು ಏರಿಬರುವುದು ಕಂಡುಬರುತ್ತದೆ. ವೀರನ ಕಾಲಡಿಯಲ್ಲಿ ಸತ್ತ ವ್ಯಕ್ತಿಯ ಚಿತ್ರವಿದೆ. ಶಿಲ್ಪದಲ್ಲಿ ಪ್ರತಿ ವ್ಯಕ್ತಿಯು ತಲೆಯ ಮೇಲೆ ಮುಡಿ ಕಟ್ಟಿರುವುದು ಕಂಡುಬರುತ್ತದೆ. ಇದರಿಂದ ಪುರುಷರು ಕೂಡ ಉದ್ದವಾದ ಕೂದಲುಗಳನ್ನು ಬಿಡುತ್ತಿದ್ದರು ಎಂಬುದು ತಿಳಿಯುತ್ತದೆ.

ಲಕ್ಕುಂಡಿಯ[೬೦] ಒಂದು ವೀರಗಲ್ಲಿನ ಕೆಳಹಂತದಲ್ಲಿ ಹೋರಾಟದ ಚಿತ್ರವಿದ್ದು, ಹೋರಾಡುವವರ ತಲೆಯ ಮೇಲಿನ ಪಟ್ಟಿಕೆಯಲ್ಲಿ ದನಗಳನ್ನು ಚಿತ್ರಿಸಲಾಗಿದೆ. ವೀರನು ಶತ್ರುಗಳ ರುಂಡವನ್ನು ಕಡಿದು ನೆಲಕ್ಕೆ ಚೆಲ್ಲಾಡಿದ್ದಾನೆ. ಎರಡನೇ ಹಂತದಲ್ಲಿ ವೀರನು ಮೋಡಗಳ ನಡುವೆ ಅಪ್ಸರೆಯರೊಡನೆ ಸ್ವರ್ಗಕ್ಕೆ ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಈ ರೀತಿಯಾಗಿ ಒಂದು ಹಂತದಿಂದ ನಾಲ್ಕು ಹಂತದವರೆಗೂ ಚಿತ್ರಿಸಿರುವ ತುರುಗಳ್ ಶಾಸನಶಿಲ್ಪಗಳು ಲಕ್ಕುಂಡಿ[೬೧], ಲಕ್ಷ್ಮೇಶ್ವರ[೬೨], ಶಿರುಂಜಗಳಲ್ಲಿ[೬೩] ದೊರೆಯುತ್ತವೆ.

**೨.೫.೩. ಪೆಣ್ಬುಯ್ಯಲ್ ಶಿಲ್ಪಗಳು**

ಪರರಾಜ್ಯದವರು ಅಥವಾ ಕಳ್ಳರು ಒಂದು ಊರನ್ನು ದೋಚಿದಾಗ, ಸ್ತ್ರೀಯರನ್ನೂ ಅಪಹರಿಸುತ್ತಿದ್ದರು. ಅಲ್ಲದೇ ಅವರ ಮಾನಭಂಗಕ್ಕೂ ಪ್ರಯತ್ನಿಸುತ್ತಿದ್ದರು. ವಿಜಯಶಾಲಿಯಾದ ಅರಸ ಮತ್ತು ಆತನ ಸೈನಿಕರು ಯುದ್ಧದ ನಂತರ ಸೋತ ಊರುಗಳಲ್ಲಿನ ಸ್ತ್ರೀಯರ ಮೇಲೆ ನಡೆಸಿದ ಅತ್ಯಾಚಾರಗಳಿಂದ ಸ್ತ್ರೀಯರ ಹುಯ್ಯಲನ್ನು(ಕೂಗನ್ನು) ಕೇಳಿ ಅವರ ರಕ್ಷಣೆಗೆ ಹೋರಾಡಿ ಮಡಿದ ವೀರರ ವಿಷಯವನ್ನು ತಿಳಿಸುವ ಶಿಲ್ಪಗಳು ಅಥವಾ ಸೀರೆ ಸೆಳೆಯುವುದರ ಮೂಲಕ ಯುದ್ಧವನ್ನು ಸಾರುತ್ತಿದ್ದ ಸಂದರ್ಭದ ಶಿಲ್ಪಗಳು, ಇಂತಹ ವೇಳೆಯಲ್ಲಿ ಸ್ತ್ರೀಯ ಹುಯ್ಯಲನ್ನು (ಕೂಗನ್ನು) ಕೇಳಿ ಅವಳನ್ನು ರಕ್ಷಿಸಲು ಹೋರಾಡಿ ಮಡಿದ ವೀರರ ವಿಷಯವನ್ನು ದಾಖಲಿಸಿರುವ ಅನೇಕ ವೀರಗಲ್ಲುಗಳು ನಮಗೆ ದೊರೆಯುತ್ತವೆ. ಇಂತಹ ಪೆಣ್ಬುಯ್ಯಲ್ ಶಾಸನ ಗದಗ ದಕ್ಷಿಣ ಭಾಗದ ಲಕ್ಕುಂಡಿಯಲ್ಲಿ[೬೪] ಇದೆ. ಈ ಶಾಸನದಲ್ಲಿ ತುರುಗಳ್ ಮತ್ತು ಸ್ತ್ರೀಯರ ರಕ್ಷಣೆ ಎರಡೂ ಕಾರ್ಯವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ೧೧ ದನಗಳ ಚಿತ್ರಣವಿದ್ದು, ಇಲ್ಲಿ ಚಿತ್ರಿತವಾಗಿರುವ ಸ್ತ್ರೀಯರೆಲ್ಲರೂ ಮುಡಿ ಬಿಚ್ಚಿಕೊಂಡು ಇರುವಂತೆ ಚಿತ್ರಿಸಲಾಗಿದೆ. ಅಲ್ಲದೆ ಅವರು ಆತಂಕದಿಂದ ಹೋರಾಟವನ್ನು ನೋಡುತ್ತಾ ನಿಂತಿದ್ದಾರೆ. ಸ್ತ್ರೀಯರೆಲ್ಲರೂ ಮುಡಿಗಳನ್ನು ಬಿಚ್ಚಿರುವುದು ಪುರುಷರ ಆಕ್ರಮಣಕ್ಕೆ ಒಳಗಾಗಿರುವುದನ್ನು ಬಿಂಬಿಸುತ್ತಿರಬಹುದು. ಈ ಶಾಸನದಲ್ಲಿ ಶತ್ರುಗಳನ್ನು ಚಿತ್ರಿಸಿದ್ದು, ಅವರು ಸಾಕಷ್ಟು ಸಂಖ್ಯೆಯಲ್ಲಿದ್ದು, ಕುದುರೆ ಮತ್ತು ನೆಲದ ಮೇಲೆ ನಿಂತು ಹೋರಾಟವನ್ನು ಮಾಡುತ್ತಿದ್ದಾರೆ. ಕೆಲವರು ಶರಣಾಗಿ ಕೈಮುಗಿದು ತಲೆಬಾಗಿ ನಿಂತಿದ್ದಾರೆ. ಒಟ್ಟಾರೆ ಈ ಶಾಸನ ಶಿಲ್ಪದಲ್ಲಿ ಸ್ತ್ರೀಯರ ಮಾನಭಂಗದ ಪ್ರಯತ್ನ ಮತ್ತು ಅವರ ರಕ್ಷಣೆಗೆ ಹೋರಾಡುತ್ತಿರುವ ಶೌರ್ಯವನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಎರಡನೇ ಹಂತದಲ್ಲಿ ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕೊಂಡೊಯ್ಯಲಾಗುತ್ತಿದೆ.

### ೭.೫.೪. ಹುಲಿಬೇಟೆ ಶಿಲ್ಪ

ಪ್ರಾಚೀನ ಕಾಲದಲ್ಲಿ ಮಾನವನು ಬದುಕಲು ಕಲಿತ ವಿದ್ಯೆಯೇ ಬೇಟೆ. ಮನುಷ್ಯನು ಮೊದಲು ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದನು. ಇದು ಮುಂದೆ ಅವನ ಹವ್ಯಾಸಕ್ಕಾಗಿ, ಮೋಜಿಗಾಗಿ, ಕಾಲಾಯಾಪನೆಗಾಗಿ ಅಥವಾ ತಮ್ಮ ಶೌರ್ಯವನ್ನು ಪ್ರದರ್ಶಿಸಲು ಬೇಟೆಯಾಡುತ್ತಿದ್ದರು. ಇಂತಹ ಬೇಟೆಯ ವಿಷಯಗಳು ನಮ್ಮ ಹಲವಾರು ಕಾವ್ಯಗಳಲ್ಲಿ ಚಿತ್ರಿಸಲಾಗಿದೆ. ಕೆಲವು ಕಾವ್ಯಗಳಲ್ಲಿ ಮೋಜಿಗಾಗಿಯಾದರೆ, ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಜನರ ರಕ್ಷಣೆಗಾಗಿ ಜನರ ಬೆಳೆಯನ್ನು ಉಳಿಸಲು ಬೇಟೆಯಾಡಲಾಗುತ್ತದೆ. ಹುಲಿಯನ್ನು ಬೇಟೆಯಾಡುವುದು ಹಿಂದಿನ ಕಾಲದಿಂದಲೂ ಬಂದ ಒಂದು ಧೀರತ್ವದ ಸಂಕೇತ. ಬೇಟೆಯಾಡುವವನು ನಿಜವಾಗಿಯೂ ಬಹಳ ಧೈರ್ಯಶಾಲಿಯಾಗಿರಬೇಕು. ಹಂದಿಯನ್ನು ಕೊಲ್ಲುವಷ್ಟು ಸುಲಭವಾಗಿ ಹುಲಿಯನ್ನು ಕೊಲ್ಲಲು ಸಾಧ್ಯವಿಲ್ಲ. ಕಾರಣ ಮನುಷ್ಯನಿಗಿಂತಲೂ ಅದು ಬಲಿಷ್ಟವಾದ ಪ್ರಾಣಿ. ಇಂತಹ ಬಲಿಷ್ಟವಾದ ಪ್ರಾಣಿಯೊಂದಿಗೆ ಹೋರಾಡಿದ ವಿಷಯವನ್ನು ತಿಳಿಸುವ ವೀರಗಲ್ಲುಗಳು ಕಲಕೇರಿ[೭೫], ಡೋಣಿ[೭೬], ಚಿಕ್ಕಸವಣೂರು[೭೭] ಗ್ರಾಮಗಳಲ್ಲಿ ದೊರೆಯುತ್ತವೆ.

ಕಲಕೇರಿಯಲ್ಲಿರುವ ಹುಲಿಬೇಟೆಕಲ್ಲಿನ ಕೆಳಭಾಗದಲ್ಲಿ ವೀರನು ಹುಲಿಯ ಜೊತೆ ಬಿಲ್ಲು ಬಾಣಗಳನ್ನು ಹಿಡಿದು ಹೋರಾಡುತ್ತಿದ್ದು, ಆತನ ಹಿಂದಿನವರು ಕತ್ತಿ ಗುರಾಣಿಗಳನ್ನಿಡಿದು ಹುಲಿಯ ಜೊತೆ ಹೋರಾಡಲು ಸಿದ್ದವಾಗಿದ್ದಾರೆ. ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ಚಾಮರಗಳನ್ನಿಡಿದು ದೇವಲೋಕಕ್ಕೆ ಪುಷ್ಪಕವಿಮಾನದಲ್ಲಿ ಕರೆತರುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತು ಧ್ಯಾನಾಸಕ್ತನಾಗಿದ್ದು, ಯತಿಯೊಬ್ಬ ಶಿವನನ್ನು ಪೂಜಿಸುತ್ತಿದ್ದಾನೆ. ಎದುರಿಗೆ ನಂದಿ ವಿಗ್ರಹವಿದೆ. ಡೋಣಿಯ ಸಿದ್ಧಲಿಂಗೇಶ್ವರ ದೇವಾಲಯದ ಪಕ್ಕದಲ್ಲಿರುವ ಹುಲಿಬೇಟೆಕಲ್ಲು ವಿಶೇಷವಾಗಿದ್ದು, ಅದರಲ್ಲಿ ಕಾಡಿನ ಚಿತ್ರಣವನ್ನು ಸಹ ಚಿತ್ರಿಸಲಾಗಿದೆ. ಈ ಬೇಟೆ ಕಲ್ಲು ಮೂರು ಹಂತದಲ್ಲಿದ್ದು, ಮೊದಲನೇ ಹಂತದಲ್ಲಿ ಕಾಡಿನಲ್ಲಿ ಇರುವ ಹುಲಿಯನ್ನು ಬಿಲ್ಲು ಬಾಣಗಳನ್ನು ಹಿಡಿದ ವೀರನೊಬ್ಬನು ಅದನ್ನು ಕೊಲ್ಲಲು ಬಾಣವನ್ನು ಹೂಡಿದಂತೆ ಚಿತ್ರಿಸಲಾಗಿದೆ. ಸುತ್ತಲೂ ಮರಗಿಡಗಳನ್ನು ಚಿತ್ರಿಸಲಾಗಿದೆ. ಎರಡನೇ ಹಂತದಲ್ಲಿ ಅಪ್ಸರೆಯರೀರ್ವರು ಚಾಮರಗಳನ್ನಿಡಿದು ವೀರನನ್ನು ತಮ್ಮ ಹೆಗಲ ಮೇಲೆ ಹೊತ್ತುಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಚಿಕ್ಕಸವಣೂರಿನ ಚಾವಡಿಯ ಮುಂದಿರುವ ಹುಲಿಬೇಟೆಕಲ್ಲು ಸಹ ಇದೆ ರೀತಿ ಇರುತ್ತದೆ.

ಗದಗ ಜಿಲ್ಲೆಯ ಹೊಸೂರಿನ[೭೮] ಪಾಳು ದೇವಾಲಯದ ಮುಂಭಾಗದಲ್ಲಿ ಇರುವ ಹುಲಿಬೇಟೆಕಲ್ಲು ವಿಶೇಷವಾದುದಾಗಿದೆ. ಲಿಪಿಯ ದೃಷ್ಠಿಯಿಂದ ೧೨-೧೩ನೇ ಶತಮಾನಕ್ಕೆ ಸೇರುತ್ತದೆ. ಇದರ ವಿಶೇಷವೆಂದರೆ ಹುಲಿಜೇಟೆಯಲ್ಲಿ ನಾಯಿಯನ್ನು ಬಳಸಿರುವುದು. ಮೊದಲನೇ ಹಂತದಲ್ಲಿ ವೀರನು

ಕೈಯಲ್ಲಿ ಆಯುಧವನ್ನಿಡಿದು ಹುಲಿಯ ಜೊತೆ ಹೋರಾಡುತ್ತಿದ್ದಾನೆ, ಇವನಿಗೆ ಎರಡು ನಾಯಿಗಳು ಹೋರಾಟದಲ್ಲಿ ಸಹಕರಿಸುತ್ತಿವೆ. ನಾಯಿಗಳಿಗೆ ಹಗ್ಗವನ್ನು ಕಟ್ಟಲಾಗಿದೆ. ಈ ರೀತಿ ಹುಲಿಯನ್ನು ನಾಯಿಗಳ ಜೊತೆ ವೀರನು ಬೇಟೆಯಾಡುತ್ತಿರುವುದು ವಿಶೇಷ ಶಿಲ್ಪವಾಗಿದೆ. ಎರಡನೇ ಹಂತದಲ್ಲಿ ಚಾಮರವನ್ನಿಡಿದ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಪುಷ್ಪಕವಿಮಾನದಲ್ಲಿ ಕರೆದೊಯ್ಯಲಾಗುತ್ತಿದೆ. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತು ಧ್ಯಾನಾಸಕ್ತನಾಗಿದ್ದಾನೆ. ಯತಿಯೊಬ್ಬ ಎಡಗೈಯಲ್ಲಿ ಘಂಟೆಯನ್ನಿಡಿದು ಪೂಜಿಸುತ್ತಿದ್ದಾನೆ. ಶಿವ ಲಿಂಗಕ್ಕೆ ಹೂವಿನ ಕಿರೀಟವನ್ನು ಇಡಲಾಗಿದೆ. ಎದುರಿಗೆ ನಂದಿ, ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಚಿತ್ರಿಸಲಾಗಿದೆ. ಈ ಶಾಸನದಲ್ಲಿ ಲಿಪಿ ಇದ್ದು ಅದರಲ್ಲಿ ಮಲ್ಲಿದೇವನ ಮಕ್ಕಳಾದ ಬೊಮ್ಮಯ್ಯ, ಮಲ್ಲಯ್ಯ, ಭರಮ ಹಾಗೂ ಮತ್ತೊಬ್ಬನು ಜೊತೆಯಾಗಿ ಕಾಡಿನಲ್ಲಿ ಹುಲಿಯೊಂದಿಗೆ ಹೋರಾಡುವರು. ಆ ವೇಳೆಯಲ್ಲಿ ಮಡಿದ ವೀರನೊಬ್ಬನ ನೆನಪಿಗಾಗಿ ನೆಡಲಾಗಿದೆ. ಮಡಿದ ವೀರ ಯಾರೆಂಬುದು ಅಕ್ಷರ ಅಳಿದಿರುವುದರಿಂದ ತಿಳಿಯಲಾಗದು. ಈ ಶಾಸನವನ್ನು ಮಾದೋಜ ಎಂಬುವನು ಖಂಡರಣೆ ಮಾಡಿರುತ್ತಾನೆ.

**೭.೫.೫. ಪ್ರಾಣಿ–ಪ್ರಾಣಿ ಹೋರಾಟಶಿಲ್ಪ**

ಮಾನವನು ಪ್ರಾಣಿಗಳನ್ನು ಬೇಟೆಯಾಡುವ ಸಂದರ್ಭದಲ್ಲಿ ನಾಯಿಗಳನ್ನು ಬಳಸುತ್ತಿದ್ದನು. ಆದರೆ ಈ ಭಾಗದಲ್ಲಿ ಸಿಂಹ ಮತ್ತು ಆನೆಯ ಹೋರಾಟದ ಒಂದೇ ಒಂದು ಶಿಲ್ಪ ಇದ್ದು, ಇದು ಮುಳಗುಂದದ[೬೯] ಚಂದ್ರನಾಥ ಬಸದಿಯ ಬಳಿ ಇದೆ ಇದರಲ್ಲಿ ಸಿಂಹ ಮತ್ತು ಆನೆ ಹೋರಾಡುತ್ತಿದ್ದು, ಆನೆಯು ಸಿಂಹಕ್ಕೆ ಸೂತು ಶರಣಾಗಿ ನಾಲ್ಕು ಕಾಲುಗಳನ್ನೂರಿ ಬಾಗಿನಿಂತಿದೆ. ಸಿಂಹವು ಎರಡು ಕಾಲುಗಳನ್ನು ಮೇಲೆತ್ತಿ ಗರ್ಜಿಸುತ್ತಿರುವಂತೆ ಚಿತ್ರಿಸಲಾಗಿದೆ.

**೭.೬. ಆತ್ಮಬಲಿ ಶಿಲ್ಪ**

ಧರ್ಮಕ್ಕಾಗಿ, ಆತ್ಮತೃಪ್ತಿಗಾಗಿ ಅಥವಾ ತನ್ನ ನಿಷ್ಠೆಯನ್ನು ಪ್ರದರ್ಶಿಸುವ ಸಲುವಾಗಿ ಅಥವಾ ತಾನು ನಂಬಿದ ಪ್ರೀತಿಯ ವಸ್ತುವಿನ ಅಗಲಿಕೆಯನ್ನು ತಡೆಯಲಾರದೆ ವ್ರತಗಳನ್ನು ಸ್ವೀಕರಿಸಿಯೋ, ಬೆಂಕಿಗೆ ಹಾರಿಯೋ ಅಥವಾ ತಮ್ಮನ್ನು ತಾವೇ ಇರಿದುಕೊಂಡು ಪ್ರಾಣವನ್ನು ಕಳೆದುಕೊಳ್ಳುತ್ತಿದ್ದರು. ಈ ರೀತಿ ಆತ್ಮಾರ್ಪಣೆ ಮಾಡಿಕೊಳ್ಳುವುದು ಅವರಿಗೆ ಬಹಳ ಇಷ್ಟವಾದ ಮತ್ತು ಪರಮಪುಣ್ಯದ ಕೆಲಸವಾಗಿತ್ತು. ಇಂತವರ ಬಗ್ಗೆ ಸಾರ್ವಜನಿಕರೂ ಸಹ ಅಪಾರವಾದ ಭಕ್ತಿ ಗೌರವವನ್ನು ಹೊಂದಿರುತ್ತಿದ್ದರು. ಈ ರೀತಿಯಾಗಿ ಆತ್ಮಾರ್ಪಣೆ ಮಾಡಿಕೊಂಡ ವ್ಯಕ್ತಿಗಳೂ ತಮ್ಮ ಜನ್ಮ ಸಾರ್ಥಕವಾಗೀತೆಂಬ ಭಾವನೆಯನ್ನು ತುಂಬಿಕೊಂಡಿರುತ್ತಿದ್ದರು. ಈ ರೀತಿ ಆತ್ಮಾರ್ಪಣೆ ಮಾಡಿಕೊಂಡ ಘಟನೆಗಳನ್ನು ದಾಖಲಿಸುವ ಶಾಸನಗಳಿವೆ. ಇಂತಹ ಶಾಸನಶಿಲ್ಪಗಳು ಅಭ್ಯಾಸ ಯೋಗ್ಯವಾಗಿವೆ.

ಕ್ರಿ.ಶ.೮೬೫ರ ಮೇವುಂಡಿ[೨೦] ಶಾಸನವು ವೇಳೆವಾಳಿತನವನ್ನು ಕುರಿತು ಪ್ರಸ್ತಾಪಿಸುವ ಮೊಟ್ಟಮೊದಲ ಶಾಸನ. ಈ ಶಾಸನದಲ್ಲಿ ರೆಟ್ಟಿಯಣ್ಣ ಎಂಬುವನು ತನ್ನ ಅರಸನ ಆರೋಗ್ಯ ಸರಿ ಇಲ್ಲ ಎಂದು ತಿಳಿದು, ಅರಸನನ್ನು ನೋಡಲು ತಕ್ಷಣ ಹೊರಡುತ್ತಾನೆ. ಆದರೆ ಅವನು ಬರುವಷ್ಟರಲ್ಲಿ ಅರಸನ ದೇಹವು ಚಿತೆಯಲ್ಲಿ ಉರಿಯುತ್ತಿರುತ್ತದೆ. ತಕ್ಷಣವೇ ಅವನು ಖಡ್ಗದಿಂದ ತನ್ನ ಕತ್ತನ್ನು ಕತ್ತರಿಸಿಕೊಳ್ಳುತ್ತಾನೆ. ಈ ಶಾಸನಶಿಲ್ಪದ ಕೆಳಹಂತದ ಮೂಲೆಯಲ್ಲಿ ಒಬ್ಬ ವ್ಯಕ್ತಿಯು ಒಂದು ಆಳವಾದ ಗುಂಡಿಯೊಳಗೆ ಕುಳಿತಿದ್ದಾನೆ. ಇವನೇ ರೆಟ್ಟಿಯಣ್ಣನಿರಬಹುದು. ಈ ಗುಂಡಿಯು ಕಲ್ಲಿನ ಸಮಾಧಿಯಾಗಿದ್ದು, ಇವನೂ ಕೂಡ ಸಾಯಲು ಸಮಾಧಿಯಲ್ಲಿ ಕುಳಿತಿದ್ದಾನೆ. ಈ ಸಮಾಧಿಯ ಮರಣವನ್ನೆ ನಿಜವಾದ ಅರ್ಥದಲ್ಲಿ ಕಿಟ್ಟುಗಂಟೆ ಎಂದು ಕರೆಯುವುದು. ಇದು ಮುಂದೆ ಅಗ್ನಿಪ್ರವೇಶ ಮಾಡಿದವನಿಗೂ ಕ್ರಿಯಾಪದವಾಗಿ ಬಳಕೆಯಾಗಿರಬಹುದು.

ಇಂತಹ ಒಂದು ಶಾಸನ ಲಕ್ಷ್ಮೇಶ್ವರ[೨೧] ನಗರದ ಹೊರವಲಯದ ಪಾಟೀಲಕುಲಕರ್ಣಿಯವರ ಬಾವಿಯಲ್ಲಿದ್ದು ವಿಶೇಷವಾಗಿದೆ. ಈ ಶಾಸನವು ಕ್ರಿ.ಶ.೧೨ನೇ ಶತಮಾನದ್ದಾಗಿದ್ದು 'ಶ್ರೀಮತು ಮಲ್ಲೆದೇವನ ಡಿಂಗಿರಿಗ ಕೊಪ್ಪಯನು ಜಾವಿಮಲೋವೆಯ ಕಾಲಕೆಳಗೆ ತಲೆಯಲಿವಿಸಿಕೊಂಡ' ಎಂದಿದೆ. ಅಂದರೆ ಮಲ್ಲೆದೇವನ ಸೇವಕನಾದ ಕೊಪ್ಪಯ್ಯನು ಜಾವಿಮಲೋವೆಯ ಸನ್ನಿಧಿಯಲ್ಲಿ ತಲೆ ಕತ್ತರಿಸಿಕೊಂಡು ಪ್ರಾಣ ಅರ್ಪಿಸಿದನು ಎಂದಾಗುತ್ತದೆ. ಶಾಸನ ಶಿಲ್ಪದಲ್ಲಿ ಮೂರು ಹಂತಗಳಿದ್ದು ಕೆಳಗಿನ ಹಂತದಲ್ಲಿ ಕೊಪ್ಪಯ್ಯನು ಒಬ್ಬ ವ್ಯಕ್ತಿಯಿಂದ ತಲೆ ಕತ್ತರಿಸಿಕೊಳ್ಳುತ್ತಿರುವ ದೃಶ್ಯವಿದೆ. ಅವನ ತಲೆ ಪಾದಗಳ ಕೆಳಗೆ ಬಿದ್ದಿದೆ. ಅವನ ಪಕ್ಕದಲ್ಲಿ ಅಲಂಕೃತಗೊಂಡ ಕುದುರೆ ಮತ್ತು ಛತ್ರಿಯನ್ನು ಹಿಡಿದ ವ್ಯಕ್ತಿಯೊಬ್ಬ ನಿಂತಿದ್ದಾನೆ. ಇದು ತಲೆಯನ್ನು ಕತ್ತರಿಸಿಕೊಂಡಿರುವ ಕೊಪ್ಪಯ್ಯನು ಒಬ್ಬ ಪ್ರಮುಖ ಅಧಿಕಾರಿ ಎಂಬುದನ್ನು ಸಂಕೇತಿಸುತ್ತದೆ. ತಲೆಯನ್ನು ಕತ್ತರಿಸಿರುವ ವ್ಯಕ್ತಿ ತನ್ನ ಕೈಯಲ್ಲಿ ಉದ್ದನೆಯ ಖಡ್ಗವನ್ನಿಡಿದು ನಿಂತಿದ್ದಾನೆ. ತಲೆಕಡಿಸಿಕೊಂಡ ಕೊಪ್ಪಯ್ಯ ಪದ್ಮಾಸನದಲ್ಲಿ ಕುಳಿತಿದ್ದು ಇದು ಅವನ ಧನ್ಯತಾಭಾವದಿಂದ ಬಲಿಯಾಗಿದ್ದನ್ನು ಸಂಕೇತಿಸುತ್ತದೆ. ಎರಡನೇ ಹಂತದಲ್ಲಿ ಕೊಪ್ಪಯ್ಯನು ಮಂಟಪದಲ್ಲಿ ಕುಳಿತಿದ್ದು, ಅವನ ಎರಡು ಬದಿಯಲ್ಲಿ ಅಪ್ಸರೆಯರು ಚಾಮರದಿಂದ ಗಾಳಿ ಬೀಸುತ್ತಾ ಪುಷ್ಪಕವಿಮಾನದಲ್ಲಿ ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೇ ಹಂತದಲ್ಲಿ ಕೊಪ್ಪಯ್ಯನು ಶಿವಲಿಂಗದ ಬದಿಯಲ್ಲಿ ಭಕ್ತಿಯಿಂದ ಕೈಮುಗಿದು ಕುಳಿತಿದ್ದಾನೆ. ಯತಿಯೊಬ್ಬ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿದ್ದಾನೆ. ಇದು ಅವನು ಸ್ವರ್ಗಕ್ಕೆ ಸೇರಿರುವುದನ್ನು ಧ್ವನಿಸುತ್ತದೆ. ಇದು ಅತ್ಯಂತ ಅಪರೂಪದ ಆತ್ಮಬಲಿ ಶಾಸನವಾಗಿದ್ದು, ಒಡೆಯನ ಮರಣದ ನಂತರ ತಮ್ಮ ಪ್ರಾಣವನ್ನು ಅರ್ಪಣೆ ಮಾಡುತ್ತಿದ್ದ ಆತ್ಮಬಲಿ ಸಂಪ್ರದಾಯವನ್ನು ತಿಳಿಸುತ್ತದೆ. ಇಂತಹದ್ದನ್ನು ಕನ್ನಡದ ಕಾವ್ಯಗಳು, ಶಾಸನಗಳು ವೇಳೆವಾಳಿ ಮತ್ತು

ಜೋಳವಾಳಿ ಸಂಪ್ರದಾಯವೆಂದು ವರ್ಣಿಸುತ್ತವೆ. ಇಂತಹ ಶಾಸನ ಹಳೇಬೀಡಿನ ಕುವರ ಲಕ್ಷ್ಮೀಧರನ ಶಾಸನವನ್ನು ನೆನಪಿಸುತ್ತದೆ.

ಗದಗ ತಾಲೂಕಿನ ಬೆಳದಡಿಯ[೭೩] ಬಸವಣ್ಣದೇವರ ಗುಡಿಯ ಗೋಡೆಗೆ ನಿಲ್ಲಿಸಿರುವ ಸಿಡಿತಲೆಶಿಲ್ಪವನ್ನು ಇಲ್ಲಿ ಗುರುತಿಸಬಹುದು. ಈ ಶಿಲ್ಪವು ಮೂರು ಹಂತಗಳಲ್ಲಿದ್ದು, ಮೊದಲನೇ ಹಂತದಲ್ಲಿ ಸ್ತ್ರೀಯೋಬ್ಬಳು ಧ್ಯಾನಭಂಗಿಯಲ್ಲಿ ಕುಳಿತಿದ್ದಾಳೆ. ಎದುರಿಗೆ ವ್ಯಕ್ತಿಯೊಬ್ಬ ಖಡ್ಗವನ್ನು ಮೇಲಕ್ಕೆತ್ತಿಡಿದು ನಿಂತಿದ್ದಾನೆ. ಎರಡನೇ ಹಂತದಲ್ಲಿ ಅಪ್ಸರೆಯರು ಆಕೆಯನ್ನು ಹೆಗಲಮೇಲೆ ಹೊತ್ತು ಸ್ವರ್ಗಕ್ಕೆ ಸಾಗುತ್ತಿದ್ದಾರೆ. ಮೂರನೇ ಹಂತದಲ್ಲಿ ಸ್ತ್ರೀಯು ಸ್ವರ್ಗದಲ್ಲಿ ಧ್ಯಾನಾಸಕ್ತಳಾಗಿ ಕುಳಿತಿರುವಂತೆ ಚಿತ್ರಿಸಲಾಗಿದೆ.

**೭.೭. ಮಹಾಸತಿ ಶಿಲ್ಪ**

ಪತಿಯು ಕಾರಣಾಂತರಗಳಿಂದ ಮಡಿದಾಗ, ಅವನ ಸತಿಯು ಕೂಡ ಬೆಂಕಿಗೆ ಬಿದ್ದು ಪ್ರಾಣವನ್ನು ಅರ್ಪಿಸುತ್ತಿದ್ದಳು. ಇದು ಅವಳ ಪತಿಭಕ್ತಿಯನ್ನು ತೋರಿಸುವ ಆಚರಣೆಯಾಗಿತ್ತು. ಆ ರೀತಿ ಹೆಣ್ಣು ಸತಿಯಾಗದಿದ್ದರೆ ಸಮಾಜದಲ್ಲಿ ಅವಳಿಗೆ ಗೌರವವಿರುತ್ತಿರಲಿಲ್ಲ. ಅಲ್ಲದೆ ಪ್ರಾಚೀನ ಕಾಲದಲ್ಲಿ ಪತಿಯಿಲ್ಲದೆ ಸತಿಗೆ ಬದುಕು ಹಾಗೂ ರಕ್ಷಣೆಗೆ ಅನ್ಯಮಾರ್ಗವಿಲ್ಲದೆ ಈ ರೀತಿ ಆಚರಣೆಯನ್ನು ಅನಿವಾರ್ಯವಾಗಿಯಾದರೂ ಆಚರಿಸಬೇಕಾಗಿತ್ತು. ಕರ್ನಾಟಕದ ಮಹಿಳೆಯರು ಈ ಪದ್ಧತಿಯನ್ನು ನಿರಾಕರಿಸಿದ್ದ ಬಗ್ಗೆ ಶಾಸನಗಳಲ್ಲಿ ಎಲ್ಲೂ ಉಲ್ಲೇಖ ದೊರೆಯುವುದಿಲ್ಲ. ಹಾಗೆಂದು ಅನುಮೋದಿಸಿದ್ದರೆಂದು ತಿಳಿಯಬೇಕಾಗಿಲ್ಲ. ಶಾಸನಗಳನ್ನು ಸತಿಪದ್ದತಿಯ ಆಚರಣೆ ಮುಗಿದ ನಂತರ ಹಾಕಿಸುತ್ತಿದ್ದರಿಂದ, ಬೇಕೆಂದೇ ಅದರಲ್ಲಿ ನಿರಾಕರಣೆಯ ಅಂಶಗಳನ್ನು ಪ್ರಕಟಿಸುತ್ತಿರಲಿಲ್ಲ. ಮಹಾಸತಿ ಶಿಲ್ಪಗಳನ್ನು ಅಧ್ಯಯನ ಮಾಡಲು ಈ ಭಾಗದಲ್ಲಿ ಹೆಚ್ಚಾಗಿ ಶಾಸನಗಳು ಇರುವುದಿಲ್ಲ. ಈ ಭಾಗದಲ್ಲಿ ಮುಂಡರಗಿ ತಾಲೂಕಿನ ಕಲಕೇರಿಯಲ್ಲಿ[೭೪] ಒಂದೇ ಒಂದು ಮಹಾಸತಿ ಶಿಲ್ಪವಿರುತ್ತದೆ. ಈ ಸತಿಶಿಲ್ಪವು ಸಣ್ಣದಾದ ನಡುವನ್ನು ಹೊಂದಿದ್ದು, ಎದೆ, ಕೊರಳ ತುಂಬ ಆಭರಣಗಳನ್ನು ಧರಿಸಿ, ಕೇದಗೆ ಗರಿಗಳಿಂದ ಅಲಂಕರಿಸಿದ ಕೂದಲ ಗಂಟನ್ನು ಹಾಕಿಕೊಂಡಿದ್ದಾಳೆ. ಸೀರೆಯ ನೇರಿಗೆ ಪಾದದವರೆಗೂ ತೆರೆ ತೆರೆಯಾಗಿ ಹರಡಿದೆ. ಮಾಸ್ತಿಯ ಎರಡು ಕಿವಿಯ ಭಾಗದಲ್ಲಿ ರಂದ್ರಗಳನ್ನು ಕೊರೆಯಲಾಗಿದೆ. ಈಕೆಯು ಬಲಗೈಯನ್ನು ಮೇಲೆತ್ತಿ ಜನರನ್ನು ಹರಸುತ್ತಿರುವಂತೆ ಇದ್ದು, ಎಡಗೈಯನ್ನು ಕೆಳಭಾಗಕ್ಕೆ ನೀಳವಾಗಿ ಚಾಚಲಾಗಿದೆ. ಕೈಯಲ್ಲಿ ಬಳೆಗಳನ್ನು ಧರಿಸಿದ್ದು, ಕೊರಳಲ್ಲಿ ಪದಕವನ್ನು ಹಾಕಲಾಗಿದೆ. ಗದಗಿನ[೭೫] ಜುಮ್ಮಾಮಸೀದಿಯ ಪಕ್ಕದ ರಸ್ತೆಯಲ್ಲಿ ಮಹಾಸತಿ ಶಿಲ್ಪವಿದ್ದು, ಕೈಯಲ್ಲಿ ನಿಂಬೆಹಣ್ಣನ್ನು ಹಿಡಿದಂತೆ ಚಿತ್ರಸಲಾಗಿದೆ. ಹೊಸೂರಿನಲ್ಲಿ ಎರಡು ಮಹಾಸತಿ ಶಿಲ್ಪಗಳಿದ್ದು, ಇವು ಬಲಗೈಯನ್ನು ಮೇಲೆತ್ತಿ ಹಿಡಿದು, ಎಡಗೈಯಲ್ಲಿ ನಿಂಬೆಹಣ್ಣನ್ನು ಹಿಡಿದುಕೊಂಡಿರುತ್ತಾಳೆ. ತೆಲೆಗೂದಲನ್ನು

ಸುಂದರವಾಗಿ ಬಾಚಿಕೊಂಡಿದ್ದು, ಕೊರಳ ತುಂಬ ವಿವಿಧ ಹಾರಗಳನ್ನು ಧರಿಸಲಾಗಿದೆ. ಜೊತೆಗೆ ಕಳಶ, ಕನ್ನಡಿ, ತೋಳಬಂದಿ, ಬಳೆಗಳು, ನಿಂಬೆಹಣ್ಣು ಇವು ಆಕೆಯು ಮುತ್ತೈದೆಯಾಗಿ ತನ್ನ ಗಂಡನಿರುವ ಸ್ವರ್ಗಲೋಕಕ್ಕೆ ಹೋದುದ್ದನ್ನು ತಿಳಿಸುತ್ತದೆ.

**೭.೮. ರೇಖಾ ಚಿತ್ರ**

ಈ ಪ್ರದೇಶದ ಕೆಲವು ಶಾಸನಗಳಲ್ಲಿ ರೇಖಾಚಿತ್ರಗಳು ನಮಗೆ ದೊರೆಯುತ್ತವೆ. ಮೊದಲಿಗೆ ಚಿತ್ರಗಳು ಪ್ರಾರಂಭವಾದುದೆ ಈ ರೇಖಾಚಿತ್ರಗಳಿಂದ. ಇದಕ್ಕೆ ಅಜಂತ ಮತ್ತು ಬದಾಮಿ ಪ್ರದೇಶಗಳು ಸಾಕ್ಷಿಯಾಗಿವೆ. ಶಾಸನಗಳಲ್ಲಿ ಗಣಪತಿ, ಲಕ್ಷ್ಮಿ, ಸೂರ್ಯ-ಚಂದ್ರರ ರೇಖಾ ಚಿತ್ರಗಳನ್ನು ಬಿಡಿಸಿರುವುದನ್ನು ಕಾಣುತ್ತೇವೆ. ಕೆಲವು ಚಿತ್ರಗಳಲ್ಲಿ ಆಭರಣಗಳನ್ನು ಸಹ ಬಿಡಿಸಲಾಗಿದೆ. ಕೆಲವು ಸಂದರ್ಭಗಳಲ್ಲಿ ಕಲ್ಲಿನ ಮೇಲೆ ಎಣ್ಣೆ ಇತರೆ ಪದಾರ್ಥಗಳನ್ನು ಹಾಕಿರುವುದರಿಂದ ರೇಖಾ ಚಿತ್ರಗಳು ಕಾಣದೆ ಉಳಿಯುವ ಸಂದರ್ಭಗಳು ಹೆಚ್ಚು. ಈ ಭಾಗದಲ್ಲಿ ದೊರೆತಿರುವ ಒಂದು ವಾಮನ ಮುದ್ರೆಕಲ್ಲು ಮುಂಡವಾಡದ[೬] ಕೆರೆಯ ಹಿಂಬದಿಯಲ್ಲಿ ಮತ್ತು ಮಲ್ಲಿಕಾರ್ಜುನಪುರದ[೭] ಹೊಲದಲ್ಲಿ ದೊರೆಯುತ್ತವೆ. ಹೀಗೆ ದಕ್ಷಿಣ ಗದಗ ಭಾಗದ ಶಾಸನಶಿಲ್ಪಗಳು ಶಾಸನಪಾಠಕ್ಕೆ ಪೂರಕವಾಗಿ ನೆರವಾಗುವುದಲ್ಲದೆ, ಅನೇಕ ಹೊಸತನದ ಶಾಸನ ಶಿಲ್ಪಗಳು ದೊರಕಿದ್ದು, ಶಾಸನಶಿಲ್ಪದ ಇತಿಹಾಸಕ್ಕೆ ಕೊಡುಗೆಯನ್ನು ನೀಡಿವೆ.

ಅಡಿಟಿಪ್ಪಣಿಗಳು

೧. ಶಾಸನಶಿಲ್ಪ, ಡಾ॥ಡಿ.ವಿ.ಪರಮಶಿವಮೂರ್ತಿ

೨. ಗದಗ, ಪ್ರಾಚ್ಯವಸ್ತು ಸಂಗ್ರಹಾಲಯ

೩. ಲಕ್ಕುಂಡಿ, ಎಸ್.ಐ.ಐ. ೧೧ ಶಾಸನಸಂಖ್ಯೆ ೫೨ ಕ್ರಿ.ಶ.೧೦೦೭

೪. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾಸನಸಂಖ್ಯೆ ೪. ೫.೬

೫. ಲಕ್ಕುಂಡಿ, ತಾ॥.ಜಿ॥ ಗದಗ

೬. ಗದಗ, ಪ್ರಾಚ್ಯವಸ್ತು ಸಂಗ್ರಹಾಲಯ

೭. ಲಕ್ಕುಂಡಿ, ಎಸ್.ಐ.ಐ. ೧೧ ಶಾಸನಸಂಖ್ಯೆ ೫೨ ಕ್ರಿ.ಶ.೧೦೦೭

೮. ಲಕ್ಕುಂಡಿ, ಎಸ್.ಐ.ಐ. ೧೫ ಶಾಸನಸಂಖ್ಯೆ ೫೫೩ ಕ್ರಿ.ಶ.೧೦೭೬

೯. ಡೋಣಿ, ಅಪ್ರಕಟಿತ. ಸಂ. ಡಾ॥ ಡಿ.ವಿ. ಪರಮಶಿವಮೂರ್ತಿ

೧೦. ಹೆಬ್ಬಾಳ, ಇ.ಐ. ೪ ಪು.ಸಂ. ೩೫೦-೩೫೬ ಕ್ರಿ.ಶ. ೮೭೫

೧೧. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾಸನಸಂಖ್ಯೆ ೪.೫.೬.

೧೨. ಡಂಬಳ, ಎಸ್.ಐ.ಐ. ೧೧ ಶಾಸನಸಂಖ್ಯೆ. ೧೪೪.

೧೩.ಸೊರಟೂರು, ಎಸ್.ಐ.ಐ. ೧೫ ಶಾಸನಸಂಖ್ಯೆ ೬೨೩. ಕ್ರಿ.ಶ.೧೩೪

೧೪. ಹೊಸೂರು. ಎಸ್.ಐ.ಐ. ೧೧ ಶಾಸನಸಂಖ್ಯೆ ೪೭ ಕ್ರಿ.ಶ.೧೦೨೮-೨೯

೧೫. ಡೋಣಿ, ತಾ॥ಮುಂಡರಗಿ ಜಿ॥ಗದಗ

೧೬. ಮುಳಗುಂದ, ಎಸ್.ಐ.ಐ. ೧೫ ಶಾ.ಸಂ. ೬೯೫ ಕ್ರಿ.ಶ.೧೬೪

೧೭. ಡೋಣಿ, ಅಪ್ರಕಟಿತ. ಸಂ. ಡಾ॥ಡಿ.ವಿ.ಪರಮಶಿವಮೂರ್ತಿ

೧೮. ಬಸವಣ್ಣನವರ ವಚನಗಳು, ಸಂ ಡಾ॥ಬಸವರಾಜು

೧೯. ಸರ್ವಜ್ಞನ ವಚನಗಳು

೨೦. ಎಲೆಶಿರೂರು, ಎಸ್.ಐ.ಐ. ೧೧ ಶಾ.ಸಂ. ೨೫ ಕ್ರಿ.ಶ.೯೦೧

೨೧. ಲಕ್ಷ್ಮೇಶ್ವರ, ಎಸ್.ಐ.ಐ. ೨೦ ಶಾ.ಸಂ. ೫೫ ಕ್ರಿ.ಶ.೧೦೮೨

೨೨. ಎಲೆಶಿರೂರು, ಎಸ್.ಐ.ಐ. ೧೧ ಶಾ.ಸಂ.೧೬೭ ಕ್ರಿ.ಶ.೧೧೧೮

೨೩ ಲಕ್ಕುಂಡಿ, ಎಸ್.ಐ.ಐ. ೧೫ ಶಾ.ಸಂ.೫೩೩ ಕ್ರಿ.ಶ.೧೦೭೬

೨೪. ಲಕ್ಷೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೨೫. ಹೆಬ್ಬಾಳ, ತಾ॥ಶಿರಹಟ್ಟಿ ಜಿ॥ಗದಗ

೨೬. ಕುರ್ತುಕೋಟಿ, ಎಸ್.ಐ.ಐ. ೧೧ ಶಾ.ಸಂ.೧೨೭ ಕ್ರಿ.ಶ.೧೦೮೨

೨೭ ಡಂಬಳ, ಎಸ್.ಐ.ಐ. ೧೫ ಶಾ.ಸಂ.೫೭ ಕ್ರಿ.ಶ.೧೧೮೪

೨೮ ಮೇವುಂಡಿ, ಎಸ್.ಐ.ಐ. ೧೧ ಶಾ.ಸಂ.೩೦ ಕ್ರಿ.ಶ.೧೨೪

೨೯ ಗದಗ ಪ್ರಾಚ್ಯವಸ್ತು ಸಂಗ್ರಹಾಲಯ

೩೦. ಡೋಣಿ, ಅಪ್ರಕಟಿತ. ಸಂ. ಡಾ॥ಡಿ.ವಿ.ಪರಮಶಿವಮೂರ್ತಿ

೩೧. ಸೊರಟೂರು, ಎಸ್.ಐ.ಐ. ೧೧ ಶಾ.ಸಂ.೧೨ ಕ್ರಿ.ಶ.೮೬೮

೩೨. ಹೆಬ್ಬಾಳ ಇ.ಐ. ೪ ಪು ಸಂ ೩೫೦-೫೬ ಕ್ರಿ.ಶ.೮೭೫

೩೩. ಡಂಬಳ, ಎಸ್.ಐ.ಐ. ೧೫ ಶಾ.ಸಂ.೫೭ ಕ್ರಿ.ಶ.೧೧೮೪

೩೪. ಎಲೆಶಿರೂರು, ಎಸ್.ಐ.ಐ. ೧೧ ಶಾ.ಸಂ.೧೫೮ ಕ್ರಿ.ಶ.೧೧೦೯

೩೫. ಡೋಣಿ, ಅಪ್ರಕಟಿತ. ಸಂ. ಡಾ॥ಡಿ.ವಿ.ಪರಮಶಿವಮೂರ್ತಿ

೩೬ ಗದಗ ಪ್ರಾಚ್ಯವಸ್ತು ಸಂಗ್ರಹಾಲಯ

೩೭. ಲಕ್ಕುಂಡಿ, ತಾ॥ಜಿ॥ಗದಗ

೩೮. ಲಕ್ಷ್ಮೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೩೯. ಶಿಂಗಟಾಲೂರು, ಅಪ್ರಕಟಿತ. ಸಂ. ಡಾ॥ಡಿ.ವಿ.ಪರಮಶಿವಮೂರ್ತಿ

೪೦. ಡಂಬಳ, ಎಸ್.ಐ.ಐ. ೧೫ ಶಾ.ಸಂ.೫೭ ಕ್ರಿ.ಶ.೧೧೮೪

೪೧. ಎಲೆಶಿರೂರು, ಎಸ್.ಐ.ಐ. ೧೧ ಶಾ.ಸಂ.೧೫೮ ಕ್ರಿ.ಶ.೧೧೦೯

೪೨. ಲಕ್ಕುಂಡಿ, ತಾ॥ಜಿ॥ಗದಗ

೪೩. ಸೊರಟೂರು, ತಾ॥ಜಿ॥ಗದಗ

೪೪. ಎಲೆಶಿರೂರು, ತಾ॥ಜಿ॥ಗದಗ

೪೫. ಲಕ್ಷ್ಮೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೪೬. ಗದಗ ಪ್ರಾಚ್ಯವಸ್ತು ಸಂಗ್ರಹಾಲಯ

೪೭. ಲಕ್ಷ್ಮೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೪೮. ಸೊರಟೂರು, ತಾ॥ಜಿ॥ಗದಗ

೪೯. ಎಲೆಶಿರುಂಜ, ತಾ॥ಜಿ॥ಗದಗ

೫೦. ಲಕ್ಷ್ಮೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೫೧. ಮುಳಗುಂದ, ತಾ॥ಜಿ॥ಗದಗ

೫೨. ಕದಾಂಪೂರ, ತಾ॥ಮುಂಡರಗಿ ಜಿ॥ಗದಗ

೫೩. ಎಲೆಶಿರುಂಜ, ತಾ॥ಜಿ॥ಗದಗ

೫೪. ಡಂಬಳ. ತಾ॥ಮುಂಡರಗಿ ಜಿ॥ಗದಗ

೫೫. ಕದಾಂಪೂರ, ತಾ॥ಮುಂಡರಗಿ ಜಿ॥ಗದಗ

೫೬. ಲಕ್ಷ್ಮೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೫೭. ಎಲೆಶಿರುಂಜ, ತಾ॥ಜಿ॥ಗದಗ

೫೮. ರನ್ನನ ಗದಾಯುದ್ಧ

೫೯. ಶಿರೋಳ, ತಾ॥ಜಿ॥ಗದಗ

೬೦. ಲಕ್ಕುಂಡಿ, ತಾ॥ಜಿ॥ಗದಗ

೬೧. ಲಕ್ಕುಂಡಿ, ತಾ॥ಜಿ॥ಗದಗ

೬೨. ಲಕ್ಷ್ಮೇಶ್ವರ, ತಾ॥ಶಿರಹಟ್ಟಿ ಜಿ॥ಗದಗ

೬೩. ಶಿರುಂಜ, ತಾ॥ಶಿರಹಟ್ಟಿ ಜಿ॥ಗದಗ

೬೪. ಲಕ್ಕುಂಡಿ, ತಾ॥ಜಿ॥ಗದಗ

೬೫. ಕಲಕೇರಿ, ತಾ॥ಮುಂಡರಗಿ ಜಿ॥ಗದಗ

೬೬. ಡೋಣಿ, ತಾ॥ಮುಂಡರಗಿ ಜಿ॥ಗದಗ

೬೭. ಚಿಕ್ಕಸವಣೂರು, ತಾ॥ಶಿರಹಟ್ಟಿ ಜಿ॥ಗದಗ

೬೮. ಹೊಸೂರು, ತಾ॥ಜಿ॥ಗದಗ

೬೯. ಮುಳಗುಂದ, ತಾ॥ಜಿ॥ಗದಗ

೭೦. ಮೇವುಂಡಿ, ಎಸ್.ಐ.ಐ. ೧೧ ಶಾ.ಸಂ.೧೧ ಕ್ರಿ.ಶ.೮೬೫

೭೧. ಲಕ್ಷ್ಮೇಶ್ವರ, ಅಪ್ರಕಟಿತ. ಸಂ. ಡಾ॥ಡಿ.ವಿ.ಪರಮಶಿವಮೂರ್ತಿ

೭೩. ಬೆಳದಡಿ, ತಾ॥ಜಿ॥ಗದಗ

೭೪. ಕಲಕೇರಿ, ತಾ॥ಮುಂಡರಗಿ ಜಿ॥ಗದಗ

೭೫ ಗದಗ

೭೬. ಮುಂಡವಾಡ, ತಾ॥ಮುಂಡರಗಿ ಜಿ॥ಗದಗ

೭೭. ಮಲ್ಲಿಕಾರ್ಜುನಪುರ, ತಾ॥ಮುಂಡರಗಿ ಜಿ॥ಗದಗ

೮

# ಸಮಾರೋಪ

ದಕ್ಷಿಣ ಗದಗು ಜಿಲ್ಲಾ ಭಾಗದ ಪ್ರಾಚೀನ ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾಗಿ ಶಾಸನಗಳು ಹೇಗೆ ನೆರವನ್ನು ನೀಡುತ್ತವೆ ಎಂಬುದನ್ನು ತಿಳಿಯುವುದು ಈ ನಮ್ಮ ಅಧ್ಯಯನದ ಮುಖ್ಯ ಉದ್ದೇಶ. ಇದರ ಜೊತೆಗೆ ಕಾಲಕಾಲಕ್ಕೆ ಈ ಭಾಗದ ಸಾಹಿತ್ಯದ ಬೆಳವಣಿಗೆ, ಸಂಸ್ಕೃತಿ, ವಾಸ್ತುಶಿಲ್ಪ ಹೇಗೆ ಬದಲಾವಣೆ ಆಗುತ್ತಾ ಬಂದವು ಎಂಬ ವಿಷಯಗಳು ಗಮನಿಸಲಾಗಿದೆ. ಇತಿಹಾಸವೆಂದರೆ ಕೇವಲ ಯಾವುದೋ ಒಂದು ಘಟನೆಯ ಸರಮಾಲೆಯಲ್ಲ. ಅನೇಕತೆಯಲ್ಲಿ ಏಕತೆಯನ್ನು, ಏಕತೆಯಲ್ಲಿ ಅನೇಕ ವೈವಿಧ್ಯತೆಯನ್ನು ತೋರಿಸುವ ನಮ್ಮ ಪೂರ್ವಜರ ಚಿಂತನೆಗಳಾಗಿವೆ ಎಂಬುದನ್ನು ತಿಳಿಯುವುದಾಗಿದೆ.

ಶಾಸನಗಳ ಅಧ್ಯಯನವು ಸಾಗರದಷ್ಟು ವಿಶಾಲವಾದುದ್ದಾಗಿದ್ದು, ಅಭ್ಯಸಿಸಿದಷ್ಟು ಹೊಸ ಹೊಸ ವಿಚಾರಗಳು ಬೆಳಕಿಗೆ ಬರುವ ಆಕರಗಳ ಗಣಿಗಳಾಗಿವೆ. ಪ್ರತಿದಿನವು ಹೊಸ ಹೊಸ ಶಾಸನಗಳ ಪ್ರಕಟಣೆಯಾಗುತ್ತಿದ್ದು ಅವುಗಳ ವಿಚಾರಗಳನ್ನು ಬಹಳಷ್ಟು ಜನ ವಿದ್ವಾಂಸರು ಜಗತ್ತಿಗೆ ಮತ್ತು ಅಭ್ಯಾಸ ಕ್ಷೇತ್ರಕ್ಕೆ ದೊರಕಿಸಿಕೊಡುತ್ತಿದ್ದಾರೆ. ಗದಗ ಜಿಲ್ಲೆಯ ಪ್ರದೇಶವು ಬದಾಮಿ ಚಾಲುಕ್ಯರಿಂದಿಡಿದು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿದ್ದು, ಅವರ ಕಾಲದ ಬಹಳಷ್ಟು ಶಾಸನಗಳು ದೊರೆಯುತ್ತವೆ. ದಕ್ಷಿಣ ಗದಗು ಜಿಲ್ಲೆಯು ಪುಲಿಗೆರೆ-೩೦೦, ಬೆಳ್ವೊಲ-೩೦೦ ಮತ್ತು ಮಾಸವಾಡಿ ೧೪೦ಕ್ಕೆ ಸೇರಿದ್ದು, ಮುಳಗುಂದ-೧೨, ಕಿಸುಕಾಡು-೭೦, ಸುರಕ-೧೨, ಅವಗವಾಡಿ-೧೨, ಚಿಂಚಲಿ-೩೦ ಮುಂತಾದಉಪವಿಭಾಗಗಳನ್ನು ಹೊಂದಿದೆ. ಈ ಭಾಗದ ಎಲ್ಲ ಗ್ರಾಮಗಳಲ್ಲಿ ದೊರೆತಿರುವ ಶಾಸನಗಳನ್ನು ಈ ಪ್ರಬಂಧದಲ್ಲಿ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ಮಹಾಭಾರತ, ಸ್ಕಂದ ಪುರಾಣಗಳಲ್ಲಿ ಇಲ್ಲಿಯ ಗ್ರಾಮಗಳ ಹೆಸರುಗಳು ಉಲ್ಲೇಖವಾಗಿರುವುದರಿಂದ ಇಲ್ಲಿನ ಇತಿಹಾಸ ಪುರಾಣಕಾಲದವರೆಗೂ ನಮ್ಮನ್ನು ಸೆಳೆದುಬಿಡುತ್ತದೆ. ಈ ಭಾಗದಲ್ಲಿ ಬದಾಮಿಚಾಲುಕ್ಯರ ಕಾಲದ ಶಾಸನವು ಲಕ್ಷ್ಮೇಶ್ವರ, ಕುರ್ತುಕೋಟೆ ಗ್ರಾಮಗಳಲ್ಲಿ ಕಂಡುಬರುತ್ತವೆಯಲ್ಲದೆ, ಈ ಭಾಗದಲ್ಲಿ ಇವರ

ಆಳ್ವಿಕೆಯನ್ನು ಸಾಕ್ಷಿಸಮೇತ ನಿರೂಪಿಸುತ್ತವೆ. ಇವರ ಮುಂದಿನ ಅರಸರಾದ ರಾಷ್ಟ್ರಕೂಟ ದೊರೆಗಳ ಶಾಸನಗಳು ಅಸುಂಡಿ, ಎಲಿಶಿರೂರ, ಕುರ್ತಕೋಟಿ, ಗದಗ, ಗಾವರವಾಡ, ಚಿಂಚಲಿ, ನಾಗಾವಿ, ನೀಲಗುಂದ, ಬೆಟಗೇರಿ, ಬೆಂತೂರು, ಬೆಲಹೋಡ, ಮುಳಗುಂದ, ವೆಂಕಟಾಪೂರ, ಶಿರೂರ, ಶಿರುಂಜ, ಸೊರಟೂರ, ಹರ್ಲಾಪುರ, ಹಿರೆಹಂದಿಗೋಳ, ಲಕ್ಷ್ಮೇಶ್ವರ, ಮೇವುಂಡಿ, ಜಂತ್ಲಿಶಿರೂರ, ಇನ್ನೂ ಮುಂತಾದಕಡೆ ದೊರೆಯುತ್ತವಲ್ಲದೆ ಆ ಕಾಲದ ಬಹು ಅಂಶಗಳನ್ನು ತಿಳಿಸುತ್ತವೆ.

ಇನ್ನು ಕಲ್ಯಾಣಚಾಲುಕ್ಯರ ಕಾಲದ ಶಾಸನಗಳು ಶೇಕಡ ೮೦ರಷ್ಟು ಈ ಭಾಗದಲ್ಲಿ ದೊರೆಯುತ್ತವೆ. ಲಕ್ಕುಂಡಿ, ಲಕ್ಷ್ಮೇಶ್ವರ, ಮುಳಗುಂದ, ನಾಗಾವಿ, ಹೊಸೂರು, ಶಿರುಂಜ, ಸೊರಟೂರು, ಡಂಬಳ, ಶಿಂಗಟಾಲೂರು, ಪೇಠಾಆಲೂರು, ಕಪ್ಪಲಟ್ಟಿ, ತಗ್ಗಿನಭವೆನೂರು, ಮಾಚೇನಹಳ್ಳಿ, ಮುಂತಾದಕಡೆ ಬಹಳಷ್ಟು ಶಾಸನಗಳು ದೊರೆಯುತ್ತವೆ. ಅದೇ ರೀತಿ ಕಲಚುರಿಗಳ ಮತ್ತು ಹೊಯ್ಸಳ ಶಾಸನಗಳು ಬೆರಳೆಣಿಕೆಯಷ್ಟು ಸಿಗುತ್ತವೆ. ವಿಜಯನಗರದ ಕಾಲದ ಶಾಸನಗಳು ಮತ್ತು ಯಾದವರ ಶಾಸನಗಳು ದೊರೆಯುತ್ತವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಈ ಭಾಗವು ಈ ಎಲ್ಲಾ ದೊರೆಗಳ ನೇರಆಳ್ವಿಕೆಗೆ ಒಳಗಾಗಿರುವುದು ಮತ್ತು ಅವರ ಪ್ರಭಾವ ಈ ಪ್ರದೇಶದ ಮೇಲೆ ನಡೆದಿರುವುದನ್ನು ನೋಡಬಹುದು.

ಪ್ರಾಚೀನ ಕಾಲದ ಆಡಳಿತವು ಚಕ್ರವರ್ತಿ, ಮಂಡಳೇಶ್ವರ, ಮಹಾಮಂಡಳೇಶ್ವರ, ಸಾಮಂತ, ಮಹಾಸಾಮಂತ, ದಂಡಾಧಿಪತಿ ಇವರುಗಳಿಂದ ಕೂಡಿದ್ದರೆ, ಗ್ರಾಮದ ಆಡಳಿತವು ಗಾವುಂಡ ಮತ್ತು ಪ್ರಭುಗಾವುಂಡ, ಪಂಚಾಯಿತರು, ಮುಂತಾದವರಿಂದ ಕೂಡಿರುವುದು ತಿಳಿಯುತ್ತದೆ. ದಕ್ಷಿಣ ಗದಗ ಜಿಲ್ಲೆಯ ಪ್ರದೇಶಗಳಲ್ಲಿ ಕುಪ್ಪೆಯರಸ, ಪೆರ್ಮ್ಮಾನಾಡಿಗಳು, ಮಾದಿಣಯ್ಯಂಗಳ್, ದಾಸರಸ, ಅಕ್ಕಾದೇವಿ, ಮಾಧವರಸರು, ಲಕ್ಷ್ಮೀದೇವಿ, ಪೆರ್ಮ್ಮಾಡಿಯರಸರು, ತೇಜಿಮಯ್ಯ, ಶೌಚರಸ, ದೇವಿಮಯ್ಯ, ವತ್ಸಯ್ಯ ಮಹಾಶ್ರೀಮಂತ, ಕಲಿವಟ್ಟರಸರು, ನನ್ನಿಯಗಂಗಂಭೂತಯ್ಯಂ, ಮಾರಸಿಂಹ, ಶೋಭರಸ, ಇರಿವನೊಳಂಬರಾಜ, ವಾವನರಸ, ಪೆರ್ಮ್ಮಾಳಮಾದರಸ, ಮಾರರಸ, ಲಕ್ಕ್ಮರಸ, ಜಯಸಿಂಹ, ನಾಗವರ್ಮನಾಯ್ಕರು, ಶೋಭನರಸರು, ಮಹಾದೇವರಸ, ಕೇಸಿಮಯ್ಯ, ರಾಯದೇವರಸ, ಕುಪ್ಪದೇವರಸ, ಮಹಾಲಕ್ಷ್ಮೀದೇವಿ, ನಾಗವರ್ಮಯ್ಯ, ಜಯಕೇಶಿದೇವರಸ, ವೀರಪಾಂಡ್ಯದೇವರು, ಯಿಂದ್ರಕೇಶಿನೃಪತಿ, ವೇಸುವದಣ್ಣನಾಯಕ, ಬೇಚಿರಾಜ, ಆರ್ಯಮಲ್ಲಿಸೆಟ್ಟಿ, ನಾಗಂಣ ಮುಂತಾದವರು ಪ್ರಮುಖರು. ಇವರು ನೀಡಿದ ದಾನಧರ್ಮಗಳು, ಅವರ ಗುಣ ಚಾರಿತ್ರಗಳು ಆ ಕಾಲದ ಶಾಸನಗಳಿಂದ ತಿಳಿದು ಬರುತ್ತವೆ.

ದಕ್ಷಿಣ ಗದಗ ಭಾಗದಲ್ಲಿ ಮುಳಗುಂದ, ಲಕ್ಷ್ಮೇಶ್ವರ, ಮೇವುಂಡಿ, ಚಿಕ್ಕವಡ್ಡಟ್ಟಿ, ಸ್ಥಳಗಳು ರಾಜಧಾನಿಯಾಗಿದುದು ಅಲ್ಲಿನ ಶಾಸನಗಳಿಂದ ತಿಳಿದು ಬರುತ್ತವೆ ಅಲ್ಲದೆ ಸ್ಥಳನಾಮಗಳು,

ವೃತ್ತಿನಾಮಗಳು ಶಾಸನದಲ್ಲಿ ಕಂಡುಬಂದಿವೆಯಲ್ಲದೆ ಸಾಹಿತ್ಯಕ, ಸಾಂಸ್ಕೃತಿಕ ಮೌಲ್ಯಗಳನ್ನು ಆ ಪ್ರದೇಶದ ವರ್ಣನೆಗಳನ್ನು ನಾವು ನೋಡಬಹುದು.

ಈ ಭಾಗದಲ್ಲಿ ವ್ಯವಸಾಯ ಉತ್ಕೃಷ್ಟವಾಗಿತ್ತು, ಸಣ್ಣ ಗುಡಿಕೈಗಾರಿಕೆಗಳು ಬೆಳೆದಿದ್ದವು, ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು, ಅಲ್ಲದೆ ವ್ಯಾಪಾರಿ ಸಂಘಗಳು ಬೆಳೆದು ಬಂದಿದ್ದವು. ಅವುಗಳಲ್ಲಿ ಐಹೊಳೆಐನೂರ್ವರು, ತಂಬುಲಿಗಸಾಸಿರ್ವರು, ತೆಲ್ಲಿಗರೈವತ್ತೊಕ್ಕಲು, ಐವತ್ತೊಕ್ಕಲು, ಉಗುರಸಾಸಿರ್ವರು, ಮುಂತಾದವು. ಇನ್ನು ಈ ಭಾಗದಲ್ಲಿ ಅಳತೆಪ್ರಮಾಣಗಳು ಜಾರಿಯಲ್ಲಿದ್ದವು. ಭೂಮಿಯನ್ನು ಅಳೆಯಲು ಗಿಡಂಬ, ಅಣ್ಣಿಗೇರಿ ಕೊಲುಗಳನ್ನು ಬಳಸುತ್ತಿದ್ದರು. ಭೂಮಿಯ ಗುಣಕ್ಕೆ ಅನುಗುಣವಾಗಿ ತೆರಿಗೆ ವಿಧಿಸಲಾಗುತ್ತಿತ್ತು. ಹಲವಾರು ಸುಂಕಗಳನ್ನು ವಸೂಲು ಮಾಡಲಾಗುತ್ತಿತ್ತು.

ದಕ್ಷಿಣಭಾಗದ ಶಾಸನಗಳಲ್ಲಿ ಅನೇಕ ಕವಿಗಳು ನಮಗೆ ಸಿಗುತ್ತಾರೆ. ಪರಮೇಶ್ವರಭಟ್ಟ, ಸಾಮಿಯಣ್ಣಂ, ಲೋಕಯ್ಯಂ, ಕನ್ನೋಜ, ಕಾಳಿದಾಸಯ್ಯಂ, ಬಾಹುಬಲಿ, ಮರುಳೋಜಂ, ಈಸರಯ್ಯ, ಬರ್ಮ್ಮಯ್ಯಂ, ನಾಯ್ತವರ್ಮ್ಮೋಜಂ, ಚಾಮುಣ್ಡರಾಯ, ಮನ್ನೆಯಬಸವಣ್ಣಯ್ಯಂ, ಕನ್ನಪಯ್ಯ, ಕೇತೋಜ, ಮಾಬಲಯ್ಯಂ, ಮಂಟೂರಾಯ್ಯೋಜ, ಡಾಯಿಮಯ್ಯ, ಚಟ್ಟಪರ್ಯ್ಯ. ಸಂಕಣ, ಕೇಸವರಾಜಂ, ಗಣಪೋಜ, ನಾಗಾರ್ಜುನ, ನಾಗದೇವಭಟ್ಟವರಿಷ್ಠಂ, ಅಗ್ನಿಶ್ರಾಮ್ಮನ, ಭಟ್ಟೋಪಾಧ್ಯಾಯನು, ಲಿಂಗಸೆಟ್ಟಿ, ಮುಂತಾದವರು ಶಾಸನಗಳನ್ನು ರಚಿಸುತ್ತಿದ್ದರು ಮತ್ತು ಖಂಡರಿಸುತ್ತದ್ದರು. ದಕ್ಷಿಣ ಗದಗ ಭಾಗದಲ್ಲಿ ಅತಿ ಹೆಚ್ಚು ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಬಹುಪಾಲು ದಾನಶಾಸನಗಳೇ. ಇಲ್ಲಿ ಶೈವ, ವೈಷ್ಣವ, ಜೈನ, ಶಾಸನಗಳು ಈ ಭಾಗದಲ್ಲಿ ದೊರೆಯುವುದರಿಂದ ಎಲ್ಲಾ ಧರ್ಮಗಳು ಇದ್ದವೆಂದು ತಿಳಿಯುತ್ತದಲ್ಲದೆ, ಆಗಿನ ಜನ ಎಲ್ಲಾ ಧರ್ಮಗಳನ್ನು ಸಮಾನದೃಷ್ಟಿಯಿಂದ ನೋಡುತ್ತಿದ್ದರು ಎಂಬುದು ವೇದ್ಯವಾಗುತ್ತದೆ. ಡೋಣಿ, ಡಂಬಳ, ಜಂತ್ಲಿಶಿರೂರ, ಹಮ್ಮಿಗಿ, ಕಳಸಾಪುರ, ಮುಳಗುಂದ, ಲಕ್ಷ್ಮೇಶ್ವರ, ಕಲಕೇರಿ, ಲಕ್ಕುಂಡಿ, ಅಕ್ಕಿಗೊಂದಿ, ಮೇವುಂಡಿ, ಮುಂತಾದ ಗ್ರಾಮಗಳಲ್ಲಿ ಜೈನಧರ್ಮದ ಪೊಳೆಯುಳಿಕೆಗಳು ಸಿಗುತ್ತವೆ. ಬಹುತೇಕ ಗ್ರಾಮಗಳು ಶೈವಧರ್ಮದ ಶಾಸನಗಳನ್ನು ಹೊಂದಿವೆ. ಈ ಭಾಗದಲ್ಲಿ ಶೇಕಡ ೫೦ರಷ್ಟು ಶೈವ ಶಾಸನಗಳು ದೊರೆಯುತ್ತವೆ. ಪ್ರತಿ ಗ್ರಾಮದಲ್ಲಿ ಈಶ್ವರ ದೇವಾಲಯಗಳು ಒಂದಲ್ಲ ಒಂದು ಹೆಸರಿನಿಂದ ಕರೆಸಿಕೊಳ್ಳುತ್ತಿರುವುದನ್ನು ಇಂದಿಗೂ ನಾವು ನೋಡಬಹುದು. ಉದಾಹರಣೆಗಾಗಿ ಅಜ್ಜಮೇಶ್ವರ, ಕತ್ತಮೇಶ್ವರ, ಭರತೇಶ್ವರ, ಸೋಮೇಶ್ವರ, ಮಲ್ಲಿಕಾರ್ಜುನ, ಕಲ್ಮೇಶ್ವರ ಹೀಗೆ ಹತ್ತು ಹಲವು ಶೈವ ದೇವಾಲಯಗಳು ಮತ್ತು ಆ ದೇವಾಲಯಗಳ ಮುಂದೆ ಅವುಗಳಿಗೆ ನೀಡಿರುವ ದಾನದ ವಿಚಾರವನ್ನು ತಿಳಿಸುವ ಶಾಸನಗಳು ಇದ್ದೇ ಇವೆ. ಇನ್ನು ವೈಷ್ಣವ ದೇವಾಲಯಗಳು ಮತ್ತು ಅವುಗಳಿಗೆ ನೀಡಿರುವ ದಾನದತ್ತಿ ವಿಚಾರಗಳು ಜೈನ, ಶೈವ ಧರ್ಮಗಳಿಗೆ ಹೋಲಿಸಿದರೆ ಸ್ವಲ್ಪ ಕಡಿಮೆ ಎಂದೇ

ಹೇಳಬೇಕಾಗುತ್ತದೆ. ಏಕೆಂದರೆ ಈ ಧರ್ಮದ ದೇವಾಲಯಗಳು ಕಡಿಮೆ ಇದ್ದು, ಅವುಗಳಿಗೆ ನೀಡಿರುವ ದಾನ ಸಂಖ್ಯೆಯು ಕಡಿಮೆಯೇ ಇದೆ.

ಇನ್ನು ಈ ಭಾಗದಲ್ಲಿ ಗೋಸಾಸಕಲ್ಲುಗಳು ಬೆರಳೆಣಿಕೆಯಷ್ಟು ದೊರೆಯುತ್ತವೆ. ಅಂತವುಗಳಲ್ಲಿ ಸೊರಟೂರಿನ ಶಾಸನವೂ ಒಂದು. ನಮ್ಮವರು ಮೊದಲಿಗೆ ಒಬ್ಬ ಮನುಷ್ಯನ ಶ್ರೀಮಂತಿಕೆಯನ್ನು ಲೆಕ್ಕ ಹೇಳುವಾಗ, ಅವನ ಬಳಿ ಇರುವ ಗೋಸಂಪತ್ತನ್ನು ನೋಡಿ ಅಳೆಯುತ್ತಿದ್ದರಂತೆ. ಅದರಿಂದ ಆ ಕಾಲದಲ್ಲಿ ಗೋಸಂಪತ್ತಿಗೆ ಬಹಳ ಪ್ರಾಮುಖ್ಯತೆಯನ್ನು ನೀಡಲಾಗುತ್ತಿತ್ತು ಎಂಬುದು ವೇದ್ಯವಾಗುತ್ತದೆ. ಅಲ್ಲದೆ ಗೋದಾನ ಮಾಡಿದವನು ಅತ್ಯುತ್ಕೃಷ್ಟ ಫಲಗಳನ್ನು ಅನುಭವಿಸುತ್ತಿದ್ದನು ಎಂಬುದಾಗಿ ಶಾಸನಗಳು ಹೇಳುತ್ತವೆ.

ಈ ಭಾಗದಲ್ಲಿ ಬಸದಿಗಳ ನಿರ್ಮಾಣ ಮತ್ತು ದೇವಾಲಯಗಳ ನಿರ್ಮಾಣ ಬಹಳಷ್ಟು ನಡೆದಿವೆ. ಅದರಲ್ಲೂ ಜನಸಾಮಾನ್ಯರೂ ಸಹ ಇಂತಹ ಕಾರ್ಯಗಳಲ್ಲಿ ಕೈಜೋಡಿಸಿ ತಮ್ಮ ಭಕ್ತಿಯ ಪಾರಮ್ಯತೆಯನ್ನು ಮೆರೆದಿದ್ದಾರೆ. ಲಕ್ಕುಂಡಿ, ಜಂತ್ಲಿಶಿರೂರು, ಕಲಕೇರಿ, ಮುಳಗುಂದ. ಲಕ್ಷ್ಮೇಶ್ವರ, ಮುಂತಾದಕಡೆ ಬಸದಿಗಳ ನಿರ್ಮಾಣ ಮಾಡಿರುವುದಲ್ಲದೆ ಅವುಗಳಲ್ಲಿ ಸಾಂಗೋಪಸಾಂಗವಾಗಿ ಪೂಜಾವಿಧಿವಿಧಾನಗಳು ನಡೆಯಲು ಜನರು ಹತ್ತು ಹಲವು ದಾನಗಳನ್ನು ನೀಡಿದ್ದಾರೆ. ಅದೇ ರೀತಿ ಹಲವು ದೇವಾಲಯಗಳನ್ನು ನಿರ್ಮಿಸಿದ್ದುದಲ್ಲದೆ, ಅವುಗಳ ಜೀರ್ಣೋದ್ಧಾರ ಮಾಡಿರುವ ವಿಷಯವನ್ನು ತಿಳಿಸುವ ಶಾಸನಗಳು ಕಂಡುಬರುತ್ತವೆ. ಅವುಗಳ ನಿರ್ವಹಣೆಗಾಗಿ ಭೂದಾನ, ಹಣದಾನ, ತೈಲದಾನ, ಎಲೆಅಡಿಕೆದಾನ, ಹೂದೋಟದಾನ, ನಿವೇಶನದಾನ, ಅಂಗಡಿದಾನ, ಅನ್ನಸತ್ರಕ್ಕಾಗಿದಾನ ನೀಡಲಾಗಿದೆ. ಕೆಲವು ಸಂದರ್ಭಗಳಲ್ಲಿ ಮೂರ್ತಿಗಳು ಹಾಳಾದಾಗ ಅವುಗಳ ಪುನರ್‌ನಿರ್ಮಾಣ ಮಾಡಿ ಅವುಗಳನ್ನು ಪ್ರತಿಷ್ಠಾಪಿಸಲಾಗಿದೆ. ಅವುಗಳಲ್ಲಿ ಇದ್ದಂತಹ ಮುನಿಗಳಿಗೂ ಸಹ ಅವರ ಉದರಪೋಷಣೆಗೆ, ವಿದ್ಯಾದಾನ ಮಾಡುವ ವಿದ್ಯಾಗುರುಗಳಿಗೆ ಹಲವಾರು ದಾನಗಳನ್ನು ಬಿಟ್ಟಿರುವುದನ್ನು ನೋಡಬಹುದಾಗಿದೆ.

ಈ ಭಾಗದಲ್ಲಿ ಹಲವಾರು ಗ್ರಾಮಗಳು ಅಗ್ರಹಾರಗಳಾಗಿದ್ದು, ಅವುಗಳ ಬಗ್ಗೆಯು ತಿಳಿಸಲಾಗಿದೆ. ಡಂಬಳ, ಪೇಠಾಆಲೂರು, ಲಕ್ಷೇಶ್ವರ, ಗದಗ, ಡೋಣಿ, ಮುಳಗುಂದ ಮುಂತಾದವುಗಳು ಅಂತಹ ಸ್ಥಳಗಳಾಗಿದ್ದು, ಅವುಗಳು ಪ್ರಮುಖ ವಿದ್ಯಾ ಕೇಂದ್ರಗಳಾಗಿದ್ದವು.

ನಮ್ಮ ಜನರು ಸಾಮಾಜಿಕ ಕ್ಷೇತ್ರದಲ್ಲಿ ಬಹಳಷ್ಟು ಶ್ರಮಿಸಿದವರು. ಸಿರಿವಾಗಿಲು ನಿಲ್ಲಿಸಿರುವುದು, ಕೆರೆನಿರ್ಮಾಣ, ಬಾವಿನಿರ್ಮಾಣ, ಅರವಟ್ಟಿಗೆ, ಕೆರೆಯತೂಬು ನಿರ್ಮಿಸಿರುವುದು, ಕೆರೆಯನ್ನು ನಿರ್ಮಿಸುವುದಕ್ಕಾಗಿ ಭೂಮಿಯನ್ನು ದಾನ ನೀಡಿ ಕೊಡುಗೈದಾನಿಗಳಾಗಿದ್ದಾರೆ. ಅದರಲ್ಲೂ

ನೀರಿನದಾನವು ಸರ್ವಶ್ರೇಷ್ಠವಾದ ದಾನ ಎಂದು ತಿಳಿದ ಪೂರ್ವಜರು, ನೀರನ್ನು ಸರಾಗವಾಗಿ ಜನರು ತೆಗೆದುಕೊಂಡು ಹೋಗಲು ಅನುಕೂಲವಾಗುವಂತೆ ಏತಗಳನ್ನು ನಿರ್ಮಿಸಿಕೊಟ್ಟಿದ್ದಾರೆ.

ದಕ್ಷಿಣ ಗದಗು ಜಿಲ್ಲೆಯಲ್ಲಿ ಹಲವಾರು ಸ್ಮಾರಕಶಾಸನಗಳು ಕಂಡುಬರುತ್ತವೆ. ಅವುಗಳಲ್ಲಿ ನಮ್ಮ ಜನರ ವೀರತ್ವವನ್ನು, ಶೌರ್ಯವನ್ನು, ತಮ್ಮ ನಾಡಿನ ಅಭಿಮಾನವನ್ನು, ದೇಶಪ್ರೇಮವನ್ನು ನೋಡಬಹುದಾಗಿದೆ. ಇವುಗಳಲ್ಲಿ ಹೋರಾಟದ ವೀರಗಲ್ಲುಗಳು, ತುರುಗೊಳ್‌ವೀರಗಲ್ಲು, ಮಹಾಸತಿಕಲ್ಲು, ಅತ್ಮಬಲಿಕಲ್ಲುಗಳಿದ್ದು, ಇವು ನಮ್ಮ ಜನರ ನಂಬಿಕೆಯ ಕುರುಹುಗಳಾಗಿ, ನಮ್ಮಲ್ಲಿ ಇದ್ದ ಹಲವಾರು ಆಚರಣೆಗಳನ್ನು ಹೊರಗೆಡವುತ್ತವೆ. ಇವುಗಳು ವೀರನಿಗೆ ಸಿಗುತ್ತಿದ್ದ ಗೌರವವನ್ನು, ಉಂಬಳಿಗಳನ್ನು, ಜನರ ಪ್ರೀತಿವಿಶ್ವಾಸವನ್ನು ಬೆಳಕಿಗೆ ತರುತ್ತವೆ. ಗೋಸಂಪತ್ತು ಎಷ್ಟು ಮುಖ್ಯವಾಗಿತ್ತೋ, ಅದನ್ನು ರಕ್ಷಿಸುವ ಹೊಣೆಯೂ ಅಷ್ಟೆ ಮುಖ್ಯವಾಗಿತ್ತು. ಇಂತಹ ಸಂಪತ್ತನ್ನು ಕಳ್ಳರು ಕಳವುಮಾಡಿದಾಗ ಅವುಗಳನ್ನು ರಕ್ಷಿಸುತ್ತಿದ್ದ ವೀರನಿಗೆ ನಾಡನ್ನು ರಕ್ಷಿಸಿದಷ್ಟೆ ಗೌರವ, ಪ್ರೀತಿ, ವಿಶ್ವಾಸ ಜನರಿಂದ ದೊರೆಯುತ್ತಿದ್ದವು. ವೀರರು ಹೋರಾಟದಲ್ಲಿ ಮಡಿದಾಗ ಅತನ ಪತ್ನಿಯರು ಸಹಗಮನ ಮಾಡಿರುವ ಸತಿಸಹಗಮನ ಪದ್ಧತಿಯು ಇದ್ದು, ಅದು ಅಂದಿನ ಮಹಿಳೆಯರ ಮನೋನಂಬಿಕೆಯನ್ನು ಮತ್ತು ಅವರು ಪತಿಯೇ ಪರದೈವ ಎಂದು ತಿಳಿದ ನಂಬಿಕೆಯನ್ನು ತಿಳಿಸುತ್ತದೆ. ಇವಲ್ಲದೆ ಆತ್ಮಬಲಿಕಲ್ಲುಗಳು ಇದ್ದು, ಅವುಗಳು ಅಂದಿನ ಸ್ವಾಮಿನಿಷ್ಠೆಯನ್ನು, ಅದರಲ್ಲಿಯೂ ವೇಳವಾಳಿತನ, ಜೋಳವಾಳಿತನವನ್ನು, ಜೊತೆಗೆ ಗರುಡ ಪದ್ಧತಿಯನ್ನು ನಮಗೆ ತಿಳಿಸುತ್ತವೆ. ಇವುಗಳು ಅಂದಿನ ಹೋರಾಟದ ಮನೋಭಾವನೆಯಾದ 'ಗೆದ್ದರೆ ಸಂಪತ್ತು, ಸತ್ತರೆ ಸುರಾಂಗನೆಯರ ಅಪ್ಪುಗೆ' ಮತ್ತು 'ಗೆದ್ದರೆ ರಾಜ್ಯ ಸತ್ತರೆ ವೀರಸ್ವರ್ಗ' ಎಂಬ ಅವರ ಬಲವಾದ ನಂಬುಗೆಯನ್ನು ತಿಳಿಸುತ್ತದೆ.

ಶಾಸನಗಳು 'ಪುಟ್ಟಕಾವ್ಯಗಳು' ಎಂದರೆ ಉತ್ಪ್ರೇಕ್ಷೆಯಲ್ಲ. ಅವುಗಳು ಸಣ್ಣಸಣ್ಣ ಕಾವ್ಯಗಳಾಗಿ ಹೇಳಬೇಕಾಗಿರುವ ವಿಚಾರವನ್ನು ಅತೀಸೂಕ್ಷ್ಮವಾಗಿ ನಮಗೆ ಮನವರಿಕೆ ಮಾಡಿಕೊಡುತ್ತವೆ. ಶಾಸನಗಳಲ್ಲಿ ಸ್ಥಳಾವಕಾಶ ಕಡಿಮೆ ಇದ್ದರೂ ಸಹ, ಅಲ್ಲಿಯೂ ಕವಿ ತನ್ನ ಕೈಚಳಕ ಮೆರೆದಿರುವುದು ಹಲವು ಶಾಸನಗಳಲ್ಲಿ ತಿಳಿಯುತ್ತದೆ. ಕವಿಯು ನಾಡವರ್ಣನೆಯನ್ನು, ಗ್ರಾಮದ ಸೊಗಸನ್ನು, ಅಲ್ಲಿಯ ಪ್ರಕೃತಿವರ್ಣನೆಯನ್ನು, ಜೊತೆಗೆ ಹೇಳಬೇಕಾಗಿರುವ ರಾಜವಂಶಾವಳಿಯನ್ನು, ವ್ಯಕ್ತಿ ಚಿತ್ರಣವನ್ನು, ಸುಂದರವಾಗಿ ಪ್ರತಿಬಿಂಬಿಸಲಾಗಿದೆ. ಕೆಲವು ಶಾಸನಗಳು ಪುಟ್ಟ ಕಾವ್ಯಗಳಾಗಿಯೇ ಕಂಡುಬರುತ್ತವೆ. ಕಂದ, ವೃತ್ತ ಪದ್ಯಗಳನ್ನು ಬಳಸಿಕೊಂಡು ಜಾಗರೂಕತೆಯಿಂದ ಕವಿಗಳು ತಮ್ಮ ನೈಪುಣ್ಯತೆಯನ್ನು ಮೆರೆದಿದ್ದಾರೆ. ದೇವಾಲಯದ ಚಿತ್ರಣ, ಅಲ್ಲಿರುವ ಗುರುಗಳ ಮಹಿಮೆ ಹೀಗೆ ಎಲ್ಲಾ ವಿಷಯಗಳನ್ನು ತೆಗೆದುಕೊಂಡು ಕುಶಲತೆಯಿಂದ ಚಿತ್ರಣವನ್ನು ನಮಗೆ ನೀಡುವಲ್ಲಿ ಸಫಲರಾಗಿದ್ದಾರೆ.

ಇನ್ನು ಶಾಸನಗಳು ಶಿಲ್ಪಗಳ ತವರುಮನೆಯಿದ್ದಂತೆ. ಅಕ್ಷರಸ್ಥ ಹೇಗೆ ಶಾಸನಗಳನ್ನು ತಿಳಿಯಲು ಸಾಧ್ಯವೋ ಅದೇ ರೀತಿ ಅನಕ್ಷರಸ್ಥನಾದವನೂ ತಿಳಿಯಲಿ ಎಂದು ಶಿಲ್ಪಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿರುವುದು ತಿಳಿಯುತ್ತದೆ. ಶಾಸನಶಿಲ್ಪಗಳು ಇಂದಿಗೂ ಅಚ್ಚಳಿಯದೇ ಇದ್ದು, ಅವು ತಮ್ಮ ವಿಚಾರಗಳನ್ನು ನಮಗೆ ತಿಳಿಸುತ್ತವೆ. ಶಿಲ್ಪಿಯು ಅವುಗಳನ್ನು ಚಿತ್ರಿಸುವಾಗ ಶಿಲ್ಪಶಾಸ್ತ್ರಕ್ಕನುಗುಣವಾಗಿ ಬಿಡಿಸದೇ ಹೋದರೂ ಸಹ, ಅವುಗಳು ವಿಷಯವನ್ನು ತಿಳಿಸುವಲ್ಲಿ ಹಿಂದೆ ಬಿದ್ದಿಲ್ಲ. ಶಾಸನಶಿಲ್ಪದಲ್ಲಿ ಬರುವ ಆಕಳು ಮತ್ತು ಕರು, ಕತ್ತಿ ಇವು ಶಾಸನವನ್ನು ನಾಶಮಾಡಿದರೆ ದೊರೆಯುವ ಶಾಪಾಶಯವನ್ನು ತಿಳಿಸುತ್ತದೆ. ಜಿನ ಅಥವಾ ಶಿವಲಿಂಗದಮುಂದೆ ಕುಳಿತಿರುವ ವ್ಯಕ್ತಿ ಮುಕ್ತಿಯನ್ನು ಪಡೆದ ಎಂಬುದನ್ನು ಸೂಕ್ಷ್ಮವಾಗಿ ಚಿತ್ರಿಸುತ್ತದೆ. ಹೀಗೆ ಅನೇಕ ದೃಷ್ಟಕೋನಗಳಿಂದ ಶಾಸನಗಳನ್ನು ಬಳಸಿಕೊಂಡು ಅಧ್ಯಯನ ನಡೆಸಲಾಗಿದೆ. ಈ ನಮ್ಮ ಅಧ್ಯಯನದ ಫಲಿತವನ್ನು ಪಕ್ಷಿನೋಟದಲ್ಲಿ ಕೆಳಕಂಡಂತೆ ಪುನರಚಿಸಬಹುದು.

೧) ಮೊದಲಬಾರಿಗೆ ದಕ್ಷಿಣ ಭಾಗದ ಗದಗು ಜಿಲ್ಲೆಯ ಶಾಸನಗಳನ್ನು ಸಮಗ್ರವಾಗಿ ಅಧ್ಯಯನ ನಡೆಸಲಾಗಿದೆ.

೨) ಪ್ರಕಟಿತ ಶಾಸನಗಳ ಜೊತೆಯಲ್ಲಿ ಸುಮಾರು ನೂರಕ್ಕೂ ಹೆಚ್ಚು ಅಪ್ರಟಿತ ಶಾಸನಗಳನ್ನು ಗಮನಿಸಲಾಗಿದೆ.

೩) ಮೊದಲ ಬಾರಿಗೆ ಅನೇಕ ವಿಧದ ಶಾಸನಶಿಲ್ಪಗಳನ್ನು ಬೆಳಕಿಗೆ ತರಲಾಗಿದೆ.

೪) ಬೆಳ್ವೊಲ-೩೦೦, ಪುಲಿಗೆರೆ-೩೦೦, ಮಾಸವಾಡಿ-೧೪೦, ಭಾಗದ ಶಾಸನಗಳನ್ನು ಮೊದಲಿಗೆ ಒಂದೆಡೆ ಸೇರಿಸಿ, ಕ್ರಮವಾಗಿ ವಿಂಗಡಿಸಿ ಇಲ್ಲಿ ಅಧ್ಯಯನ ನಡೆಸಲಾಗಿದೆ.

೫) ಅನೇಕ ಅಪ್ರಕಟಿತ ೬ನೇ ವಿಕ್ರಮಾದಿತ್ಯನ ಶಾಸನಗಳನ್ನು ಅಧ್ಯಯನಕ್ಕೆ ಮೊದಲಬಾರಿಗೆ ಬಳಸಿಕೊಳ್ಳಲಾಗಿದೆ.

೬) ಶಾಸನಗಳ ಅಧ್ಯಯನದ ಜೊತೆ, ಅವುಗಳಿಗೆ ಪ್ರಸಕ್ತ ಸಮಯದಲ್ಲಿ ಉಂಟಾಗಿರುವ ಕಷ್ಟಗಳನ್ನು ಕುರಿತು ಮೊದಲಿಗೆ ಚರ್ಚಿಸಲಾಗಿದೆ.

೭) ಶಾಸನಗಳ ಮೂಲಕ ಈ ಭಾಗದ ಇತಿಹಾಸವನ್ನು ಚರ್ಚಿಸಲಾಗಿದೆ.

೮) ಜೈನ-ಶೈವ-ವೈಷ್ಣವ ಧರ್ಮದ ಶಾಸನಗಳನ್ನು ಒಂದೇ ವೇದಿಕೆಯಡಿ ತೌಲನಿಕವಾಗಿ ಗಮನಿಸಿ ಚರ್ಚಿಸಲಾಗಿದೆ.

೯) ಈ ಭಾಗದ ಶಾಸನ ಸಾಹಿತ್ಯವನ್ನು ಮೊದಲಿಗೆ ಇಲ್ಲಿ ಪ್ರತ್ಯೇಕವಾಗಿ ಅಳವಡಿಸಿಕೊಳ್ಳಲಾಗಿದೆ. ಹೀಗೆ ಅನೇಕ ಹೊಸ ವಿಧಾನಗಳನ್ನು ಈ ಮಹಾ ಪ್ರಬಂಧದಲ್ಲಿ ಅಳವಡಿಸಿಕೊಂಡು ಅಧ್ಯಯನ ನಡೆಸಲಾಗಿದೆಯೆಂಬ ಹೆಮ್ಮೆ ನಮ್ಮದಾಗಿದೆ.

## ನಕ್ಷೆಗಳು

## ಗದಗ ಜಿಲ್ಲೆ

ಬಾಗಲಕೋಟೆ ಜಿಲ್ಲೆ
ಮಲಪ್ರಭಾ ನದಿ
ಬೆಳಗಾಂ ಜಿಲ್ಲೆ
ನರಗುಂದ
ರೋಣ
ಕೊಪ್ಪಳ ಜಿಲ್ಲೆ
ಗದಗ
ಧಾರವಾಡ ಜಿಲ್ಲೆ
ಶಿರಹಟ್ಟಿ
ಮುಂಡರಗಿ
ಬಳ್ಳಾರಿ ಜಿಲ್ಲೆ
ಹಾವೇರಿ ಜಿಲ್ಲೆ
ತುಂಗಭದ್ರಾ ನದಿ

ಅಧ್ಯಯನ ಕ್ಷೇತ್ರ
ಜಿಲ್ಲಾ ಮೇರೆ
ನದಿ
ತಾಲ್ಲೂಕು ಕೇಂದ್ರಸ್ಥಳ

# ಗ್ರಂಥಸೂಚಿ


## I. ಶಾಸನ ಸಂಪುಟಗಳು:

೧. ಅಣ್ಣಿಗೇರಿ.ಎ.ಎಂ. ಮತ್ತು ಡಾ॥ಆರ್.ಶೇಷಶಾಸ್ತ್ರಿ ಶಾಸನ ಸಂಗ್ರಹ

೨. ಇಂಡಿಯನ್ ಆಂಟಿಕ್ವುರಿ ಸಂಪುಟಗಳು

೩. ಎಪಿಗ್ರಾಫಿ ಕರ್ನಾಟಕ ಸಂಪುಟಗಳು.

೪. ಎಪಿಗ್ರಾಫಿ ಇಂಡಿಕಾ ಸಂಪುಟಗಳು.

೫. ಕರ್ನಾಟಕ ಇನಸ್ಕ್ರಿಪ್ಸನ್ಸ್ ಸಂಪುಟಗಳು.

೬. ಕಲಬುರ್ಗಿ.ಎಂ.ಎಂ. (ಸಂ) **ಧಾರವಾಡ ಜಿಲ್ಲಾ ಶಾಸನಸೂಚಿ,** ಧಾರವಾಡ, ೧೯೭೫

೭. ಕಲಬುರ್ಗಿ.ಎಂ.ಎಂ. ಮತ್ತು ಹಿರೇಮಠ.ಆರ್.ಸಿ. ಶಾಸನ ಸಂಪದ, ೧೯೭೪

೮. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು

೯. ಗೋಪಾಲ ಬಾ.ರಾ. ಶಾಸನ ಪರಿಚಯ ೧೯೫೬

೧೦. ದೇಸಾಯಿ ಪಾಂಡುರಂಗರಾಯರು, ಶಾಸನ ಪರಿಚಯ, ಧಾರವಾಡ ೧೯೫೬

೧೧. ಪಂಚಮುಖಿ ಆರ್.ಎಸ್. ಕರ್ನಾಟಕದ ಶಾಸನಗಳು

೧೨. ಪರಮಶಿವಮೂರ್ತಿ ಡಿ.ವಿ. ಕೃಷ್ಣದೇವರಾಯನ ಶಾಸನಗಳು. ೨೦೧೦

೧೩. ಸಿ.ಪಿ.ಕೆ.ಶಾಸನ ಪ್ರವೇಶಿಕೆ

೧೪. ಶ್ರೀನಿವಾಸ ರಿತ್ತಿ. ಅಶೋಕನ ಧರ್ಮಶಾಸನಗಳು

೧೫. ಶಾಸನ ಸಂಗ್ರಹ

೧೬. ಸೌತ್ ಇಂಡಿಯನ್ ಇನಸ್ಕ್ರಿಪ್ಸನ್ಸ್

## II. ವರದಿಗಳು

Annual report on south Indian Ephigraphy

A guide to the K.R.I.Museum

Annual Report of the Mysore Archaeological department

Kannada research in Bombay province,1935-40

Progress report of the KRI

## III. ಕನ್ನಡ ಕೃತಿಗಳು

೧. ಅಣ್ಣಿಗೇರಿ.ಎ.ಎಂ. ಮತ್ತು ಮೇವುಂಡಿ ಮಲ್ಲಾರಿ, ಶಾಸನ ಸಂಚಯ ಕನ್ನಡ ಸಂಶೋಧನ ಸಂಸ್ಥೆ , ಧಾರವಾಡ.

೨. ಅಣ್ಣಿಗೇರಿ.ಎ.ಎಂ. ಮೇವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಸಂಚಯ,೧೯೬೧

೩. ಅಣ್ಣಾರಾಯ ಮಿರ್ಜಿ, ಜೈನ ಧರ್ಮ ೧೯೫೨

೪. ಕಲಬುರ್ಗಿ ಎಂ.ಎಂ. ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ ೧೯೭೩

೫. ಕಲಬುರ್ಗಿ ಎಂ.ಎಂ. (ಸಂ)ಶಾಸನ ವ್ಯಾಸಂಗ ೧ ಮತ್ತು ೨ ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ ೧೯೭೫

೬. ಕಲಬುರ್ಗಿ ಎಂ.ಎಂ, ಶಾಸನಗಳಲ್ಲಿ ಶಿವಶರಣರು, ವೀರಶೈವ ಅಧ್ಯಯನ ಕೇಂದ್ರ , ಗದಗ.೧೯೭೮

೭. ಕಲಬುರ್ಗಿ ಎಂ.ಎಂ, ಸಾಹಿತ್ಯ ಸಂಪಾದನೆ ಮದ್ರಾಸ್ ವಿಶ್ವ ವಿದ್ಯಾಲಯ ೧೯೭೯.

೮. ಕಲಬುರ್ಗಿ.ಎಂ.ಎಂ, ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಐ.ಬಿ.ಹೆಚ್. ಪ್ರಕಾಶನ ೧೯೮೦

೯. ಕಲಬುರ್ಗಿ.ಎಂ.ಎಂ. ಹರಿಹರನ ರಗಳೆಗಳು,೧೯೯೯

೧೦. ಕಲಬುರ್ಗಿ.ಎಂ.ಎಂ. ಮಾರ್ಗ ೧ ಮತ್ತು ೨, ನರೇಶ ಆಂಡ್ ಕಂಪನಿ, ಬೆಂಗಳೂರು ೧೯೮೦

೧೧. ಕಪಟರಾಳ ಕೃಷ್ಣ ರಾವ್ , ಕರ್ನಾಟಕ ಲಾಕುಳ ಶೈವರ ಇತಿಹಾಸ, ಕನ್ನಡ ಸಂಶೋಧನ ಸಂಸ್ಥೆ ಧಾರವಾಡ ೧೯೫೫

೧೨. ಕಪಟರಾಳ ಕೃಷ್ಣ ರಾವ್ , ಕರ್ನಾಟಕ ಸಂಸ್ಕೃತಿ ಶೋಧನೆ, ಕನ್ನಡ ಸಂಶೋಧನ ಸಂಸ್ಥೆ ಧಾರವಾಡ ೧೯೭೦

೧೩. ಕನವಳ್ಳಿ ಸದಾನಂದ, ವೀರಣ್ಣ ರಾಜೂರ, ಕರ್ನಾಟಕ ಪರಂಪರೆ ಸಂ–೧ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.೧೯೯೩

೧೪. ಕಲ್ಗುಡಿ ಬಸವರಾಜ, ಮಹಾಸತಿ ಆಚರಣೆ ಒಂದು ಅಧ್ಯಯನ, ನಿರ್ದೇಶಕರು ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ , ೧೯೮೫

೧೫. ಕರ್ನಾಟಕ ಭಾರತಿ ಸಂಪುಟಗಳು, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ

೧೬. ಕನ್ನಡ ಅಧ್ಯಯನ ಸಂಪುಟಗಳು , ಪ್ರಸಾರಾ ಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೧೭. ಕಾರಂತ ಶಿವರಾಮ , ಕರ್ನಾಟಕದಲ್ಲಿ ಶಿಲ್ಪ, ಐ.ಬಿ.ಹೆಚ್. ಪ್ರಕಾಶನ,ಬೆಂಗಳೂರು ೧೯೮೨

೧೮. ಕಾರಂತ ಶಿವರಾಮ , ಚಿತ್ರಶಿಲ್ಪ , ವಾಸ್ತು ಕಲೆಗಳು, ಧಾರವಾಡ , ೧೯೭೫

೧೯. ಕಾರಂತ ಶಿವರಾಮ , ಭಾರತೀಯ ಶಿಲ್ಪಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫

೨೦. ಕೃಷ್ಣ ರಾವ್ ಎಂ.ಎ.ಕೇಶವಭಟ್ಟ ಎಂ. ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸರಕಾರಿ ಪ್ರಕಾಶನ, ಬೆಂಗಳೂರು. ೧೦೭೦

೨೧. ಕೊಪ್ಪ ಎಸ್.ಕೆ, ತರ್ದವಾಡಿನಾಡು ಒಂದು ಅಧ್ಯಯನ, ಇಂಡಿ. ೧೯೯೦

೨೨. ಕೊತ್ತಲ ಮಹದೇವಪ್ಪ , ಶಿರಹಟ್ಟಿ ತಾಲೂಕ ದರ್ಶನ,೧೯೮೭

೨೩. ಗಣೇಶ ಕೆ.ಆರ್. ಆಂದ್ರ ಪ್ರದೇಶದ ಕನ್ನಡ ಶಾಸನಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. ೧೯೯೬

೨೪. ಗುರುವ ಆರ್.ಎನ್. ತರ್ದವಾಡಿ ನಾಡು, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ. ೧೯೭೯

೨೫. ಗೋಪಾಲ. ಬಾ.ರಾ. ಕರ್ನಾಟಕದಲ್ಲಿ ನವಶಿಲಾಯುಗ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೭೧

೨೬. ಗೋಪಾಲ. ಬಾ.ರಾ. ಬದಾಮಿ ಚಾಲುಕ್ಯರು, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೭೧

೨೭. ಗೋಪಾಲ. ಬಾ.ರಾ.ಕನ್ನಡ ಶಾಸನಗಳು,೨೦೦೦

೨೮. ಗೋಪಾಲರಾವ್ ಎಚ್.ಎನ್. ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ೧೯೯೩

೨೯. ಡಾ॥ ಚನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ. ೧೯೯೦

೩೦. ಚನ್ನಕ್ಕ ಎಲಿಗಾರ, ಬಂಕಾಪುರದ ಶೋಧ, ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೯೦

೩೧. ಚಂಚಿ.ಎ.ವಿ.ಗದಗ ಹಾಗೂ ಅದರ ಸುತ್ತಮುತ್ತಲಿನ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ.೧೯೯೮

೩೨. ಚಿದಾನಂದಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ
ಪ್ರಸಾರಂಗ , ಮೈಸೂರು ವಿ.ವಿ., ಮೈಸೂರು. ೧೯೬೬.

೩೩. ಚಿದಾನಂದಮೂರ್ತಿ.ಎಂ. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು,
ಬೆಂಗಳೂರು,೧೯೭೫.

೩೪. ಚಿದಾನಂದಮೂರ್ತಿ.ಎಂ. ಸಂಶೋಧನೆ ತರಂಗ ಸಂ೨, ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು.

೩೫. ಜವರೇಗೌಡ.ದೇ. ಕನ್ನಡ ಸಂಸ್ಕೃತಿ,೨೦೦೧

೩೬.ತಿಪ್ಪೇರುದ್ರಸ್ವಾಮಿ ಎಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ.೨೦೦೧

೩೭. ದೇಸಾಯಿ ಪಾಂಡುರಂಗ ರಾಯರು,ಕರ್ನಾಟಕದ ಕಲಚುರಿಗಳು, ಕರ್ನಾಟಕ ವಿಶ್ವ
ವಿದ್ಯಾಲಯ ಧಾರವಾಡ.೧೯೮೯

೩೮. ದೇವರಕೊಂಡಾರೆಡ್ಡಿ, ಲಿಪಿಯ ಹುಟ್ಟು ಮತ್ತು ಬೆಳವಣಿಗೆ, ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು ೨೦೦೨

೩೯. ದೇವರಕೊಂಡಾರೆಡ್ಡಿ, ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ
ಪರಿಷತ್, ಬೆಂಗಳೂರು ೧೯೯೬

೪೦. ದೇಸಾಯಿ ಪಿ.ಬಿ. ಕನ್ನಡ ನಾಡಿನ ಮಿಂಚಿದ ಮಹಿಳೆಯರು, ಧಾರವಾಡ. ೧೯೩೮

೪೧. ದೇಸಾಯಿ ಪಿ.ಬಿ. ಕರ್ನಾಟಕ ಇತಿಹಾಸ, ಕರ್ನಾಟಕ ವಿಶ್ವ ವಿದ್ಯಾಲಯ
ಧಾರವಾಡ.೧೯೬೭

೪೨. ದೇಸಾಯಿ ಪಿ.ಬಿ. ಕರ್ನಾಟಕದ ಕಲಚೂರಿಗಳು, ಕರ್ನಾಟಕ ವಿಶ್ವ ವಿದ್ಯಾಲಯ
ಧಾರವಾಡ.೧೯೮೩

೪೩. ದೇಸಾಯಿ ಪಿ.ಬಿ. ಕನ್ನಡ ನಾಡಿನ ಶಾಸನಗಳು, ಕರ್ನಾಟಕ ವಿಶ್ವ ವಿದ್ಯಾಲಯ
ಧಾರವಾಡ.೧೯೯೭

೪೪. ಧ್ರುವರಾಜ ನಾ ಗದಗಕರ, ದೇಗುಲ ರಥಸಪ್ತಮಿ, ಪ್ರಸಾರಾಶಂಗ ಕನ್ನಡ ವಿಶ್ವ
ವಿದ್ಯಾಲಯ ಹಂಪಿ.

೪೫. ದ್ಯಾಮನಗೌಡ್ರ , ಡಂಬಳ ಮತ್ತು ಅದರ ಪರಿಸರ.(ಹಸ್ತಪ್ರತಿ)

೪೬. ನರಸಿಂಹಾಚಾರ್ಯ ಆರ್. ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು.

೪೭. ನರೇಗಲ್ ಎನ್.ಎಸ್. ಉತ್ತರ ಗದಗ ಜಿಲ್ಲೆಯ ಶಾಸನಗಳು, ರವಿರಶ್ಮಿ ಪ್ರಕಾಶನ ಗದಗ-೨೦೧೦

೪೮. ನಂಜುಂಡ ಸ್ವಾಮಿ ಎ.ಎಸ್. ಹೊಯ್ಸಳರ ಇತಿಹಾಸ. ೧೯೮೮

೪೯. ನಾಗರಾಜಯ್ಯ ಪ, ಅಜಿತಪುರಾಣತಿಲಕಂ

೫೦. ನಾಗಯ್ಯ ಜೆ.ಎಂ. ಆರನೆ ವಿಕ್ರಮಾದಿತ್ಯನ ಶಾಸನಗಳು:ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡಮಿ, ಶ್ರೀ ನಾಗಾನೂರು ರುದ್ರಾಕ್ಷಿ ಮಠ, ಬೆಳಗಾವಿ.೧೯೯೨

೫೧. ನಾಗಯ್ಯ ಜೆ.ಎಂ, ಕರ್ನಾಟಕದ ಶಿಲ್ಪಗಳಲ್ಲಿ ಶಿವಶರಣರು, ಶ್ರೀ ಚನ್ನಬಸವೇಶ್ವರ ಸಂಸ್ಥಾನ, ಹಿರೇಮಠ, ಸುಕ್ಷೇತ್ರ ಹಾರಕೋಡ. ೨೦೦೪

೫೨. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ,ಲೋಹಿಯ ಪ್ರಕಾಶನ, ಬಳ್ಳಾರಿ.೨೦೦೨

೫೩. ನಾಗರಾಜ್ ಎಂ.ಜಿ. ಶಾಶನ ಶಿಲ್ಪಗಳು, ಶ್ರೀ ಗೌರಿಗಂಗಾ ಪ್ರಕಾಶನ, ಬೆಂಗಳೂರು ೧೯೯೦

೫೪. ನಾಗರಾಜಯ್ಯ ಹಂಪ, ಯಾಪನಿಯ ಸಂಘ, ಪ್ರಸಾರಾ ಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.೧೯೯೯

೫೫. ನೇಗಿನಹಾಳ, ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೮೩

೫೬. ಪರಮಶಿವಮೂರ್ತಿ ಡಿ.ವಿ. ಕನ್ನಡ ಶಾಸನಶಿಲ್ಪ, ಪ್ರಸಾರಾ ಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.೧೯೯೯

೫೭. ಪತ್ತಾರ ಶಿಲಾಕಾಂತ್, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾ ಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.೨೦೦೦

೫೮. ಪಂಚಮುಖಿ ಆರ್.ಎಸ್.ಕರ್ನಾಟಕದ ಅರಸು ಮನೆತನಗಳು, ಧಾರವಾಡ,೧೯೪೬

೫೯. ಪಾಟೀಲ ಬೋಜರಾಜ, ನಾಗರಖಂಡ-೭೦, ಮಲೆನಾಡ ವೀರಶೈವ ಅಧ್ಯಯನ ಅಕಾಡಮಿ, ಆನಂದಪುರ,೧೯೯೩

೬೦. ಪುಟ್ಟಪ್ಪ ಕೆ.ವಿ. ಕನ್ನಡ ಕೈಪಿಡಿ ಸಂ-೧ ,೧೯೮೮

೬೧. ಬಸವರಾಜ ಕಲ್ಗುಡಿ, ಮಹಾಸತಿ ಆಚರಣೆ ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೮೫

೬೨. ಬಾಲಸುಬ್ರಮಣ್ಯ ಮತ್ತು ಇತರರು, ಕರ್ನಾಟಕ ದೇವಾಲಯ ಕೋಶ ಗದಗ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೬೩.ಮಂಜುನಾಥ ಎಂ.ಜಿ. ಮತ್ತು ದೇವರಾಜಸ್ವಾಮಿ ಜಿ.ಕೆ. ಕನ್ನಡ ಲಿಪಿಶಾಸ್ತ್ರ, ೧೯೯೯

೬೪. ಮೇವುಂಡಿ ಮಲ್ಲಾರಿ ಕನ್ನಡ ನಾಡಿನ ಶಾಸನ ಕವಿಗಳು, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೭೪

೬೫. ರಮೇಶ ಕೆ.ವಿ. ಕರ್ನಾಟಕ ಶಾಸನ ಸಮೀಕ್ಷೆ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೧

೬೬.ರವೀಂದ್ರನಾಥ ಕೆ. ಕನ್ನಡ ದಾಖಲು ಸಾಹಿತ್ಯ . ೨೦೦೦

೬೭.ರಾಜಶೇಖರ ಸಿಂದಗಿ, ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್ , ಧಾರವಾಡ,೧೯೮೮

೬೮.ರಾಘವೇಂದ್ರ ಕೃಷ್ಣ ಅಪರಂಜಿ, ಪೇಠಾಆಲೂರ ಗ್ರಾಮದ ಇತಿಹಾಸ,೨೦೦೪

೬೯.ರಿತ್ತಿ ಶ್ರೀನಿವಾಸ, ಮುಳಗುಂದನಾಡು, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೬೯

೭೦. ರಿತ್ತಿ ಶ್ರೀನಿವಾಸ, (ಸಂ) ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ನಿರ್ದೇಶನಾಲಯ, ಮೈಸೂರು.೨೦೦೦

೭೧. ಲಕ್ಷ್ಮಣ ತೆಲಗಾವಿ, ಮೌರ್ಯ ಮತ್ತು ಶಾತವಾಹನಯುಗ, ೨೦೦೪

೭೨. ವಿದ್ಯಾರತ್ನ ಮತ್ತು ಆರ್.ಎಸ್. ಪಂಚಮುಖಿ,ಕರ್ನಾಟಕದ ಶಾಸನಗಳು೧೯೮೧

೭೩. ವಸು ಎಂ.ವಿ. ದಕ್ಷಿಣ ಕರ್ನಾಟಕದ ಅರಸು ಮನೆತನಗಳು.೨೦೦೧

೭೪. ಶಿವತಾರಕ್ ಕೆ.ಬಿ. ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ ಹಂಪಿ.೧೯೯೧

೭೫. ಶೆಟ್ಟರ ಷ.ಸಾವಿಗೆ ಆಹ್ವಾನ, ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು,೨೦೦೪

೭೬.ಶೇಷಶಾಸ್ತ್ರಿ ಆರ್. ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು. ೧೯೮೨

೭೭.ಶೇಠ ಬಿ.ಎಸ್.ಕರ್ನಾಟಕದಲ್ಲಿ ಸತಿಪದ್ಧತಿ,ವೀರಶೈವ ಅಧ್ಯಯನ ಅಕಾಡಮಿ, ಶ್ರೀನಾಗಾನೂರು ರುದ್ರಾಕ್ಷಿಮಠ, ಬೆಳಗಾವಿ.೧೯೯೧

೭೮. ಧನವಂತ ಹಾಜವಗೋಳ, ಮುಳುಗುಂದನಾಡು ಒಂದು ಅಧ್ಯಯನ, ಮಹಾದೇವಿ ಪ್ರಕಾಶನ, ಧಾರವಾಡ.೨೦೦೪

೭೯.ಹನುಮಾಕ್ಷಿ ಗೋಗಿ ಮತ್ತು ರಾಠೋಡ ಪಿ.ಕೆ. ಡಂಬಳ ಸಾಂಸ್ಕೃತಿಕ ಅಧ್ಯಯನ,ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ.೨೦೦೮.

೮೦. ಹರಿದಾಸ ಎಂ.ಎಚ್, ವೀರನಾರಾಯಣ ದೇವಾಸ್ಥಾನ, ೨೦೦೬

೮೧. ಹರಿದಾಸ ಎಂ.ಎಚ್, ತ್ರಿಕೂಟೇಶ್ವರ ದೇವಾಸ್ಥಾನ, ೨೦೦೬

೮೨. ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು. ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೮೬

೮೩. ಹಿರೇಮಠ ಬಿ.ಆರ್. ವೀರಗಲ್ಲಗಳು, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ.೧೯೭೬

೮೪. ಹಿರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ. ಕನ್ನಡ ಶಾಸನ ಸಂಪದ ಧಾರವಾಡ.೧೯೭೪

೮೫. ಹೊನವಾಡದ, ರೋಣತಾಲೂಕಿನ ಶಾಸನಗಳು.೧೯೮೬ (ಅಪ್ರಕಟಿತ)

೮೬.ಶ್ರೀನಿವಾಸ ಪಾಡಿಗಾರ, ಭಾರತೀಯ ಇತಿಹಾಸದ ಶಾಸನ ಆಕರಗಳು.೨೦೦೪

೮೭. ಷೇಕ್ ಅಲಿ ಬಿ. ಮತ್ತು ಸುರೇಂದ್ರ ರಾವ್ ಬಿ. ಕರ್ನಾಟಕ ಚರಿತ್ರೆ ಸಂಪುಟಗಳು

IV.ಅಭಿನಂದನಾ ಗ್ರಂಥ

೧. ಬೆಳ್ವೊಲ, ಡಾ॥ ಆರ್.ಸಿ.ಹಿರೇಮಠರ ಅಭಿನಂದನಾಗ್ರಂಥ. ಧಾರವಾಡ.೧೯೮೨

V.ಸಂಪಾದಿತ ಗ್ರಂಥಗಳು

೧. ಅನಂತರಾಯ್ಯ ಎನ್. ಪಂಪಭಾರತ, ಕನ್ನಡ ಸಾಹಿತ್ಯ ಪರಿಷತ್,ಬೆಗಳೂರು

೨. ಕಿದಿಯೂರ ಹ.ರಾ. ನಮ್ಮಗದಗ–ಬೆಟಗೇರಿ, ಡೈರೆಕ್ಟರಿ ಪಬ್ಲಿಷರ್ಸ್,ಗದಗ.೧೯೭೫

೩.ಚುರ್ಚಿಹಾಳಮಠ ಸಿ.ಎಂ. ಮುಂಡರಗಿನಾಡ ಸ್ವತಂತ್ರ ಸಂಗ್ರಾಮ. ಗದಗ.೧೯೯೯

೪. ಸರಸಿಂಹಮೂರ್ತಿ ಎಚ್.ವಿ. ಗಣೇಶದರ್ಶನ, ಶಿಲಾದೇಗುಲ ಸಮರ್ಪಣ ಮಹೋತ್ಸವ ಸಂಪುಟ, ಹಟ್ಟಿಅಂಗಡಿ ಕುಂದಾಪುರ.೧೯೯೭

೫. ಪುಟ್ಟಪ್ಪ ಕೆ.ವಿ. ಯುಗಯಾತ್ರೀ, ಭಾರತೀಯ ಸಂಸ್ಕೃತಿ, ಸಂ ೧, ಮೈಸೂರು,೧೯೭೦

೬. ಮಲ್ಲಾಪುರ ಬಿ.ವಿ. ಸುದಾರ್ಣವ

VI.ಕನ್ನಡ ಪತ್ರಿಕೆಗಳು

೧.ಇತಿಹಾಸ ದರ್ಶನ ,ಕರ್ನಾಟಕ ಇತಿಹಾಸ ಅಕಾಡಮೆ, ಬೆಂಗಳೂರು

೨. ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩. ಪ್ರಬುದ್ಧ ಕರ್ನಾಟಕ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೪. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್,ಬೆಂಗಳೂರು

೫. ಕರ್ನಾಟಕಲೋಚನ, ಬಿ.ಎಂ.ಶ್ರೀ. ಪ್ರತಿಷ್ಠಾನ,ಬೆಂಗಳೂರು

VII.ನಿಘಂಟುಗಳು

೧, ಕನ್ನಡ ರತ್ನಕೋಶ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೨.ಕನ್ನಡ ನಿಘಂಟು. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೩,ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

VIII. ಇತರ ಪತ್ರಿಕೆಗಳು

೧. ಕಪ್ಪೊತ್ತಗಿರಿ ,ಸ್ಮರಣ ಸಂಚಿಕೆ, ಮುಂಡರಗಿ.

೨. ಲಕ್ಕುಂಡಿ, ಸ್ಮರಣ ಸಂಚಿಕೆ, ಲಕ್ಕುಂಡಿ.

೩.ಮೃಡದೀಪ್ತಿ, ಸ್ಮರಣ ಸಚಿಕೆ

೪.ಪ್ರಜಾವಾಣಿ ದಿನಪತ್ರಿಕೆ.

೫. ಸಂಯುಕ್ತ ಕರ್ನಾಟಕ ದಿನಪತ್ರಿಕೆ

೬. ವಿಜಯ ಕರ್ನಾಟಕ ದಿನಪತ್ರಿಕೆ.

೭. ಕೌರವ ದಿನಪತ್ರಿಕೆ



ದಾನಶಾಸನ ಡಂಬಳ



ದಾನ ಶಾಸನ ಡೋಣಿ



ದಾನಶಾಸನ ಸೊರಟೂರು



ದಾನಶಾಸನ ಲಕ್ಷ್ಮೇಶ್ವರ



ದಾನಶಾಸನ ಹೆಬ್ಬಾಳ



ದಾನಶಾಸನ ಕಪ್ಪಲಟ್ಟಿ



ದಾನಶಾಸನ ಡೋಣಿ



ವೀರಗಲ್ಲು ಮೇವುಂಡಿ



ವೀರಗಲ್ಲು ಸೊರಟೂರು



ವೀರಗಲ್ಲು ಸೊರಟೂರು



ವೀರಗಲ್ಲು ಎಲೆಶಿರೂರು



ವೀರಗಲ್ಲು ಎಲೆಶಿರೂರು



ವೀರಗಲ್ಲು ಸೊರಟೂರು



ವೀರಗಲ್ಲು ಎಲೆಶಿರೂರು



ವೀರಗಲ್ಲು ಎಲೆಶಿರೂರು



ವೀರಗಲ್ಲು ಎಲೆಶಿರೂರು



ತುರುಗೊಳ್ ವೀರಗಲ್ಲು ಶಿರುಂಜ



ವೀರಗಲ್ಲು ಶಿರುಂಜ



ವೀರಗಲ್ಲು ಗದಗ



ವೀರಗಲ್ಲು ಗದಗ



ವೀರಗಲ್ಲು ಗದಗ



ವೀರಗಲ್ಲು ಗದಗ



ವೀರಗಲ್ಲು ಗದಗ



ವೀರಗಲ್ಲು ಲಕ್ಷ್ಮೇಶ್ವರ



ವೀರಗಲ್ಲು ಲಕ್ಷ್ಮೇಶ್ವರ



ವೀರಗಲ್ಲು ಲಕ್ಷ್ಮೇಶ್ವರ



ವೀರಗಲ್ಲು ಲಕ್ಷ್ಮೇಶ್ವರ



ವೀರಗಲ್ಲು ಲಕ್ಷ್ಮೇಶ್ವರ



ವೀರಗಲ್ಲು ಲಕ್ಷ್ಮೇಶ್ವರ



ಹುಲಿಬೇಟೆ ಕಲ್ಲು  ಕಲಕೇರಿ



ಹುಲಿಬೇಟೆ ಕಲ್ಲು  ಡೋಣಿ



ಮಾಸ್ತಿಕಲ್ಲು ಕಲಕೇರಿ



ಗೋಸಾಸಕಲ್ಲು ಸೊರಟೂರು



ದೊಡ್ಡ ಬಸವೇಶ್ವರ ದೇವಾಲಯ (ಅಜ್ಜಮೇಶ್ವರ) ಡಂಬಳ



ಹುಲಿಮುಖ ಎಲೆಶಿರೂರು



ವೀರಗಲ್ಲು ಮುಳಗುಂದ



ವೀರಗಲ್ಲು ಮುಳಗುಂದ



ಆನೆ–ಸಿಂಹ ಹೋರಾಟ ಕಲ್ಲು ಮುಳಗುಂದ



ಧ್ಯಾನಸಕ್ತ ಜಿನ ಡಂಬಳ



ಜಿನ ಡಂಬಳ



ವೀರಗಲ್ಲು



ವೀರಗಲ್ಲು ಮೇವುಂಡಿ



ಸಪ್ತಮಾತೃಕೇಯರು ಗದಗ



ಯುದ್ಧಕ್ಕೆ ಹೊರಟ ವೀರ, ಡಂಬಳ



ಯುದ್ಧಕ್ಕೆ ಹೊರಟ ವೀರ, ಡಂಬಳ



ವೀರಗಲ್ಲು ಮೇವುಂಡಿ



ವೀರಗಲ್ಲು ಮೇವುಂಡಿ



ಜಪದ ಬಾವಿ ಡಂಬಳ



ವೀರಗಲ್ಲು ಮೇವುಂಡಿ



ವೀರಗಲ್ಲು



ದಾನಶಾಸನ ಪೇಠಾಆಲೂರ



ಹೀರುಬಾಯಿ ಶಾಸನ ಮೇವುಂಡಿ



ಆತ್ಮಬಲಿ ಶಾಸನ ಲಕ್ಷ್ಮೇಶ್ವರ



ವೀರಗಲ್ಲು ಎಲೆಶಿರೂರು



ಚತುರ್ಮುಖ ಶಿವಲಿಂಗ ಬಿದರಹಳ್ಳಿ



ರಾತಣದ ಬಾವಿ ದಾನಶಾಸನ ಲಕ್ಷೇಶ್ವರ



ಧ್ಯಾನಾಸಕ್ತ ಜಿನ ಗದಗ



ಶೈವ ದಾನಶಾಸನ ಗದಗ



ಹುಲಿಮುಖದಲಿ ಜಿನ ಗದಗ



ಗೋಪುರದ ದಾನಶಾಸನ ಗದಗ



ಮಂಟಪದಲ್ಲಿ ಜಿನ ಲಕ್ಕುಂಡಿ



ಶಯನ ವಿಷ್ಣು ಲಕ್ಕುಂಡಿ



ಹೋರಾಡುತ್ತಿರುವ ವೀರರು ಲಕ್ಷ್ಮೇಶ್ವರ



ಗೋಪುರಾಕೃತಿಯ ಶಾಸನ ಲಕ್ಷ್ಮೇಶ್ವರ



ಜಟೆಯುಳ್ಳ ಮುನಿ ಲಕ್ಷ್ಮೇಶ್ವರ



ದಾನಶಾಸನ ಎಲೆಶಿರೂರು



ದಾನಶಾಸನ ಲಕ್ಷ್ಮೇಶ್ವರ

